# ಹೊಸತು

## ಒಳಗೇನಿದೆ.....




*ಚಿತ್ರಗಳು : ಕಮಲಂ ಅರಸು, ಶ್ರೀಹರಿ, ಹರಿ, ಜಿ. ಎಂ. ಬೊಮ್ನಳ್ಳಿ*

*ಮುಖಪುಟ : ಕಲೆ : ಗಿರಿಧರ ಖಾಸನೀಸ್*

*ವಿನ್ಯಾಸ : ನವಕರ್ನಾಟಕ ವಿನ್ಯಾಸ*

*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

**ದೇ**ಶದಲ್ಲಿ ಚುನಾವಣೆಯ ಸಂದರ್ಭವಾದ್ದರಿಂದ ಮತದಾರರನ್ನು ತಣಿಸಲು ಹಲವು ಕ್ರಮಗಳು ಜಾರಿಯಲ್ಲಿವೆ. ಅವುಗಳಿಂದ ಜನರು ಎಷ್ಟರಮಟ್ಟಿಗೆ ಪ್ರೇರಣೆ ಪಡೆಯುತ್ತಾರೆಂಬುದು ಕುತೂಹಲದ ವಿಷಯ. ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಎಂಬ ಹೆಸರಿನಲ್ಲಿ ನಮ್ಮ ದೇಶದಲ್ಲಿ ಕೆಲವು ಸಂಸ್ಥೆಗಳು ಸರ್ಕಾರಿ ವಲಯದಲ್ಲಿವೆ. ಅಲ್ಲಿ ತರಬೇತಿ ಪಡೆಯುವವರು ದೇಶ-ವಿದೇಶಗಳ ದೊಡ್ಡದೊಡ್ಡ ಕಂಪೆನಿಗಳಲ್ಲಿ ನೌಕರರಾಗುವಂಥವರು. ಆ ಸಂಸ್ಥೆಗಳಲ್ಲಿ ವಾರ್ಷಿಕ ಶುಲ್ಕ ಒಂದೂವರೆ ಲಕ್ಷ. ಮುರಳಿ ಮನೋಹರ ಜೋಶಿ ಅದನ್ನು ಮೂವತ್ತು ಸಾವಿರಕ್ಕಿಳಿಸಿ ಆಜ್ಞೆ ಹೊರಡಿಸಿದ್ದಾರೆ. ಅದರಿಂದ 'ಜನಸಾಮಾನ್ಯರು' ಆ ಸಂಸ್ಥೆಗಳಲ್ಲಿ ಪ್ರವೇಶ ಪಡೆಯಬಹುದೆಂದು ಅವರು ಹೇಳಿದ್ದಾರೆ. ಮೂವತ್ತು ಸಾವಿರ ಕೊಡುವ ಚೈತನ್ಯವಿರುವ 'ಜನಸಾಮಾನ್ಯರು' ನಮ್ಮಲ್ಲಿ ಯಾವ ವರ್ಗದವರೆಂದು ಊಹಿಸಬಹುದು. ಶುಲ್ಕವನ್ನು ಇಳಿಸಿರುವುದನ್ನು ನಾರಾಯಣಮೂರ್ತಿ ತೀವ್ರವಾಗಿ ವಿರೋಧಿಸಿದ್ದಾರೆ. ಅವರ ಮೂಲಮಂತ್ರ ಒಂದೇ: ಯಾವ ಉಚ್ಚ ಶಿಕ್ಷಣಕ್ಕೂ ಸರ್ಕಾರ ಹಣ ತೊಡಗಿಸಬಾರದು; ಯಾರಿಗೆ ಸಾಮರ್ಥ್ಯವಿದೆಯೋ ಅವರು ಅದನ್ನು ಪಡೆಯಲಿ! ನಾರಾಯಣಮೂರ್ತಿಯವರದು ಸಮಾಜ ವಿರೋಧಿ ನಿಲುವೆಂಬುದು ವಿವಾದಾತೀತ. ಆದರೆ ಜೋಶಿ ಉದ್ದೇಶವು ಮಹಾಸಾಧುವಾದದ್ದೇನೂ ಅಲ್ಲ. ಏಕೆಂದರೆ ಕೇಂದ್ರ ಸರ್ಕಾರವು ಈಗಾಗಲೆ ಉನ್ನತ ಶಿಕ್ಷಣಕ್ಕೆ ಧನಸಹಾಯವನ್ನು ಕಡಿಮೆಗೊಳಿಸಿದೆ. ಜೋಶಿಗೆ ಮ್ಯಾನೇಜ್‌ಮೆಂಟ್ ಇನ್‌ಸ್ಟಿಟ್ಯೂಟ್‌ಗಳಲ್ಲಿ ಮೂಗು ತೂರಿಸಲು ಅನುಕೂಲವಾಗಬೇಕು; ಅದಕ್ಕಾಗಿ ಶುಲ್ಕ ಕಡಿಮೆ ಮಾಡಿ ಸರ್ಕಾರದ ಧನಸಹಾಯ ಘೋಷಿಸಿದ್ದಾರೆ. ತನ್ನ ಕಾರ್ಯಸೂಚಿಯನ್ನು ಹೇರಿದ ನಂತರ ''ನಿಮ್ಮ ಅಗತ್ಯಗಳನ್ನು ನೀವೇ ಪೂರೈಸಿಕೊಳ್ಳಿ'' ಎಂದು ಹೇಳುವುದರಲ್ಲಿ ಸಂಶಯವಿಲ್ಲ. ವಿಶ್ವ ಬ್ಯಾಂಕ್‌ಗೆ ಅಂತಹ ಆಶ್ವಾಸನೆ ನೀಡಿ ಬಂದಿರುವ ಭೂಪ ಇವರು! ಅಂತಹ ಅದ್ಭುತ ರಾಷ್ಟ್ರೀಯ ಪ್ರಜ್ಞೆ ವಾಜಪೇಯಿ ಸರ್ಕಾರದ್ದು.

ಇಂತಹ ವಾಜಪೇಯಿಯವರ ಅನುಯಾಯಿಗಳಾಗಲು ಅನೇಕ ನಿವೃತ್ತ ಸರ್ಕಾರಿ ಅಧಿಕಾರಿಗಳು ತುದಿಗಾಲಲ್ಲಿ ನಿಂತಿದ್ದಾರೆ. ಅಧಿಕಾರಿಗಳಾಗಿ ಕಮಾಯಿಸಿದ್ದಾಯಿತು, ಈಗ ಜಾರ್ಜ್ ಫರ್ನಾಂಡಿಸ್ ಮತ್ತು ಪ್ರಮೋದ ಮಹಾಜನ್ ಜೊತೆ ಸೇರಿ ಸಹಾರಾ ಆಪ್ತಕೂಟಕ್ಕೆ ಸೇರಲು ಅವರು ಹಾತೊರೆಯುತ್ತಿದ್ದಾರೆ. ಕಾಡಿಗೆ ಹೋಗಿ ವೀರಪ್ಪನನ್ನು ಬಂಧಿಸಲು ಹೇಳಿದಾಗ ಚೆಡ್ಡಿ ಒದ್ದೆಮಾಡಿಕೊಂಡ ಸಾಂಗ್ಲಿಯಾನಾ ಈಗ ಚೆಡ್ಡಿ ಪಡೆಗೆ ಧಾವಿಸಿದ್ದಾರೆ. ಅವರನ್ನು ಹಿಂಬಾಲಿಸಲು ಎ. ರವೀಂದ್ರ ಸಿದ್ಧರಾಗುತ್ತಿದ್ದಾರೆ. ಇವರದು ಇನ್ನೂ ಹೆಚ್ಚು ಬುದ್ಧಿವಂತಿಕೆಯ ರಾಜಕೀಯ. ರಾಜಕೀಯ ಸೇರಬೇಕೆಂದು ತೀರ್ಮಾನಿಸಿದ ನಂತರ ಯಾವ ಪಕ್ಷಕ್ಕೆ ಹೋಗಿ ತೂರಿಕೊಳ್ಳಬೇಕೆಂದು ನಿರ್ಧರಿಸುತ್ತಾರಂತೆ ಈ ಮಹಾನುಭಾವರು! ಅಂದರೆ, ಸೈದ್ಧಾಂತಿಕವಾಗಿ ಅವರದೇನೂ ನಿಲುವುಗಳಿಲ್ಲ ಹಾಗೂ ಜನರ ಬಳಿ ಹೋಗುವ ಸಂಭವವೂ ಇಲ್ಲ. ತಮ್ಮ ಪಾಲಿಗೆ ಬರುವ ರೊಟ್ಟಿಗೆ ಯಾವ ಪಕ್ಕದಲ್ಲಿ ತುಪ್ಪ ಸವರಿದೆ ಎಂಬುದನ್ನು ಗುರುತಿಸಿಕೊಳ್ಳುವುದಷ್ಟೇ ಅವರ ರಾಜಕೀಯ ಆಕಾಂಕ್ಷೆ. ನಮ್ಮ ದೇಶದ ಇಂತಹ ಅಯೋಗ್ಯ ರಾಜಕೀಯ ಬೆಳವಣಿಗೆಗೆ ವಾಜಪೇಯಿ ಪಕ್ಷದ ಕೊಡುಗೆ ಎಷ್ಟು ಮತ್ತು ಸೋನಿಯಾ ತಾಯಿಯ ಕೊಡುಗೆ ಎಷ್ಟು ಎಂಬುದನ್ನು ನಾಗರಿಕರು ವಿಮರ್ಶಿಸಿಕೊಳ್ಳಬೇಕಾದ್ದು ಅಗತ್ಯ. ಸಿದ್ಧಾಂತ, ರಾಷ್ಟ್ರೀಯತೆ, ಧರ್ಮ, ಇತ್ಯಾದಿಗಳಿಗೆ ''ಬದ್ಧವಾದ'' ವಾಜಪೇಯಿ ಪಕ್ಷದಲ್ಲಿ ನಿನ್ನೆಯ ಧೂರ್ತ ಕಲ್ಯಾಣ ಸಿಂಗ್ ಇಂದು ಅವಧೂತನೆನಿಸಿಕೊಂಡಿದ್ದಾನೆ. ಅಷ್ಟು ಚೆನ್ನಾಗಿದೆ ವೆಂಕಯ್ಯ ನಾಯ್ಡು ಮೌಲ್ಯಪ್ರಜ್ಞೆ. ಅದಕ್ಕೇ ಅವರು ಮಾತನಾಡಲು ಬಾಯಿ ಬಿಡಬೇಕಾದಾಗೆಲ್ಲಾ ಮನಸ್ಸಿನಲ್ಲಿ ಏನೋ ಕಶ್ಮಲ ತುಂಬಿಕೊಂಡವರಂತೆ ಮುಖ ಮಾಡಿಕೊಳ್ಳುತ್ತಾರೆಂದು ಕಾಣುತ್ತದೆ. ಅದು ಹೇಗೇ ಇರಲಿ, ನಿವೃತ್ತ ನ್ಯಾಯಾಧೀಶರು ಮಂತ್ರಿಗಳು ಹಾಗೂ ರಾಜ್ಯಪಾಲರು ಆಗಬಹುದಾದರೆ ಮತ್ತು ನಿವೃತ್ತ ಕಂಟ್ರೋಲರ್ ಅಂಡ್ ಆಡಿಟರ್ ಜನರಲ್ ಒಬ್ಬರು ಅದ್ವಾನಿ ಪಕ್ಷ ಸೇರಿ ಕರ್ನಾಟಕದ ರಾಜ್ಯಪಾಲರಾಗಬಹುದಾದರೆ ಚಿಕ್ಕ ಮೀನುಗಳಾದ ಸಾಂಗ್ಲಿಯಾನಾ-ರವೀಂದ್ರ ಹುಲ್ಲುಗಾವಲುಗಳನ್ನೇಕೆ ಅರಸಿ ಹೋಗಬಾರದು! ಜೈ ಭಾರತ ಪ್ರಕಾಶ ಎನ್ನೋಣವೆ ?

*(೭ನೇ ಪುಟಕ್ಕೆ)*




ಸಂಪುಟ-೫ ಸಂಚಿಕೆ - ೮ ಮಾರ್ಚ್ ೨೦೦೪

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್: ೨೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**

# ಪ್ರಜಾಪ್ರಭುತ್ವದ ಮೋರೆ ಇದೇಯೇನು ?

**ಸಂಪಾದಕೀಯ**

**ಕ**ಳೆದ ವರ್ಷ ಅಮೆರಿಕಾ ಮತ್ತು ಬ್ರಿಟನ್ ದುರುಳ ಗೂಳಿಗಳಂತೆ ಇರಾಕಿನ ಮೇಲೆ ಎರಗಿದಾಗ ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಕಡಿಮೆಯೆಂದರೆ ರಾಜಿನಾಮೆ ನೀಡಿ ಬುಷ್-ಬ್ಲೇರ್ ಪುಂಡಾಟಿಕೆಯ ವಿರುದ್ಧ ಪ್ರತಿಭಟಿಸಬೇಕಾಗಿತ್ತು. ಆದರೆ ಕೋಫಿ ಅನ್ನಾನ್ ಮೋರೆ ಜೋಬದ್ರತನದ ಪ್ರತೀಕ; ಅದಕ್ಕೆ ತಕ್ಕನಾದ ಮನಸ್ಸು. ಆದ್ದರಿಂದ ಅಲ್ಲೇ ಉಳಿದುಕೊಂಡು ಯುದ್ಧಕೋರರ ಭಂಟನಾಗಿ ವರ್ತಿಸಿದ್ದು ಈಗ ಇತಿಹಾಸ. ಇದೇ ಜನವರಿಯಲ್ಲಿ ದಾವೋಸ್‌ನಲ್ಲಿ (ಅದನ್ನು 'ದಾವೋ' ಎಂದು ಉಚ್ಚರಿಸುತ್ತಾರೆ) ವಿಶ್ವ ವ್ಯಾಪಾರ ಸಂಸ್ಥೆಯ ಸಭೆ ನಡೆದಾಗ ಅನ್ನಾನ್ ಅಲ್ಲಿಗೆ ಧಾವಿಸಿ ಹಲವು ದೇಶಗಳ ಸಚಿವರನ್ನುದ್ದೇಶಿಸಿ ಮಾತನಾಡಿದ ಪ್ರಸಂಗ ಜರುಗಿತು. ಆಗ ಇರಾಕಿನ ಪ್ರಸಕ್ತ ಸನ್ನಿವೇಶವನ್ನು ಕುರಿತು ಸಹ ಒಂದು ವಿಶ್ಲೇಷಣೆ ನೀಡಲಾಯಿತು. ವಿಶ್ವಸಂಸ್ಥೆಯ ಪಾತ್ರ ಕ್ರಮೇಣ ಕುಗ್ಗುತ್ತಿರುವುದೆಂದು ಹೇಳಿ ಅನ್ನಾನ್ ನುಡಿದಿದ್ದು ಇದು: ''ವಿಶ್ವಸಂಸ್ಥೆಯ ಶಾಸನಪತ್ರ (ಚಾರ್ಟರ್) ತನ್ನ ಕ್ಷಮತೆಯನ್ನು ಕಳೆದುಕೊಳ್ಳುತ್ತಿದೆ ಮತ್ತು ಸಾಮೂಹಿಕ ಭದ್ರತೆಯೆಂಬ ಕಲ್ಪನೆಗೆ ಮುಳುವು ಉಂಟಾಗುತ್ತಿದೆ.'' ಜಾಗತೀಕರಣದ ಸಂದರ್ಭದಲ್ಲಿ ವಿಶ್ವದ ವ್ಯವಸ್ಥೆಗೆ ಚ್ಯುತಿಯಂಟಾದರೆ ಅಪಾರ ಹಾನಿ ಸಂಭವಿಸುತ್ತದೆಂದು ಎಚ್ಚರಿಸಿದ ಅನ್ನಾನ್ ಇರಾಕಿನ ಆಕ್ರಮಣದ ಬಗ್ಗೆ ವಿಶೇಷವಾಗಿ ಗಮನವನ್ನೇನೂ ಹರಿಸಲಿಲ್ಲ. ಅದು ''ವಿಶ್ವದ ವ್ಯವಸ್ಥೆ''ಗೆ ನೀಡಲಾದ ಬಲವಾದ ಪೆಟ್ಟೆಂದು ಅವರಿಗೆ ಅನಿಸಿಲ್ಲದಿರುವುದೊಂದು ದುರಂತ. ''ವ್ಯವಸ್ಥೆ''ಯು ಕುಸಿಯದಿರಲು ಆಕ್ರಮಣಕ್ಕೆ ಬುದ್ಧಿವಂತಿಕೆಯ ಸಮರ್ಥನೆ ನೀಡುವುದು ಅವರ ವ್ಯವಹಾರ ಚಾತುರ್ಯ.

ಇರಾಕಿನಲ್ಲಿ ಆಕ್ರಮಣಕಾರರು ಹಾಗೂ ಅವರಿಂದ ನೇಮಕಗೊಂಡ ಅಧಿಕಾರ ವರ್ಗ ಸಾರ್ವಜನಿಕ ಕಲ್ಯಾಣಕ್ಕೆ ಕೈಗೊಂಡಿರುವ ಕ್ರಮಗಳು ಅತ್ಯಲ್ಪ. ಇರಾಕಿನ ಜನ ಈ ಜಂಟೀ ಪ್ರಭುತ್ವಕ್ಕೆ ಮಾನ್ಯತೆ ನೀಡಿಲ್ಲ; ಆದ್ದರಿಂದ ಅವರ ನಿರೀಕ್ಷೆ ಈ ಪ್ರಭುತ್ವದಿಂದ ಪೂರೈಸೀತೆಂದು ಯಾರೂ ಭಾವಿಸಿಲ್ಲ. ಇಂದಿಗೂ ಇರಾಕಿನಲ್ಲಿ ನಿರುದ್ಯೋಗ ಶೇ. ೫೦ರಷ್ಟಿದೆ, ವಿದ್ಯುಚ್ಛಕ್ತಿಯ ಉತ್ಪಾದನೆ ಯುದ್ಧದ ಮುಂಚಿನ ಮಟ್ಟವನ್ನು ತಲುಪುವ ಯಾವ ಸೂಚನೆಯೂ ಇಲ್ಲ ಮತ್ತು ಸಾರ್ವಜನಿಕ ಸುಭದ್ರತೆಯೆಂಬುದು ಮರೀಚಿಕೆಯಾಗಿಯೇ ಉಳಿದಿದೆ. ಒಂಬತ್ತು ತಿಂಗಳ ಆಡಳಿತದಲ್ಲಿ ಪ್ರಜೆಗಳ ಮೇಲಿನ ಪ್ರಭುತ್ವ ದಿನದಿಂದ ದಿನಕ್ಕೆ ಹಿಂಸೆ, ಕ್ರೌರ್ಯ ಮತ್ತು ಸಂಪತ್ತಿನ ಲೂಟಿಯಾಗಿ ಮೆರೆಯುತ್ತಿದೆ. ''ಅಯ್ಯೋ, ಅಲ್ಲಿ ಹಿಂಸೆ ತಾಂಡವವಾಡುತ್ತಿದೆ'' ಎಂದು ಸಾಂತ್ವನ ವ್ಯಕ್ತಪಡಿಸಿದ ಭಾರತದ ವಿದೇಶಾಂಗ ಮಂತ್ರಿ ಆಕ್ರಮಣಕಾರರನ್ನು ಖಂಡಿಸಿಲ್ಲ, ಅವರನ್ನು ಇರಾಕಿನಿಂದ ಕಾಲ್ತೆಗೆಯಬೇಕೆಂದು ಆಗ್ರಹ ಪಡಿಸಲಿಲ್ಲ. ಪ್ರಜಾಪ್ರಭುತ್ವದ ಬಗ್ಗೆ ಉದ್ದುದ್ದ ಮಾತನಾಡುವ ವಿಶ್ವದ ಅನೇಕ ರಾಜಕೀಯ ನಾಯಕರು ಇರಾಕಿನ ಜನತೆಯ ಪ್ರಜಾಪ್ರಭುತ್ವದ ಬಗ್ಗೆ ತಾಳಿರುವ ನಿಲುವಿನ ವ್ಯಥೆಯ ಕಥೆ ಇದು.

ಆ ದೇಶದ ಪ್ರಜಾಪ್ರಭುತ್ವ ಒತ್ತಟ್ಟಿಗಿರಲಿ, ಸ್ವತಃ ಅಮೆರಿಕಾ ಮತ್ತು ಬ್ರಿಟನ್‌ಗಳಲ್ಲಿ ಇದೇ ಪ್ರಜಾಪ್ರಭುತ್ವ ರಾರಾಜಿಸುತ್ತಿರುವ ಪರಿ ಯಾವುದು ? ಇನ್ನೇನು ಬ್ಲೇರ್ ಸರ್ಕಾರಕ್ಕೆ ಸಂಚಕಾರ ಬಂದಿತೆಂಬ ವಾತಾವರಣವನ್ನು ನಿರ್ಮಿಸಿ ಆಮೇಲೆ ಎಲ್ಲವನ್ನೂ ಠುಸ್ಸೆನಿಸಿದ್ದು ಲಂಡನ್ನಿನ ರಾಜಕೀಯ ಧೀಮಂತಿಕೆ. ಶಿಕ್ಷಣವನ್ನು ದುಬಾರಿಗೊಳಿಸುವ ಶಾಸನವನ್ನು ಪಾರ್ಲಿಮೆಂಟ್ ತಿರಸ್ಕರಿಸುತ್ತದೆಂದು ಹುಯಿಲೆಬ್ಬಿಸಿದ್ದರು. ಆದರೆ ಮಂತ್ರವಾದಿ ಬ್ಲೇರ್ ತನ್ನ ಸದಸ್ಯರ ತಲೆಯ ಮೇಲೆ ತಣ್ಣೀರು ಸುರಿದು ಅವರನ್ನು ಬುಟ್ಟಿಗೆ ಹಾಕಿಕೊಂಡ. ಜೇಬುಗಳಿಗೂ ಒಂದಷ್ಟು ಏನನ್ನೋ ಸುರಿದಿರಬೇಕೆಂಬ ಊಹಾಪೋಹಗಳು ಬಹಳಷ್ಟಿವೆ. ಇದರ ನಂತರ ಬಂದಿದ್ದು ಹಟನ್ ಆಯೋಗದ ವರದಿ. ಏನೋ ದೊಡ್ಡ ಗುಮ್ಮ ಬರುತ್ತಾನೆಂದೂ, ಬ್ಲೇರ್‌ನನ್ನು ಅವನ ಗೋಣಿಚೀಲದಲ್ಲಿ ತುಂಬಿಕೊಂಡು ಹೋಗಿಬಿಡುತ್ತಾನೆಂದೂ ಸತತವಾಗಿ ಹತ್ತು ದಿನ ಹುಯಿಲಿಟ್ಟು ನಂತರ ಬ್ರಿಟನ್ನಿನ ಪಾರ್ಲಿಮೆಂಟ್ ಶಾಂತಸಾಗರವಾಗಿ ಪರಿಣಮಿಸಿತು. ಇರಾಕಿನ ಮೇಲೆ ಯುದ್ಧ ಹೂಡುವ ಮುಂಚೆ ''೪೫ ನಿಮಿಷಗಳಲ್ಲಿ ಇರಾಕಿನಿಂದ ಬ್ರಿಟನ್ನಿನ ಮೇಲೆ ಮಾರಕ ದಾಳಿ ನಡೆಸುವಷ್ಟು ಮಾರಕಾಸ್ತ್ರಗಳನ್ನು ಸದ್ದಾಂ ಹುಸೇನ್ ಹೊಂದಿದ್ದನೆ, ಇಲ್ಲವೆ'' ಎಂಬುದನ್ನು ಕುರಿತಂತೆ ಬ್ರಿಟನ್ನಿನ ಬೇಹುಗಾರಿಕೆಯು ನೀಡಿದ್ದ ಅಂಕಿ-ಅಂಶಗಳು ಯಥಾರ್ಥವೇ ಎಂಬುದರ ಬಗ್ಗೆ ಹಟನ್ ಪುಟಗಟ್ಟಲೆ ವರದಿ ನೀಡಿದ್ದರೂ ''ನಮ್ಮ ದೇಶ (ಬ್ರಿಟನ್) ಮಾಡಿದ್ದು ಅತ್ಯಂತ ಹೇಸಿಗೆಯ ಕೃತ್ಯ, ಈ ಕೂಡಲೆ ನಾವು ಆ (ಇರಾಕ್) ದೇಶದಿಂದ ಹೊರಬರಬೇಕು'' ಎಂದು ಹೇಳಲಿಲ್ಲ. ಕೆಲಸಕ್ಕೆ ಬಾರದ ಆ ಹಟನ್ ವರದಿಯನ್ನು ಒಂದು ತಿಂಗಳ ಕಾಲ ಗಂಭೀರವಾಗಿ ಚರ್ಚಿಸಿದಂತೆ ಮಾಡಿ, ಇರಾಕಿನ ಲೂಟಿಯನ್ನು ಮುಂದುವರಿಸುವುದು ಬ್ರಿಟನ್ನಿನ ಮಾದರಿ ಪ್ರಜಾಪ್ರಭುತ್ವ! ಆ ದೇಶದ ಪಾರ್ಲಿಮೆಂಟ್ ಸದಸ್ಯರಿಗೆ ಕಡೆಗೂ ಆಕರ್ಷಣೆ ಇರುವುದು ಪರದೇಶದ ತೈಲ ಸಂಪತ್ತಿನಲ್ಲಿ. ಅದೊಂದು ಮಾತನ್ನು ಆಡದೆ ಏನೇನೋ ಬಡಬಡಿಸುವ ನಾಟಕವನ್ನಾಡಿ ಪ್ರಜಾಪ್ರಭುತ್ವದ ಹಿರಿಮೆಯನ್ನು ಸಾರಿಹೇಳುವುದು, ಇತರರು ತಲೆದೂಗುವುದು, ಇದೊಂದು ಸಮಕಾಲೀನ ಇತಿಹಾಸದ ಅಸಹ್ಯವಾದ ಪ್ರಹಸನ. ಅದಕ್ಕಾಗಿ ನಮ್ಮ ಮಾಧ್ಯಮಗಳಲ್ಲಿ ಕಾಲ, ಶ್ರಮ ಮತ್ತು ಹಣ ಅದೆಷ್ಟು ವ್ಯರ್ಥವಾಗುತ್ತಿದೆ! ''ಇರಾಕಿನಲ್ಲಿ ಮಾರಕಾಸ್ತ್ರಗಳಿರಲಿಲ್ಲ, ಹಾಗಿದ್ದರೂ ನಾವು ಆಕ್ರಮಣ ಮಾಡಿದೆವು, ಅದಕ್ಕಾಗಿ ಇರಾಕಿನ ಕ್ಷಮೆ ಕೇಳುತ್ತೇವೆ, ಅಲ್ಲಿಂದ ನಮ್ಮ ಸೈನ್ಯವನ್ನು ಕೂಡಲೆ ಹಿಂದೆಗೆದುಕೊಳ್ಳುತ್ತೇವೆ'' ಎಂದು ಬ್ಲೇರ್ ಮತ್ತು ಬ್ರಿಟನ್ನಿನ ಪಾರ್ಲಿಮೆಂಟ್ ಹೇಳಿದ್ದರೆ ಅದು ನಿಜವಾಗಿಯೂ ಎರಡೂ ದೇಶಗಳಲ್ಲಿ ಪ್ರಜಾಪ್ರಭುತ್ವಕ್ಕೆ ಜೀವ ತುಂಬಿದಂತಾಗುತ್ತಿತ್ತು.

ಬ್ರಿಟನ್ನಿಗಿಂತಲೂ ಹೊಲಸಾದ ಪ್ರಜಾಪ್ರಭುತ್ವ ಅಮೆರಿಕಾದ್ದು. ಅಲ್ಲಿನ ಅಧ್ಯಕ್ಷನು ಚುನಾಯಿತನಾದದ್ದೇ ಒಂದು ಕೃತ್ರಿಮದಿಂದ. ಕೆನಡಾದ ಪ್ರಧಾನಿ ಒಮ್ಮೆ ಬಹಿರಂಗವಾಗಿ ಹೇಳಿದ್ದಂತೆ ''ಜಾರ್ಜ್ ಬುಷ್ ಕಾನೂನಿನ ಮರ್ಮದಿಂದ ಅಮೆರಿಕಾದ ಅಧ್ಯಕ್ಷರಾಗಿದ್ದಾರೆ.'' ಆ ಅಧ್ಯಕ್ಷನ ಸೇವೆಯಲ್ಲಿರುವ ಒಬ್ಬ ವ್ಯಕ್ತಿ ಡೇವಿಡ್ ಕೇ. ಅಮೆರಿಕಾದ ಕೇಂದ್ರೀಯ ಬೇಹುಗಾರಿಕಾ ಸಂಸ್ಥೆಯ ಉನ್ನತಾಧಿಕಾರಿ ಈತ. ಇರಾಕಿನಲ್ಲಿ ಮಾರಕಾಸ್ತ್ರಗಳಿದ್ದುವೇ ಎಂಬುದರ ತನಿಖೆಗೆ ಅಮೆರಿಕಾದ

ಸರ್ಕಾರ ಈತನನ್ನು ನಿಯೋಜಿಸಿತ್ತು. ಸಮಗ್ರ ತನಿಖೆಯ ನಂತರ ಆತ ಸ್ಪಷ್ಟವಾಗಿ ಹೇಳಿದ್ದಾನೆ, ಇರಾಕಿನಲ್ಲಿ ಅಂತಹ ಯಾವ ಮಾರಕಾಸ್ತ್ರವೂ ಇರಲಿಲ್ಲವೆಂದು. ಪ್ರಜಾಪ್ರಭುತ್ವಕ್ಕೇನಾದರೂ ಆದರವಿದ್ದರೆ ಜಾರ್ಜ್ ಬುಷ್ ಮಾಡಬೇಕಾದ್ದೇನು ? ತಾನು ಇರಾಕಿನ ಮೇಲೆ ನೀಚತನದ ಆಕ್ರಮಣ ನಡೆಸಿದ್ದನ್ನು ವಿಶ್ವದ ಮುಂದೆ ಒಪ್ಪಿಕೊಂಡು ಕೂಡಲೆ ಆ ದೇಶದಿಂದ ನಿರ್ಗಮಿಸುವುದು. ಆದರೆ ಆತ ಮಾಡುವುದೇನು ? ''ಕೇಂದ್ರ ಬೇಹುಗಾರಿಕಾ ಸಂಸ್ಥೆ ದಕ್ಷತೆಯಿಂದ ಕೆಲಸ ಮಾಡಲಿಲ್ಲ'' ಎಂದು ಹೇಳುವುದು! ಅದರಿಂದ ಇರಾಕಿನ ಜನಕ್ಕೇನು ಪ್ರಯೋಜನ? ದಿನದ ೨೪ ಗಂಟೆಯೂ ಇರಾಕಿನಿಂದ ಸಾಗಿಸಲಾಗುತ್ತಿರುವ ತೈಲದ ಹೊಳೆ ಏನಾದರೂ ಅದರಿಂದ ನಿಂತಿತೆ? ಈ ಪ್ರಶ್ನೆಯನ್ನೇ ಎತ್ತದೆ ನಮ್ಮ ಮಾಧ್ಯಮಗಳು ಅಮೆರಿಕಾದ ''ನೀತಿ'' ಮತ್ತು ''ಪ್ರಜಾಪ್ರಭುತ್ವ'' ಕುರಿತು ನಿರರ್ಗಳವಾಗಿ ಚರ್ಚೆ ನಡೆಸುತ್ತವೆ. ಅಮೆರಿಕಾದ ಇಂದಿನ ಅಧ್ಯಕ್ಷನಿಗೆ ಸವಾಲೆಸೆಯಲು ಸಿದ್ಧನಾಗುತ್ತಿರುವ ಆ ದೇಶದ ಕತ್ತೆ ಪಕ್ಷದ ನಿರೀಕ್ಷಿತ ಅಭ್ಯರ್ಥಿಯ ಟೀಕೆಯಲ್ಲಿ ಮೂಲಭೂತ ಅಂಶಗಳ ಪ್ರಸ್ತಾಪವೇ ಇಲ್ಲ. ಆತನ ಆಗ್ರಹ ಇಷ್ಟೆ: ''ಸಿ.ಐ.ಎ.ಯ ಮುಖ್ಯಸ್ಥನನ್ನು ಕೂಡಲೆ ಬದಲಾಯಿಸಿ.''

ವಿಶ್ವದ ಮಾರುಕಟ್ಟೆಯಲ್ಲಿ ತಮ್ಮ ಬಂಡವಾಳಕ್ಕೆ ಅತಿ ಹೆಚ್ಚಿನ ಲಾಭ ದೊರಕಿಸಿಕೊಳ್ಳುವ ಏಕಮೇವ ಉದ್ದೇಶ ಹೊಂದಿರುವ ಬ್ರಿಟನ್ ಮತ್ತು ಅಮೆರಿಕಾಗಳು ಪ್ರಜಾಪ್ರಭುತ್ವವನ್ನು ವ್ಯಾಖ್ಯಾನಿಸುವುದು ಇಂತಹ ನಿಟ್ಟಿನಿಂದ. ಇದು ಬಂಡವಾಳದ ಪ್ರಜಾಪ್ರಭುತ್ವ ಅಷ್ಟೆ. ಜನತೆಯ ಪ್ರಜಾಪ್ರಭುತ್ವದ ಲಕ್ಷಣಗಳು ಮತ್ತು ಆಕಾಂಕ್ಷೆಗಳೇ ಬೇರೆ. ''ಭಾರತ ಪ್ರಕಾಶಿಸುತ್ತಿದೆ'' ಎಂಬುದನ್ನು ನಮ್ಮ ದೇಶದ ಜನರಿಗೆ ತಿಳಿಸಿಕೊಡಲು ಸಾರ್ವಜನಿಕ ಬೊಕ್ಕಸದಿಂದ ಐನೂರು ಕೋಟಿ ರೂಪಾಯಿಗಳನ್ನು ವಾಜಪೇಯಿ ಸರ್ಕಾರ ಚರಂಡಿಗೆ ಸುರಿಯುತ್ತಿರುವ ಹಿನ್ನೆಲೆಯಲ್ಲಿ ಜನತೆಯ ಪ್ರಜಾಪ್ರಭುತ್ವದ ಆಶಯವನ್ನು ಗಟ್ಟಿಗೊಳಿಸಿಕೊಳ್ಳಬೇಕಾದ್ದು ನಮ್ಮ ದೇಶದ ತುರ್ತು ಅವಶ್ಯಕತೆ. ಶೃಂಗೇರಿ ಮಠದ ಮುಖ್ಯಸ್ಥರಾಗಿ ಹಿಂದೆ ನರಸಿಂಹ ಭಾರತಿಯವರು ಇದ್ದಾಗ ಶಾರದಾದೇವಿಯ ಮುಂದೆ ಇರಿಸಲಾಗುತ್ತಿದ್ದ ನಂದಾದೀಪ ಎಷ್ಟು ಪೇಲವವಾಗಿದ್ದಿತೆಂದು ಸೂಚಿಸಲು ಶಿಷ್ಯರಿಗೆ ಹೇಳುತ್ತಿದ್ದರಂತೆ: ''ಅಯ್ಯಾ, ಒಂದು ದೀಪ ತೆಗೆದುಕೊಂಡು ಬಾ, ಈ ನಂದಾದೀಪ ಉರಿಯುತ್ತಿದೆಯೋ ಇಲ್ಲವೋ ನೋಡೋಣ,'' ಎಂದು. ವಾಜಪೇಯಿಯವರದು ಅಂತಹ ದಿವ್ಯಪ್ರಕಾಶ! ಅದು ಕಣ್ಣಿಗೆ ಕಾಣದಷ್ಟು ಮಂಕಾಗಿದೆ. ಆದ್ದರಿಂದ ಅದು ಪ್ರಕಾಶಿಸುತ್ತಿದೆ ಎಂದು ತಿಳಿಸಲು ೫೦೦ ಕೋಟಿ ಸುರಿಯಬೇಕು; ಆಗ ಕಾಗದದ ಮೇಲೆ ಅದು ಪ್ರಕಾಶಿಸುತ್ತದೆ. ಇಂತಹ ಭ್ರಾಮಕ ಪ್ರಕಾಶದ ಬೆನ್ನು ಹತ್ತುತ್ತೇವೋ ಅಥವಾ ಜನತಾ ಪ್ರಜಾಪ್ರಭುತ್ವವನ್ನು ಗುಲಗಂಜಿಯ ಪ್ರಮಾಣದಿಂದ ಗೋಲಿಯ ಪ್ರಮಾಣಕ್ಕೆ, ಆಮೇಲೆ ಸಾಲಿಗ್ರಾಮದ ಪ್ರಮಾಣಕ್ಕೆ ಹೆಚ್ಚಿಸಿಕೊಳ್ಳುತ್ತಾ ಹೋಗುತ್ತೇವೋ ಎಂಬುದು ಇಂದು ನಮ್ಮ ಮುಂದಿರುವ ಮಹತ್ವದ ಪ್ರಶ್ನೆ.

## ಸಂಪೂರ್ಣ ನಿಶ್ಶಸ್ತ್ರೀಕರಣವೇ ಪರಿಹಾರ

**ಪಾ**ಕಿಸ್ತಾನದ ಅಬ್ದುಲ್ ಖಾದಿರ್ ಖಾನ್ ಈವರೆಗೆ ಅವರ ದೇಶದಲ್ಲಿ ಮಾತ್ರ ಹಿರಿಮೆಗೆ ಪಾತ್ರರಾಗಿದ್ದ ವಿಜ್ಞಾನಿ. ''ನಾನೂ ಸೇರಿದಂತೆ ಇಡೀ ದೇಶಕ್ಕೆ ಅವರೊಬ್ಬ ಹೀರೋ'' ಎಂದು ಪಾಕಿಸ್ತಾನದ ಅಧ್ಯಕ್ಷರು ಹೇಳಿದ್ದಾರೆ. ಈ 'ಹೀರೋ' ಈಚೆಗೆ ವಿಶ್ವದ ಮುಂದೆ ಒಬ್ಬ 'ವಿಲನ್' ರೂಪದಲ್ಲಿ ಚಿತ್ರಿತರಾಗುತ್ತಿದ್ದಾರೆ. ಅಮೆರಿಕಾದ ಪೊಲೀಸ್ ಅಧಿಕಾರಿಗಳು ಹಾಗೂ ಬೇಹುಗಾರಿಕೆಯ ದಳದವರು ಕೆಲದಿನಗಳವರೆಗೆ ಖಾನ್ ಅವರನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡು ತನಿಖೆಗೆ ಗುರಿಮಾಡಿದ್ದರು; ಅದೂ ಪಾಕಿಸ್ತಾನದಲ್ಲೇ. ಪಾಕಿಸ್ತಾನ ಸರ್ಕಾರದ ವರ್ಚಸ್ಸನ್ನು ಇದರಿಂದ ಹರಾಜಿಗಿಟ್ಟಂತೆ ಆಯಿತೆಂಬುದರಲ್ಲಿ ಸಂಶಯವಿಲ್ಲ. ವಾಜಪೇಯಿ ಸರ್ಕಾರವು ಅಮೆರಿಕಾದ ಪೊಲೀಸರಿಗೆ ದೆಹಲಿಯಲ್ಲೊಂದು ಕಚೇರಿ ಮತ್ತು ಠಾಣೆ ತೆರೆಯಲು ಅನುಮತಿ ನೀಡಿರುವುದು ಮುಂದೊಂದು ದಿನ ನಮ್ಮ ದೇಶದ ಯಾವುದೋ ವಿಜ್ಞಾನಿಗೆ ಅಲ್ಲಿ ''ಆತಿಥ್ಯ'' ದೊರೆಯುವುದಕ್ಕೆ ಕಾರಣವಾಗಬಹುದೆಂಬುದನ್ನು ಮರೆಯಬಾರದು. ಖಾದಿರ್ ಖಾನ್ ತಮ್ಮ ತಪ್ಪೊಪ್ಪಿಗೆಯನ್ನು ಪಾಕಿಸ್ತಾನದ ಅಧ್ಯಕ್ಷರಿಗೆ ನೀಡಿದ್ದಾರೆ ಮತ್ತು ಅದರಿಂದ ಅಮೆರಿಕಾದ ಅಧ್ಯಕ್ಷರು ಸಂಪ್ರೀತರಾಗಿರಲೂಬಹುದು. ನಮ್ಮ ದೇಶದಲ್ಲಿ ಇದಕ್ಕೆ ಬಹುಮಟ್ಟಿಗೆ ಏಕಪ್ರಕಾರವಾದ ಪ್ರತಿಕ್ರಿಯೆ ಬಂದಿದೆ. ಪಾಕಿಸ್ತಾನವು ನಂಬಿಕೆಗೆ ಅರ್ಹವಲ್ಲವೆಂದು ನಾವು ಮೊದಲಿನಿಂದಲೂ ಹೇಳುತ್ತಾ ಬಂದಿದ್ದೇವೆ, ಆದರೆ ಅದಕ್ಕೆ ವಿಶ್ವ ಓಗೊಡಲಿಲ್ಲ; ಈಗಲಾದರೂ ತಿಳಿಯಿತೆ ಅವರು ಎಂಥವರೆಂಬುದು, ಎನ್ನುವ ಧೋರಣೆ ಸರ್ಕಾರ ಹಾಗೂ ಮಾಧ್ಯಮಗಳಿಂದ ಬಂದಿದೆ. ಜೊತೆಗೆ 'ನಾವು ಸಭ್ಯರು, ಅವರು ಪಾತಕಿಗಳು' ಎಂದು ನೇರವಾಗಿ ಹೇಳದಿದ್ದರೂ ಅಂತಹ ಬಿಗುಮಾನದ ಭಾವನೆ ಇದ್ದಂತೆ ತೋರುತ್ತದೆ. ನಾವಾದರೆ ಬುದ್ಧನನ್ನು ನಗಿಸಿ ಅಣ್ವಸ್ತ್ರ ಮಾಡಿಕೊಂಡವರು, ಖಾದಿರ್ ಖಾನ್ ಆದರೆ ಅಪ್ರಬುದ್ಧನೆನ್ನುವ ಮಾತನ್ನು ಮೌನವಾಗಿ ಗುಣಿಗುಣಿಸುತ್ತಿದ್ದರೆ ಆಶ್ಚರ್ಯವಿಲ್ಲ.

ಈ ಇಡೀ ಪ್ರಕರಣವನ್ನು ಕೇವಲ ಕೆಲವು ತಥಾಕಥಿತ ಅಂತರರಾಷ್ಟ್ರೀಯ ನಿಯಮಾವಳಿಗಳ ದೃಷ್ಟಿಯಿಂದ ನೋಡಿದರೆ ಸಾಲದು. ಭಾರತವೂ ಅಣ್ವಸ್ತ್ರ ಹರಡುವಿಕೆಯನ್ನು ತಡೆಗಟ್ಟುವ ಒಪ್ಪಂದಕ್ಕೆ ಸಹಿ ಹಾಕಿಲ್ಲವೆಂಬುದನ್ನು ಮರೆಯದಿರೋಣ. ಕೆಲವು ವರ್ಷಗಳ ಹಿಂದೆ ಪ್ರತಿನಿತ್ಯ ''ಸಿ.ಟಿ.ಬಿ.ಟಿ.''ಗೆ ಭಾರತ ಸಹಿ ಹಾಕದಿರುವುದು ಎಷ್ಟು ಅವಶ್ಯಕ ಮತ್ತು ಸಮಂಜಸ ಎಂಬುದನ್ನು ಇಡೀ ದೇಶ ಭಾವುಕವಾಗಿ ಚರ್ಚಿಸುತ್ತಿತ್ತು. ವಿಶ್ವಸಂಸ್ಥೆಯಲ್ಲಿ ನಾವು ಅದೇ ವಾದವನ್ನು ಪ್ರಖರವಾಗಿ ಮಂಡಿಸಿದ್ದೆವು. ನಮ್ಮ ದೇಶದಂತೆ ಪಾಕಿಸ್ತಾನವೂ ಈ ಒಪ್ಪಂದಗಳಿಗೆ ಸಹಿ ಹಾಕಿಲ್ಲ. ಒಂದೇ ವ್ಯತ್ಯಾಸವೆಂದರೆ ನಮ್ಮ ದೇಶವು ಪಾಕಿಸ್ತಾನದಂತೆ ಬೇರೆ ದೇಶಗಳಿಗೆ ಅಣ್ವಸ್ತ್ರ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಈವರೆಗೆ ಬಹುಶಃ ತಿಳಿಸಿಕೊಟ್ಟಿಲ್ಲ. ಈ ಸಂದರ್ಭದಲ್ಲಿ ಉದ್ಭವಿಸುವ ಪ್ರಶ್ನೆ ಇದು: ಯಾರೋ ಹೇಳಿಕೊಡದಿದ್ದರೆ ಸ್ವತಃ ಯಾವ ದೇಶದಲ್ಲೂ ಈ ಜ್ಞಾನವನ್ನು ಪಡೆಯಲು ಶಕ್ಯವಿಲ್ಲವೆ? ಇಲ್ಲವೆನ್ನುವುದಾದರೆ, ಭಾರತ ಹೇಗೆ ಆ ಜ್ಞಾನವನ್ನು ಪಡೆಯಿತು? ಪ್ರಸಾರ ಮಾಧ್ಯಮಗಳು

(೮ನೇ ಪುಟಕ್ಕೆ)







*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
☏:೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು-೫೭೫ ೦೦೧
☏:೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು-೫೭೦ ೦೨೪
☏:೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ-೫೮೫ ೧೦೨
☏:೦೮೪೭೨-೪೨೪೩೦೨




ವೈಚಾರಿಕ ಮಾಸಪತ್ರಿಕೆ 'ಹೊಸತು'ವಿನ ವಿಶೇಷಾಂಕ ಅಮೂಲ್ಯ ಲೇಖನ ಹಾಗೂ ಕವನಗಳ ಸಂಗ್ರಹವಾಗಿದ್ದು ಸದಾಕಾಲ ರಕ್ಷಿಸಿಡುವಂತಹ ಮಹತ್ವದ ಸಂಚಿಕೆಯಾಗಿದೆ. ವಿಚಾರವಂತರನ್ನಾಕರ್ಷಿಸಿ ಕನ್ನಡ ವಿಶೇಷಾಂಕಗಳ ಕ್ಷೇತ್ರದಲ್ಲಿ ತಲೆಯೆತ್ತಿ ನಿಲ್ಲುವ ಶ್ರೇಷ್ಠತೆಯನ್ನು ಹೊಂದಿದೆ.

ಭಟ್ಕಳ **ಡಾ॥ ಸೈಯದ್ ಜಮೀರುಲ್ಲಾ ಷರೀಫ್**

ಡಿ. ಟಿ. ಲೋಹಿತ್‌ರ ಆಕರ್ಷಕ ರೇಖಾ ಚಿತ್ರದ ಮುಖಪುಟದೊಂದಿಗಿನ 'ಹೊಸತು' ಈ ಬಾರಿ ಕೊಂಚ ತಡವಾಗಿ ಕೈಸೇರಿತು. ಡಾ॥ ವಿಜಯಾರವರ ಜಾಗತೀಕರಣದ ಚರ್ಚೆಯಲ್ಲಿ ವಿವಿಧ ಮಾಧ್ಯಮಗಳಲ್ಲಿನ ತಜ್ಞರ ಅಭಿಪ್ರಾಯಗಳು ಸೂಕ್ತವಾಗಿ ವ್ಯಕ್ತಪಟ್ಟು ಜನಪರ ಮತ್ತು ಜಾನಪದ ಕ್ರಿಯಾಶೀಲತೆ ಜಾಗತೀಕರಣಕ್ಕೆ ಪರ್ಯಾಯವೆಂಬುದಾಗಿ ಹೊರಹೊಮ್ಮಿರುವುದು ನಿಜಕ್ಕೂ ಪ್ರಶಂಸನೀಯ. ಬಿ. ವಿ. ವೀರಭದ್ರಪ್ಪನವರ ಲೇಖನವು ಪ್ರಭಾವಶಾಲಿಯಾಗಿದೆ.

ಹಾಸ್ಯ ಮುಖೇನ ರಾಜಕೀಯ ಮತ್ತು ಐದು ದಶಕಗಳಾಚೆಗಿನ ಭಾರತ ಮತ್ತು ಅದರಲ್ಲಿನ ಇತರೇ ರಾಜ್ಯಗಳಲ್ಲಿನ ಭವಿಷ್ಯದ ಸ್ಥಿತಿಗತಿಗಳು ಓದುಗರನ್ನು ನಗೆಗಡಲಿಗೆ ಕೊಂಡೊಯ್ಯುತ್ತದೆ ಶೇಷನಾರಾಯಣರ ''ಗೋಡ್ಸೆಯವರಿಂದ...ಗಾಂಧೀಜಿಗೆ ನಮನ''.

ಮತೀಯ ಪ್ರಕ್ಷೋಭೆಯ ತಡೆಗೆ ಹಲವಾರು ಓದುಗರ ಅಭಿಪ್ರಾಯ-ಸಂಗ್ರಹ – ಒಟ್ಟಾರೆ ಇದು ಮಾರಕವೆಂದು ಪ್ರತಿಪಾದಿಸಿ ಹಲವರು ಪರಿಹಾರ ಮಾರ್ಗಕ್ಕೆ ದಿಕ್ಸೂಚಿ ನೀಡಿದ್ದಾರೆ.

*ಬೆಂಗಳೂರು* *ನೆ. ಲ. ರಾಂ.*

ಜನವರಿ ೨೦೦೪ರ ವಿಶೇಷ ಸಂಚಿಕೆ ತುಂಬ ದಿನ ಕಾಯ್ದಿಡಬೇಕಾದ ಲೇಖನಗಳನ್ನು, ಅಪರೂಪದ ಸಂದರ್ಶನ ಬರಹಗಳನ್ನು, ಉತ್ತಮ ಕವಿತೆಗಳಿಂದ ಅಲಂಕರಿಸಲ್ಪಟ್ಟು ಸಂಗ್ರಾಹ್ಯ ವಿಚಾರಗಳನ್ನೇ ಹೊಂದಿತ್ತು. ಅದರಲ್ಲೂ ಪ್ರಸ್ತುತ ಕಾವ್ಯ ಸಂದರ್ಭವನ್ನು ಕುರಿತಂತೆ ಬಿ. ಸಿ. ರಾಮಚಂದ್ರಶರ್ಮರೊಂದಿಗಿನ ಮಾತು-ಕತೆ, ಮತ್ತು ಭಾರತೀಯ ಸಾಂಸ್ಕೃತಿಕ ಸಂದರ್ಭದಲ್ಲಿ ಜಾಗತೀಕರಣವನ್ನು ಅರ್ಥೈಸಿರುವ ಹಲವರ ಅಭಿಪ್ರಾಯಗಳು ನಿಜಕ್ಕೂ ಮನೋಜ್ಞವಾಗಿವೆ. ಇಂಥ ಸಂಚಿಕೆಯನ್ನು ರೂಪಿಸಿದ ನಿಮ್ಮ ಶ್ರಮ ಸಾರ್ಥಕವಾಗಿದೆ.

*ಅರಸೀಕೆರೆ* **ಡಿ. ಎಸ್. ರಾಮಸ್ವಾಮಿ**

ಜನವರಿ ೨೦೦೪ರ ''ಹೊಸತು'' ಸ್ವಲ್ಪ ತಡವಾಗಿ ತಲುಪಿದರೂ ಮೌಲಿಕ ಬರಹಗಳ ಮೂಲಕ ಆಕರ್ಷಿಸಿತು. ಸಂಪಾದಕೀಯ ಛಡಿ ಏಟು ನೀಡಿದೆ. ಇರಾಕ್ – ಉಗ್ರವಾದ – ಕೋಮುವಾದಗಳ ಕುರಿತು ವರ್ತಿಸಬೇಕಾದ ರೀತಿಯನ್ನು ವಿವರಿಸಿದೆ.

ಸಂಚಿಕೆಯಲ್ಲಿನ ಹಲವು ಲೇಖನಗಳು ವಿಚಾರ ಪ್ರಚೋದಕ. ಉನ್ನತ ಶಿಕ್ಷಣದಲ್ಲಿ ಆಗುತ್ತಿರುವ ಬದಲಾವಣೆಗಳಿಗೆ ಸಂಬಂಧಿಸಿದ ಬರಹ, ಯುವಜನರಲ್ಲಿ ಹೆಚ್ಚುತ್ತಿರುವ ಅಪರಾಧಗಳು ಕುರಿತು ಬರೆದ ಲೇಖನ ಬಹಳಷ್ಟು ಹಿಡಿಸಿದವು.

ಮುಷ್ಟಿಯಲ್ಲೇ ವಿಶ್ವವನ್ನು ಹಿಡಿದಿಟ್ಟಿರುವ ತಮ್ಮ ಪ್ರಯತ್ನ ಸಾರ್ಥಕ.

*ಸೇಡಂ* **ಅಣ್ಣಾಸಾಗರ್ ಬಿ. ಆರ್.**

**ಡಾ॥ ನಾಡಕರ್ಣಿಯವರ ವಿಶ್ಲೇಷಣೆ**

ಮೂರು ಕಂತುಗಳಲ್ಲಿ ಪ್ರಕಟವಾದ ಡಾ॥ ಎಂ. ವಿ. ನಾಡಕರ್ಣಿಯವರ ಲೇಖನ ಕಡೆಗೆ ಹೇಳಿದ್ದು ಸಾಯಿ ಬಾಬಾ, ರವಿಶಂಕರ್ ಮತ್ತು ಅಮೃತಾನಂದಮಯಿ ಯಂಥವರ ದಿವ್ಯಪ್ರತಿಭೆಯಿಂದ ಜಾತಿಗಳು ಚಪ್ಪಟೆ ಯಾಗುತ್ತವೆಂದು. ಸಾಮಾಜಿಕ ಪಿಡುಗೊಂದು ಹೀಗೆ ನಿವಾರಣೆಯಾಗುತ್ತದೆಂದು ಭ್ರಮಿಸಲು ಸಮಾಜ ವಿಜ್ಞಾನದಡಿ ಸಂಶೋಧನೆ ಅನಗತ್ಯ. ಅಂದರೆ, ಕಳೆದ ಮೂರುಸಾವಿರ ವರ್ಷಗಳಲ್ಲಿ ಬಾಬಾ-ರವಿ-ಅಮೃತಾ ಸಮಾನರು ನಮ್ಮ ದೇಶದಲ್ಲಿ ಹುಟ್ಟಲಿಲ್ಲ! ಮಾನ್ಯ ನಾಡಕರ್ಣಿಯವರು ಅಮೆರಿಕಾದ ಮ್ಯಾಕ್‌ಗಿಲ್ ವಿಶ್ವವಿದ್ಯಾ ನಿಲಯದಲ್ಲಿರುವ ಅರವಿಂದ ಶರ್ಮರ ಮಾತುಗಳನ್ನು ಅಷ್ಟೊಂದು ಗಂಭೀರವಾಗಿ ತೆಗೆದುಕೊಳ್ಳುವುದು ಸೋಜಿಗ




ವೆನಿಸುತ್ತದೆ. ಪುರುಷಸೂಕ್ತದ ಮೇಲಿನ ಆತನ ವ್ಯಾಖ್ಯಾನ ತೀರಾ ಬಾಲಿಶವಾದ್ದು, ಅವೈಚಾರಿಕವಾದ್ದು. ಆತನೊಬ್ಬ ಅಸ್ಫುಟಮತಿಯ ಕಟ್ಟಾ ಸಂಪ್ರದಾಯವಾದಿ. ಆತನನ್ನು ಅನುಸರಿಸಿ ಸಿದ್ಧಾಂತ ಮಂಡಿಸುವ ಡಾ॥ ನಾಡಕರ್ಣಿ ಯವರು ತಮ್ಮ ಪಾಂಡಿತ್ಯಕ್ಕೆ ಚ್ಯುತಿ ತಂದುಕೊಳ್ಳುವ ಅಪಾಯವಿದೆ. ಗೀತೆಯಲ್ಲಿ 'ಗುಣಕರ್ಮವಿಭಾಗಶಃ' ಎಂದಿರುವುದನ್ನು ಆಧಾರವಾಗಿ ತೆಗೆದುಕೊಳ್ಳುವುದೂ ಒಂದೇ, ಭಾರತ ಪ್ರಕಾಶಿಸುತ್ತಿದೆಯೆಂದು ಸಾರುವ ಜಾಹಿರಾತನ್ನು ವಾಸ್ತವಿಕದ ಸೂಚನೆಯೆಂದು ನಂಬುವುದೂ ಒಂದೇ! ''ತೇಷಾಂ ಪೂರ್ವತಃ ಪೂರ್ವೇ ಜನ್ಮತಃ ಶ್ರೇಯಾನ್'' ಎನ್ನುವ ಆಪಸ್ತಂಬನಂತಹ ಧರ್ಮಶಾಸ್ತ್ರಕಾರರು ಅಂದಿನ ಸಮಾಜ ವಿಜ್ಞಾನಿಗಳು; ಗೀತಾಚಾರ್ಯನು ವಸ್ತುಸ್ಥಿತಿಗೆ ಬಣ್ಣ ಕಟ್ಟಿ ವಿಜೃಂಭಿಸುವ ದಾರ್ಶನಿಕನಿರಬೇಕು. ಇತಿಹಾಸದಲ್ಲಿ ಘಟಿಸಿದ್ದನ್ನು ಆಧಾರವಾಗಿ ತೆಗೆದುಕೊಳ್ಳದೆ ನಾಲ್ಕು ಹೇಳಿಕೆಗಳಿಗೆ ಮಾರುಹೋಗುವುದು ಸಮಾಜ ವಿಜ್ಞಾನವಾಗುವುದಿಲ್ಲ. ಈ ದೃಷ್ಟಿಯಿಂದ ನೋಡಿದಾಗ ಡಾ॥ ನಾಡಕರ್ಣಿಯವರು ಅಸಮರ್ಥನೀಯವಾದುದನ್ನು ಸಮರ್ಥಿಸಲು ಹೊರಟು ಪ್ರಾಚೀನ ಭಾರತದ ಬಗ್ಗೆ ಅಸಂಗತವಾದ ಚಿತ್ರಣ ನೀಡಿದ್ದಾರೆನಿಸುತ್ತದೆ.

*ಮೈಸೂರು* **ಎ. ವಿ. ಲಕ್ಷ್ಮೀಶ**

ಪ್ರೊ॥ ಎಂ. ವಿ. ನಾಡಕರ್ಣಿಯವರ ಲೇಖನದಲ್ಲಿ ಪ್ರಗಲ್ಭ ಪಾಂಡಿತ್ಯವು ಸುವ್ಯಕ್ತವಾಗಿದೆ. ಪ್ರೊಫೆಸರರು ತಮ್ಮ ಅಭಿಪ್ರಾಯವನ್ನು ವಿವರಿಸುವ ಸಲುವಾಗಿ ವೇದಸಂಹಿತೆ, ಪುರಾಣಗಳು, ಮಹಾಕಾವ್ಯಗಳು, ಉಪನಿಷದ್ಭಾಷ್ಯ, ಭಗವದ್ಗೀತೆ ಮೊದಲಾದ ಸಂಸ್ಕೃತ ಗ್ರಂಥಗಳಿಂದ ಮಾತ್ರ ವಲ್ಲದೆ ತಮಿಳು ಪ್ರಾಚೀನ ಗ್ರಂಥದಿಂದಲೂ, ದಂತಕಥೆ ಗಳಿಂದಲೂ ವಿಪುಲ ನಿದರ್ಶನಗಳನ್ನು ಒದಗಿಸಿದ್ದಾರೆ. ಇಷ್ಟಾದ ಮೇಲೆಯೂ ಕೆಲವು ಮೂಲಭೂತ ಪ್ರಶ್ನೆಗಳು ಹಾಗೆಯೇ ಉಳಿಯುವಂತೆ ತೋರುತ್ತದೆ.

'ಸ್ವಭಾವಜನ್ಯ' ಎಂಬುದನ್ನು 'ಹುಟ್ಟುಗುಣ' ಎಂದು ಅರ್ಥೈಸಬೇಕೆ ಅಥವಾ ವರ್ತನೆ, ನಡೆವಳಿಕೆ ಎಂದೆ? ಹುಟ್ಟುಗುಣ ಎನ್ನುವುದಾದರೆ ಹಿಂದೂಧರ್ಮ ಹುಟ್ಟಿದ್ದು ಯಾವಾಗ? ಅಥವಾ ಕೆಲವರು ಹೇಳುವಂತೆ ಹಿಂದೂಧರ್ಮವು ''ಹುಟ್ಟಲಿಲ್ಲ; ಸುಮ್ಮನೆ ಬೆಳೆಯಿತು'' ಎಂದು ಒಪ್ಪೋಣವೆ?

ಚಾರಿತ್ರಿಕವಾಗಿ ನೋಡಿದರೆ ಹಿಂದೂ ಶಬ್ದವು ಮೊದಮೊದಲು ಒಂದು ಭೂಭಾಗ, ಪ್ರಾಂತ್ಯ ಎಂಬ ಅರ್ಥದಲ್ಲಿಯೂ ಕ್ರಿ.ಶ. ೮-೯ನೇ ಶತಮಾನಗಳ ಅನಂತರ – ಅನ್ಯಮತಧರ್ಮೀಯರು ಈ ಭೂಭಾಗಕ್ಕೆ ಬಂದು ನೆಲೆಸತೊಡಗಿದ ಮೇಲೆ – ಒಂದು ಮತಧರ್ಮ ಎಂಬ ಅರ್ಥದಲ್ಲಿಯೂ ಬಳಕೆಯಾದಂತೆ ತೋರುತ್ತದೆ. ಪ್ರೊ॥ ನಾಡಕರ್ಣಿಯವರು ತಮ್ಮ ವಿವರಣೆಗಳಿಗೆ ಆಧಾರಗ್ರಂಥ ಗಳಾಗಿ ಬಳಸುವ ವೇದೋಪನಿಷತ್ತುಗಳ ಕಾಲದ ಮತಧರ್ಮವನ್ನು ವೈದಿಕಮತ, ವೈದಿಕಧರ್ಮ ಎಂದು ಗುರುತಿಸುವುದೇ ರೂಢಿ. ವಾಸ್ತವವಾಗಿ ಹಿಂದೂಮತ ಧರ್ಮದ ಸಂಪ್ರದಾಯಗಳನ್ನು, ಆಚರಣೆಗಳನ್ನು ವಿವರಿಸುವುದು ಮನುಸ್ಮೃತಿ, ಆಪಸ್ತಂಬ ಸೂತ್ರದಂತಹ ಧರ್ಮಶಾಸ್ತ್ರಗಳ ಮೂಲಕವೇ ಆಗಿದೆ. ''ಅದನ್ನು (ಆಪಸ್ತಂಬ ಧರ್ಮಸೂತ್ರವನ್ನು) ಹಿಂದೂಧರ್ಮವನ್ನು ವಿರೋಧಿಸುವವರು ಹೆಚ್ಚಾಗಿ ಓದುತ್ತಾರೆಯೆ ಹೊರತು ಅದನ್ನು ಅನುಸರಿಸುವವರಲ್ಲ'' ಎಂಬ ಪ್ರೊ॥ ನಾಡಕರ್ಣಿಯವರ ವಾದ ವಿಚಿತ್ರವಾಗಿದೆ. (ನಾವೆಲ್ಲ ಆಪಸ್ತಂಬ ಸೂತ್ರವನ್ನು ಓದಿಲ್ಲವಾದ್ದರಿಂದ ನಾವು ಹಿಂದೂಧರ್ಮವನ್ನು ವಿರೋಧಿಸುವವರಲ್ಲ, ಎಂದು ಭಾವಿಸಿಕೊಳ್ಳಬಹುದಷ್ಟೆ!)

ಹಿಂದೂಧರ್ಮದಲ್ಲಿರುವ ಜಾತಿಪದ್ಧತಿಯು ಹುಟ್ಟನ್ನು ಆಧರಿಸಿದ್ದಲ್ಲ, ಗುಣಕರ್ಮಗಳನ್ನು ಆಧರಿಸಿದ್ದು – ಎಂಬುದು ಪ್ರೊಫೆಸರರ ವಾದದ ಸಾರಾಂಶವಿರುವಂತಿದೆ. ವೇದಗಳ ಕಾಲದಿಂದಲೂ ಬಳಕೆಯಲ್ಲಿರುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಪ್ರಯೋಗಗಳು ಸಮುದಾಯ ವನ್ನು ಗುಂಪುಗಳಾಗಿ ವಿಂಗಡಿಸುವ ಪರಿಕಲ್ಪನೆಗಳಾಗಿವೆ ಯೆಂಬುದು ಸ್ಪಷ್ಟ. ಈ ವಿಂಗಡಣೆಗೆ ಆಧಾರ ಯಾವುದು? ಗುಣಕರ್ಮಗಳೆ ವಿಂಗಡಣೆಗೆ ಆಧಾರ ಎನ್ನುವುದಾದರೆ, ಆಗತಾನೆ ಹುಟ್ಟಿದ ಮಗುವೊಂದರ 'ಗುಣಕರ್ಮ'ಗಳನ್ನು ನಿರ್ಧರಿಸುವುದು ಮತ್ತು ಅದನ್ನು

ಒಂದಲ್ಲ ಒಂದು ಗುಂಪಿಗೆ ಸೇರಿಸುವುದು ಹೇಗೆ ?

ಇಂಥ ವಿಂಗಡಣೆ ನಡೆಯುವುದು ತಂದೆ-ತಾಯಿಯರ (ಅದರಲ್ಲೂ ತಂದೆಯ) ಜಾತಿಯ ಆಧಾರದ ಮೇಲೆ ತಾನೆ? ಆ ಮಗುವು ಬೆಳೆಬೆಳೆದಂತೆ ಗುಣಕರ್ಮಗಳನ್ನು ರೂಢಿಸಿಕೊಳ್ಳಬಹುದು. ಅವನು/ಅವಳು ಬೇರೆ ಜಾತಿಗೆ ಸೇರಿಕೊಳ್ಳಬಹುದು; ಮತಾಂತರವಾಗಬಹುದು. ಪ್ರಪಂಚದ ಎಲ್ಲ ಸಮುದಾಯಗಳಲ್ಲೂ ಜಾತಿ, ಮತಗಳ ವ್ಯವಸ್ಥೆ ಇರುವುದು ಹೀಗೆಯೆ. ಹಿಂದೂಧರ್ಮವು ಕೂಡ ಇದಕ್ಕೆ ಹೊರತಾದುದೇನಲ್ಲವೆಂದು ತೋರುತ್ತದೆ.

*ಬೆಂಗಳೂರು* **ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**

ಡಾ|| ಎಂ. ವಿ. ನಾಡಕರ್ಣಿ ಅವರ ಲೇಖನ ಜಾತಿವೈಷಮ್ಯದಿಂದ ನರಳುತ್ತಿರುವ ಭಾರತದ ಅಶಾಂತ ಸಾಮಾಜಿಕ, ರಾಜನೈತಿಕ ಹಾಗೂ ಸಾಂಸ್ಕೃತಿಕ ಜೀವನಕ್ಕೆ ಎತ್ತಿಹಿಡಿದ ಕೈಗನ್ನಡಿಯಂತಿದೆ.

ಜಾತಿಯ ಹೆಸರಿನಲ್ಲಿ ಮೇಲು ಕೀಳು ಎಂಬ ವರ್ಗಭೇದದ ದೆಸೆಯಿಂದ ಬಡಿದಾಡಿಕೊಳ್ಳುತ್ತಿರುವ ಜನ ಈ ಅಭ್ಯಾಸಪೂರ್ಣ ಮತ್ತು ಅತ್ಯಂತ ಪ್ರಾಮಾಣಿಕವಾದ ಲೇಖನವನ್ನು ಅವಶ್ಯ ಓದಲೇಬೇಕು. ವಿದ್ವತ್ತುಪೂರ್ಣವಾದ ಇಂತಹ ಲೇಖನ ಎಲ್ಲರಿಗೂ ತಲುಪಿ ಅಧ್ಯಯನ ಮಾಡಿ ಅದರಂತೆ ನಡೆದುಕೊಂಡರೆ ಜಾತಿಯ ಹೆಸರಿನಲ್ಲಿ ಆಗಾಗ ಅಲ್ಲಲ್ಲಿ ಹಿಂಸಾಚಾರ ನಡೆಯುತ್ತಿರುವ ಭಾರತದಲ್ಲಿ ಹಿಂಸೆ ಮತ್ತು ಅಶಾಂತಿಗೆ ಖಂಡಿತವಾಗಿಯೂ ಪರಿಹಾರ ದೊರಕಿದಂತಾದೀತು.

*ಮೇದರಹಳ್ಳಿ* **ವಿದ್ವಾನ್ ಎಂ. ವಿ. ಭಟ್**

### ಫೆಬ್ರವರಿ ಸಂಚಿಕೆ

ಫೆಬ್ರವರಿಯ ಸಂಚಿಕೆಯ ಮುಖಪುಟ ಭವಿಷ್ಯದ ಕ್ರೀಡಾಪಟು ಬಹಳ ಮುದ್ದಾಗಿತ್ತು. ಲೇಖನಗಳೆಲ್ಲ ಸಂಗ್ರಹ ಯೋಗ್ಯವಾಗಿವೆ. ''ಇವರು ವಿಜ್ಞಾನ ಕಲಿತವರು'' ಲೇಖನದಲ್ಲಿ ಸತ್ಯಘಟನೆಗಳನ್ನು ಓದುತ್ತಿದ್ದಂತೆ ಇದೇ ರೀತಿ ಇನ್ನು ಹಲವಾರು ಲೇಖನ ಇದ್ದಿದ್ದರೆ ಚೆನ್ನಾಗಿತ್ತು ಎನಿಸಿತು. ಡಾ|| ಶೈಲಜಾ ಕೆ. ಆರ್. ಅವರಿಗೆ ವಂದನೆಗಳು. ಎಳೆಯ ಮಕ್ಕಳ ಪರೀಕ್ಷೆಗಳೆಂಬ ಆಕ್ಟೋಪಸ್ ಇಂದು ಸಮಾಜದಲ್ಲಿ ನಡೆಯುತ್ತಿರುವ ಶೈಕ್ಷಣಿಕ ಅಸಮತೋಲನ ಎತ್ತಿಹಿಡಿದಂತಿದೆ. ಒಟ್ಟಿನಲ್ಲಿ 'ಹೊಸತು' ಹೊಸತನ ಮೂಡಿಸುವುದರಲ್ಲಿ ಒಂದು ಜ್ಞಾನಕೋಶವಾಗಿದೆ.

*ಪಾಂಡವಪುರ* **ಆ. ಮೃತ್ಯುಂಜಯ**

ಫೆಬ್ರವರಿ ಸಂಚಿಕೆಯಲ್ಲಿ 'ಟೋಪಿ ಹಾಕುವುದು' ಲೇಖನ ಚೆನ್ನಾಗಿ ಮೂಡಿಬಂದಿತ್ತು, ಹಾಗೆಯೇ ಕನ್ನಡ ಉಪನ್ಯಾಸಕರಾದ ರಾಮಲಿಂಗಪ್ಪ ಟಿ. ಬೇಗೂರು ಅವರ 'ಮುನ್ನುಡಿ ಬೆನ್ನುಡಿಗಳೆಂಬ ಪೋಟುಗಲ್ಲುಗಳು' ನನ್ನ ಮನಸ್ಸನ್ನು ಆಕರ್ಷಿಸಿತು.

'ಬೆಂಗಳೂರಿನ ಚಾಣಾಕ್ಷ ದೇವರುಗಳು' ಲೇಖನ ಮನಮುಟ್ಟಿತು.

*ಲಕ್ಷ್ಮೀಸಾಗರ* **ಎಲ್. ಕೆ. ಮಂಜುನಾಥ**

### ಇದು ಸಾಧ್ಯವೇ ?

ಸಾರ್ವಜನಿಕ ಪೂಜೆಯನ್ನು ನಾವೆಲ್ಲಾ ನಿಷೇಧಿಸುವಂತಹ ಒಂದು ಚಳುವಳಿ ಈ ಶತಮಾನದ ಮುಖ್ಯವಾದ ಶಾಂತಿಮಾರ್ಗವಾಗಿ ರೂಪುಗೊಳ್ಳಬೇಕು. 'ಸೆಕ್ಯೂಲರ್' ಎಂಬ ಪದವನ್ನು ಬಳಸುವುದರ ಬದಲಾಗಿ 'ಪರ್ಸನಲ್' ಎಂಬ ಪದಕ್ಕೆ ಪ್ರಾಮುಖ್ಯತೆ ನೀಡುವುದು ಈ ಯಂತ್ರಯುಗಕ್ಕೆ ಹೆಚ್ಚು ಪ್ರಯೋಜನಕಾರಿಯಾದೀತು.

ನಮ್ಮ ವಿಶ್ವದಲ್ಲಿ ಸಾಕಷ್ಟು ಧರ್ಮಗಳು ಬಂದುಹೋಗಿವೆ. ಹೊಸದೊಂದು ಧರ್ಮ ಬರುವ ಸಾಧ್ಯತೆ ಇಲ್ಲ. ಪ್ರತಿಯೊಬ್ಬರೂ ತಮ್ಮ ತಮ್ಮ ಮನೆಯಲ್ಲಿ ತಮತಮಗೆ ಬೇಕಾದ ದೇವರನ್ನು ಪೂಜಿಸುವುದೋ, ಪ್ರಾರ್ಥಿಸುವುದೋ ಮಾಡಿದರೆ ಸಾಕೆನಿಸುತ್ತದೆ. ಗುಡಿ, ಮಠ, ಪುರೋಹಿತರು-ಸ್ವಾಮಿಗಳು ಇವೆಲ್ಲಾ ನಿಷೇಧಿಸುವ ಕಾನೂನು, ಸಂಪ್ರದಾಯ ಚಾಲ್ತಿಗೆ ಬರುವ ದಿಕ್ಕಿನಲ್ಲಿ ನಾವು ಯೋಚಿಸಬೇಕಾಗಿದೆ. ಇಂಥ ಒಂದು ಸ್ಥಿತಿ ಸಾಧ್ಯವಾಗುವಂತೆ ಮಾಡಿದರೆ ಎಷ್ಟೊಂದು ಧಾರ್ಮಿಕ ಅಶಾಂತಿ ಇಲ್ಲದಂತಾಗುತ್ತದೆ! ಕೆಲವು ಹಳೆಯ ಐತಿಹಾಸಿಕ ಕ್ಷೇತ್ರಗಳನ್ನು ಪ್ರೇಕ್ಷಣೀಯ ಸ್ಥಳಗಳಾಗಿ ಉಳಿಸಿಕೊಂಡು ಉಳಿದ ಗುಡಿಗಳನ್ನು, ಮಠಗಳನ್ನು ವಿದ್ಯಾಕ್ಷೇತ್ರಗಳಾಗಿಯೋ, ಆರೋಗ್ಯ ಕ್ಷೇತ್ರಗಳಾಗಿಯೋ ಬಳಸಿಕೊಳ್ಳುವಂತಾದರೆ ಎಷ್ಟು ಚೆನ್ನ; ಇದರಿಂದ ದೇಶದ ಆರ್ಥಿಕ ಸುಧಾರಣೆ ಮಾತ್ರವಲ್ಲ, ವೈಯಕ್ತಿಕ ಆರ್ಥಿಕ ಸುಧಾರಣೆಯೂ ಆಗುತ್ತದೆ.

*ಬೆಂಗಳೂರು* **ಹಾಲಾಡಿ ಮಾರುತಿರಾವ್**

### ಶುದ್ಧ ಸಾಹಿತ್ಯ

ಫೆಬ್ರವರಿ ಸಂಪಾದಕೀಯ ಬರಹದಲ್ಲಿ ಶುದ್ಧ ಸಾಹಿತ್ಯದ ವಕ್ತಾರರಂತೆ ಮಾತನಾಡುವವರ ಕುರಿತು ಆಕ್ಷೇಪವಿತ್ತು. ಇದೊಂದು ಚರ್ಚೆಯ ವಿಷಯವೂ ಹೌದು. ಪ್ರಾಯಶಃ ಶುದ್ಧ ಸಾಹಿತ್ಯ ಎನ್ನುವಂಥದ್ದು ಧೋರಣೆಗೆ, ತರ್ಕಕ್ಕೆ ಅತೀತವಾದ ಬರಹವಾಗಿರುತ್ತದೆ. ಈ ರೀತಿ 'ಅತೀತ' ಎನ್ನುವಲ್ಲಿಕೂಡ ಯಾವುದೋ ಒಂದು ಧೋರಣೆ, ತರ್ಕ ಇರುತ್ತದೆ. ಶುದ್ಧ ಸಾಹಿತ್ಯ ಬರಹಗಾರನ ಅಂತರ್ಮುಖಿ ಸಂವಾದದಿಂದ ಸೃಷ್ಟಿಯಾಗುತ್ತದೆ. ಆ ಅಂತರ್ಮುಖಿ ಸಂವಾದದಲ್ಲಿ ಬಹಿರ್ಮುಖಿ ಸಮಾಜದ ಒತ್ತಡ, ಸಮಾಜದ ಪ್ರಭಾವ, ಸಾಮಾಜಿಕ ಮನೋಧರ್ಮದ ಪ್ರೇರಣೆ ಎಲ್ಲವೂ ಇರುತ್ತದೆ. ಆದರೆ ಸಮಾಜಕ್ಕೆ ಪ್ರತಿಕ್ರಿಯೆ ಕೊಡುವುದು ಬರಹಗಾರನ ಮುಖ್ಯ ಉದ್ದೇಶವಾಗಿರದೆ ತನ್ನ ಅಂತರಂಗಕ್ಕೆ ಪ್ರತಿಕ್ರಿಯೆ ಕೊಡುವುದೇ ಪ್ರಧಾನ ಉದ್ದೇಶವಾಗಿರುತ್ತದೆ. ಅದನ್ನು ಸಮಾಜ ಸ್ವೀಕರಿಸಲೂಬಹುದು; ಸ್ವೀಕರಿಸದೆಯೂ ಇರಬಹುದು. ಅದರ ಬಗ್ಗೆ ಬರಹಗಾರ ನಿರ್ಲಿಪ್ತ. ಒಂದು ಕಾಲಮಾನದ ಸಮಾಜ ಸ್ವೀಕರಿಸದೆ ಇರುವುದನ್ನು ಮತ್ತೊಂದು ಕಾಲಮಾನದ ಸಮಾಜ ಸ್ವೀಕರಿಸಬಹುದು. ಅದು ಶುದ್ಧ ಸಾಹಿತ್ಯಕ್ಕಿರುವ ಸಾಧ್ಯತೆ ಮತ್ತು ಮಿತಿ.

ಶುದ್ಧ ಸಾಹಿತ್ಯ ಅಲ್ಲದೆ ಇರುವ ಸಾಹಿತ್ಯ ಯಾವುದಿದೆಯೋ ಅದರಲ್ಲೂ ಬರಹಗಾರ ತನ್ನ ಅಂತರಂಗದೊಂದಿದೆ ಸಂವಾದ ನಡೆಸುತ್ತಿರುತ್ತಾನೆ. ಆದರೆ ಆ ಸಂವಾದದ ಉದ್ದೇಶ ಮುಖ್ಯವಾಗಿ ಬಹಿರ್ಮುಖಿ ಜಗತ್ತೇ ವಿನಾ ಅಂತರ್ಮುಖಿ ಜಗತ್ತಲ್ಲ.

ಸಾಹಿತಿ ಯಾವ ಸಾಹಿತ್ಯವನ್ನು ಬೇಕಿದ್ದರೂ ಸೃಷ್ಟಿಸಿಕೊಳ್ಳಲಿ; ಅದು ಅವನ ಸ್ವಾತಂತ್ರ್ಯ. ಆದರೆ ಒಬ್ಬ ಸಮಾಜ ಜೀವಿಯಾಗಿ ಆತನೂ ಸಹ ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸಬೇಕಾದ ನೈತಿಕ ಜವಾಬ್ದಾರಿ ಉಳ್ಳವನೇ ಆಗಿರುತ್ತಾನೆ. ಮಾತ್ರವಲ್ಲದೆ ಆತನ ಸಾಹಿತ್ಯದ ಸ್ವರೂಪವೇನೇ ಇದ್ದರೂ ಜನವಿರೋಧಿ ನಿಲುವನ್ನು ಆತ ತಳೆಯಲು ಸಾಧ್ಯವಿಲ್ಲ. ಈಗ ಡಾ|| ಎಸ್. ಎಲ್. ಭೈರಪ್ಪನವರನ್ನೇ ತೆಗೆದುಕೊಳ್ಳಿ. ಅವರು ನಮ್ಮ ನಡುವಿನ ಮುಖ್ಯ ಕಾದಂಬರಿಕಾರರಲ್ಲವೆಂದು ಯಾರೂ ಹೇಳಲಾರರು. ಆದರೆ ಅವರು ಹೇಳಿದ್ದನ್ನೆಲ್ಲ ಒಪ್ಪಿಕೊಳ್ಳಬೇಕಾದ ಅಗತ್ಯವಿಲ್ಲ. ಭೈರಪ್ಪನವರಿಗೆ ತಮ್ಮ ಅಭಿಪ್ರಾಯವನ್ನು ಹೇಳಲು ಹೇಗೆ ಸ್ವಾತಂತ್ರ್ಯವಿದೆಯೋ ಹಾಗೆಯೇ ಅದನ್ನು ನಿರಾಕರಿಸಲು ಓದುಗನಿಗೆ ಸ್ವಾತಂತ್ರ್ಯವಿದೆ. ಭೈರಪ್ಪನವರು ತಮ್ಮ ಅಭಿಪ್ರಾಯವನ್ನು ಹೇಳಲೇಬಾರದು ಎನ್ನುವುದು ಯಾವ ರೀತಿ ಸ್ವೀಕಾರಾರ್ಹವಲ್ಲವೋ ಅವರನ್ನು ಟೀಕಿಸಬಾರದು ಎನ್ನುವುದೂ ಸ್ವೀಕಾರಾರ್ಹವಾದ ನಿಲುವಲ್ಲ.

*ಬೆಳ್ತಂಗಡಿ* **ಅರವಿಂದ ಚೊಕ್ಕಾಡಿ**

---

*(ಈ ತಿಂಗಳು.... ೩ನೇ ಪುಟದಿಂದ)*

ನಮ್ಮ ದೇಶದ ಕ್ರಿಕೆಟ್ ಆಟಗಾರರು ಕಡೆಗೂ ಪಾಕಿಸ್ತಾನಕ್ಕೆ ಹೋಗಿ ತಮ್ಮ ಧೈರ್ಯ ಪ್ರದರ್ಶಿಸಲು ತೀರ್ಮಾನಿಸಿದ್ದಾರೆ. ಆಟದಲ್ಲಿ ಸೋತರೆ ಇಡೀ ದೇಶ ಅತ್ತು ನೀರಾಗಬೇಕು ಎಂಬ ಮೂರ್ಖತನ ಗಾಢವಾಗಿ ಬೆಳೆದಿರುವುದು ಕೂಡ ಪಾಕಿಸ್ತಾನದ ಬಗೆಗಿನ ದ್ವೇಷ, ಭಯ ಮತ್ತು ಮತ್ಸರಗಳಿಂದ. ಹಿಂದೊಮ್ಮೆ ಪಾಕಿಸ್ತಾನದ ಆಟಗಾರರು ಸೋತಾಗ ನಮ್ಮ ದೇಶದ ಸೈನ್ಯದ ದಂಡನಾಯಕರು ಭಾರತದ ಆಟಗಾರರ ನಾಯಕನಿಗೆ ಅಭಿನಂದನಾ ಸಂದೇಶ ಕಳಿಸಿದ್ದರು. ಈಗ ಪಾಕಿಸ್ತಾನದಲ್ಲಿ ಸೋತರೆ ಏನು ಕಳಿಸಬೇಕೆಂಬ ಸಂದೇಹ ಅವರನ್ನು ಆವರಿಸಿರಬೇಕು. ಅದಕ್ಕೇ ಆಟಗಾರರ ಸುರಕ್ಷತೆಯ ಪ್ರಶ್ನೆ ಎತ್ತಿದ್ದೇವೆಂದು ಪಾಕಿಸ್ತಾನ ಛೇಡಿಸಲು ಸಾಧ್ಯ. ಇವರು ಆಟಗಾರರಲ್ಲ, ಯೋಧರು-ಮಹಾತ್ಮರು-ಆರಾಧ್ಯದೈವಗಳು ಎನ್ನುವಂತೆ ಅವರನ್ನೆಲ್ಲಾ ಬಣ್ಣಿಸುವ ಪರಿಪಾಠವೇ ತಪ್ಪು. ಅಷ್ಟಕ್ಕೂ ಅವರು ಜಾಹಿರಾತು ನೀಡಿ ಹಣ ಸಂಪಾದಿಸುವುದು ವಿಷದ ಪಾನೀಯಗಳ ವಕ್ತಾರರಾಗಿ, ಅಲ್ಲವೆ ?

ಈ ಸಂದರ್ಭದಲ್ಲಿ ಇನ್ನೊಂದು ಆತ್ಮಾವಲೋಕನ ಅಬದ್ಧವಾದೀತೆ? ನಮ್ಮ ಮಾಧ್ಯಮಗಳನ್ನು ನೋಡಿದರೆ ಗ್ರ್ಯಾಮಿ, ಆಸ್ಕರ್, ಇವೇ ತುಂಬಿರುತ್ತವೆ. ಅವಕ್ಕೆ ಅಷ್ಟೊಂದು ಪ್ರಾಧಾನ್ಯ ನೀಡುವುದು ವಸಾಹತು ದೇಶವಾಗಿದ್ದ ದೇಶದ ನಮ್ಮ ಪರಾಧೀನ ಪ್ರಜ್ಞೆಯೆ ? ನೆಲ್ಸನ್ ಮಂಡೇಲಾಗೆ ಭಾರತರತ್ನ ಪ್ರಶಸ್ತಿಯನ್ನು ನಮ್ಮ ದೇಶ ನೀಡಿದಾಗಲೂ ಅಮೆರಿಕಾದ ಮಾಧ್ಯಮಗಳು ಆ ಸಮಾಚಾರವನ್ನು ಬಿತ್ತರಿಸಲಿಲ್ಲ; ಆದರೆ ನಮ್ಮ ಯುವಕರಿಗೆ ನಾವು ಗ್ರ್ಯಾಮಿ-ಆಸ್ಕರ್ ಕುಡಿಸಬೇಕು! ಬಾಳ ಠಾಕ್ರೆಯು ಮೈಕೇಲ್ ಜಾಕ್ಸನ್ನನ್ನು ಆರಾಧಿಸಬೇಕು, ಆದರೆ ಹುಸೇನ್ ಕಲಾಕೃತಿಗಳನ್ನು ಸುಟ್ಟುಹಾಕಿಸಬೇಕು. ಮನೋವಿಜ್ಞಾನಿಗಳಿಗೆ ಇದೊಂದು ಸವಾಲಾಗಬಹುದೆ ?

[signature]

*(ಸಂಪಾದಕೀಯ.... ೫ನೇ ಪುಟದಿಂದ)*

ಅಗಾಧವಾಗಿ ಬೆಳೆದಿರುವ ಇಂದಿನ ಸಂದರ್ಭದಲ್ಲಿ ಸ್ವಲ್ಪ ವಿಚಕ್ಷಣೆಯಿಂದ ಅಣ್ವಸ್ತ್ರದ ತಂತ್ರಜ್ಞಾನವನ್ನು ಸ್ವತಂತ್ರವಾಗಿ ವರ್ಧಿಸಿಕೊಳ್ಳುವುದು ಸರ್ವಥಾ ಸಾಧ್ಯವಿಲ್ಲದಂತಹ ವಿಷಯವೆ ?

ಮೇರಿ ಕ್ಯೂರಿ ಹೇಳುತ್ತಿದ್ದ ಒಂದು ಮಾತು ಪ್ರಸಿದ್ಧವಿದೆ: ''ಜ್ಞಾನವು ಖಾಸಗಿ ಸ್ವತ್ತಲ್ಲ; ಅದು ಎಂದಿದ್ದರೂ ಸಾರ್ವತ್ರಿಕಗೊಳ್ಳುವಂತಹದ್ದು.'' ತಾನು ಸಂಶೋಧಿಸಿದ್ದ ವಿಕಿರಣ ತಂತ್ರಜ್ಞಾನಕ್ಕೆ ಪೇಟೆಂಟ್ ಪಡೆಯಲು ನಿರಾಕರಿಸಿದಾಗ ಹೇಳಿದ್ದ ಮಾತು ಅದು. ಆಕೆಯದು ವಿಧ್ವಂಸಕ ತಂತ್ರಜ್ಞಾನವಲ್ಲದಿರುವುದು ಹಾಗೂ ಅಣ್ವಸ್ತ್ರ ತಂತ್ರಜ್ಞಾನವು ವಿಧ್ವಂಸಕವಾಗಿರುವುದು ಒಂದು ಮೂಲಭೂತ ವ್ಯತ್ಯಾಸ. ಅದು ಬಿಟ್ಟರೆ ಎರಡೂ ಜ್ಞಾನಶಾಖೆಗಳೇ ಆಗಿವೆ. ಯಾವುದೇ ಜ್ಞಾನವನ್ನು ಎಷ್ಟು ಕಾಲ ಗುಟ್ಟಾಗಿಟ್ಟಿರಲು ಶಕ್ಯವಾದೀತು ? ಈಗ ಐವತ್ತು ವರ್ಷಗಳ ಹಿಂದೆ ಸೋವಿಯೆತ್ ಒಕ್ಕೂಟದಲ್ಲಿ ಅಣು ತಂತ್ರಜ್ಞಾನ ಬೆಳೆದದ್ದು ಹೇಗೆಂಬುದನ್ನು ಕೆದಕಿ ನೋಡುವ ಅಗತ್ಯವಿದೆ. ಅಮೆರಿಕಾದಲ್ಲಿ 'ಮ್ಯಾನ್‌ಹಾಟನ್ ಯೋಜನೆ'ಯೆಂದು ಕರೆಯಲಾದ ಅಣ್ವಸ್ತ್ರ ತಯಾರಿಕೆಯ ಕೆಲಸಕ್ಕೆ ಮುಖ್ಯಸ್ಥನಾಗಿದ್ದವನು ರಾಬರ್ಟ್ ಓಪನ್‌ಹೈಮರ್. ಎರಡನೆಯ ಮಹಾಯುದ್ಧದ ತರುವಾಯದಲ್ಲಿ ಈತನ ಮೇಲೆ ಕಠಿಣ ಆರೋಪಗಳನ್ನು ಹೊರಿಸಿ ದೀರ್ಘಕಾಲಿಕ ವಿಚಾರಣೆಗೆ ಗುರಿಪಡಿಸಲಾಯಿತು. ಅನೇಕ ಆಪಾದನೆಗಳ ಪೈಕಿ ಒಂದು ಇದೂ ಇತ್ತು: ಈ ತಂತ್ರಜ್ಞಾನವು ಬೇರೆಯವರಿಗೆ ಲಭಿಸಲು ಈತನೂ ಹೇಗೋ ಕಾರಣನಾಗಿದ್ದಾನೆ, ಎಂದು. ಈತನ ಜೊತೆಯಲ್ಲಿ ಕೆಲಸ ಮಾಡಿದವರಲ್ಲಿ ಎಡ್ವರ್ಡ್ ಟೆಲರ್ ಸಹ ಒಬ್ಬ. ಇತ್ತೀಚೆಗೆ ನಿಧನನಾದ ಟೆಲರ್ ಮಹಾಪಾತಕಿ; ಜಲಜನಕ ಬಾಂಬ್, ನ್ಯೂಟ್ರಾನ್ ಬಾಂಬ್, ಐ.ಸಿ.ಬಿ.ಎಂ., ಮುಂತಾದುವೆಲ್ಲಾ ಈತನ ನೇತೃತ್ವದಲ್ಲಿ ಮೂಡಿಬಂದ ಘೋರ ಅಸ್ತ್ರಗಳು. ತನ್ನ ಆತ್ಮಕತೆಯಲ್ಲಿ ಸೋವಿಯೆತ್ ಒಕ್ಕೂಟಕ್ಕೆ ಅಣ್ವಸ್ತ್ರ ತಂತ್ರಜ್ಞಾನವನ್ನು ಒದಗಿಸಿದವನು ಎಂದು ಕ್ಲೌಸ್ ಫುಕ್ಸ್ ಎಂಬ ವಿಜ್ಞಾನಿಯನ್ನು ಟೆಲರ್ ಹೆಸರಿಸಿದ್ದಾನೆ. ಅದು ಶುದ್ಧ ಕುಹಕದ ಮಾತು. ಸ್ವತಂತ್ರವಾಗಿ ಸೋವಿಯೆತ್ ಒಕ್ಕೂಟದ ವಿಜ್ಞಾನಿಗಳು ಈ ಸಾಮರ್ಥ್ಯವನ್ನು ಬೆಳೆಸಿಕೊಂಡರು, ಎಂಬ ಇನ್ನೊಂದು ವಾದಕ್ಕೆ ಪುಷ್ಟಿಕೊಡುವ ಅನೇಕ ವಿದ್ಯಮಾನಗಳು ವಿಜ್ಞಾನದ ಚರಿತ್ರೆಯಲ್ಲಿ ದಾಖಲಾಗಿವೆ. ಅದೇನೇ ಇರಲಿ, ಸೋವಿಯೆತ್ ಒಕ್ಕೂಟವು ಅಣ್ವಸ್ತ್ರಗಳನ್ನು ಹೊಂದಿಲ್ಲದಿದ್ದರೆ ಅಮೆರಿಕಾದ ಆಟಾಟೋಪ ಯಾವ ಸ್ವರೂಪದ್ದಾಗಿರುತ್ತಿತ್ತು ಎಂಬುದು ಸುಲಭವಾಗಿ ತಿಳಿಯುತ್ತದೆ. ಶೀತಲ ಯುದ್ಧದ ಕಾಲದಲ್ಲಿ ಈ ಎರಡು ರಾಷ್ಟ್ರಗಳು ಶೇಖರಿಸಿಕೊಂಡಿದ್ದ ಮಾರಕಾಸ್ತ್ರಗಳನ್ನು ''ಬ್ಯಾಲೆನ್ಸ್ ಆಫ್ ಪವರ್'' ಎನ್ನುತ್ತಿದ್ದರು. (ಅದು ''ಬ್ಯಾಲೆನ್ಸ್ ಆಫ್ ಟೆರರ್'' ಎಂದೂ ಕರೆಯಲ್ಪಡುತ್ತಿತ್ತು). ಶೀತಲಯುದ್ಧದ ಕಾಲ ಮುಗಿದಿದ್ದರೂ ಅಂದಿನ ವಾತಾವರಣ ಅಳಿಸಿಹೋಗಿಲ್ಲ. ಅಣ್ವಸ್ತ್ರಗಳ ಏಕಸ್ವಾಮ್ಯವು ಅಪಾಯಕಾರಿ ಬೆಳವಣಿಗೆಯಾಗುತ್ತದೆ. ಸಣ್ಣ ರಾಷ್ಟ್ರಗಳು ಕೆಲವು ಭಯೋತ್ಪಾದಕ ರಾಷ್ಟ್ರಗಳಾದ್ದರಿಂದ ಅವಕ್ಕೆ ಅಣ್ವಸ್ತ್ರ ಜ್ಞಾನ ದಕ್ಕಕೂಡದೆಂದು ಅಮೆರಿಕಾದ ಭಾವನೆ. ಆದರೆ ಅಮೆರಿಕಾದಷ್ಟು ದುಷ್ಟ ಭಯೋತ್ಪಾದಕ ದೇಶ ಬೇರಾವುದೂ ಇಲ್ಲ. ಎಷ್ಟೋ ಚಿಕ್ಕ ರಾಷ್ಟ್ರಗಳ 'ಭಯೋತ್ಪಾದನೆ'ಗೆ ಅಮೆರಿಕಾದ ಠಕ್ಕು ಮತ್ತು ದರ್ಪಗಳೇ ಕಾರಣ. ಅಮೆರಿಕಾದ ಹುನ್ನಾರಗಳನ್ನು ಹತ್ತಿಕ್ಕಲು ಅಣ್ವಸ್ತ್ರಗಳು ಸಮರ್ಥವಾಗುತ್ತವೆಂದು ಇದರರ್ಥವಲ್ಲ. ಅವು ಯಾರ ಬಳಿಯೂ ಇಲ್ಲದಿರುವಂತಾಗುವುದು ಅವುಗಳ ದುರ್ಬಳಕೆಯಾಗದಿರುವುದಕ್ಕೆ ಇರುವ ಒಂದೇ ಮಾರ್ಗ. ಇದರಲ್ಲಿ 'ಉಳ್ಳವರು' ಮತ್ತು 'ಇಲ್ಲದಿರುವವರು' ಎಂಬ ಭೇದ ಸರ್ವಥಾ ಅಂಗೀಕಾರಾರ್ಹವಲ್ಲ. ಅಬ್ದುಲ್ ಖಾದಿರ್ ಖಾನ್ ಮಾಡಿರುವುದು ದುರಂತಕ್ಕೆ ಕಾರಣವಾಗುತ್ತದೆ, ನಿಜ; ಆದರೆ ಅಮೆರಿಕಾದಂತಹ ಕೆಲವು ಬಲಿಷ್ಠ ರಾಷ್ಟ್ರಗಳು ಮಾತ್ರವೇ ಅಣ್ವಸ್ತ್ರಗಳನ್ನು ಹೊಂದಿದ್ದರೆ ಬೇರೆ ರೀತಿಯ ದುರಂತಗಳ ಸರಮಾಲೆಯೇ ವಿಶ್ವವನ್ನು ಸದಾ ಬಾಧಿಸುತ್ತಿರುತ್ತದೆ. ಆದ್ದರಿಂದ ಸಂಪೂರ್ಣವಾಗಿ ಅಣ್ವಸ್ತ್ರಗಳನ್ನು ನಾಶಪಡಿಸಬೇಕು, ಸಾರ್ವತ್ರಿಕವಾಗಿ ಅವು ಇಲ್ಲದಾಗಬೇಕು. ಅಂತಹ ಸಮಗ್ರ ನಿಶ್ಶಸ್ತ್ರೀಕರಣವೊಂದೇ ವಿನಾಶವನ್ನು ತಡೆಗಟ್ಟಬಲ್ಲದು. ಅಮೆರಿಕಾಕ್ಕೆ ಅಣ್ವಸ್ತ್ರ ಶೇಖರಣೆಯು ರಕ್ಷಣಾತಂತ್ರವೆನ್ನುವುದು ನಿಜವಾದರೆ ಅದೇ ತಂತ್ರವನ್ನು ಉತ್ತರ ಕೊರಿಯಾ, ಇರಾನ್, ಭಾರತ ಮತ್ತು ಪಾಕಿಸ್ತಾನಗಳಿಗೆ ನಿರಾಕರಿಸಲು ಯಾರಿಗಾದರೂ ಹಕ್ಕೇಕಿರಬೇಕು ? ವಿಶ್ವಸಂಸ್ಥೆಯು ಅಮೆರಿಕಾದ ಕೈಗೊಂಬೆಯಾಗಿರುವ ದಾರುಣ ಸನ್ನಿವೇಶದಲ್ಲಿ ಈ ಪ್ರಶ್ನೆ ಅಪ್ರಸ್ತುತವಲ್ಲ. ಭಾರತವು ಸಂಪೂರ್ಣ ನಿಶ್ಶಸ್ತ್ರೀಕರಣಕ್ಕೆ ಹರಿಕಾರನಾಗಬೇಕು.

*(signature)*

# ಜಾತ್ಯಾತೀತತೆ ಒಂದು ನೋಟ

'ಜಾತ್ಯಾತೀತತೆ' ಯನ್ನು ಪ್ರತಿಪಾದಿಸುವ ಕೆಲವು ವಿಚಾರವಂತರನ್ನು ಸರಳವಾಗಿ, ಸುಲಭವಾಗಿ ಲೇವಡಿ ಮಾಡುವ ಮತ್ತೊಂದು ವರ್ಗದ ವಿಚಾರವಂತರೂ ನಮ್ಮಲ್ಲಿದ್ದಾರೆ. ಇಂಥವರು ಈ ದೇಶದ ಸಂಕೀರ್ಣ ಸ್ವರೂಪವನ್ನು ಅರ್ಥಮಾಡಿಕೊಂಡಿದ್ದಾರೆಯೆ ಎಂಬ ಅನುಮಾನವುಂಟಾಗುತ್ತದೆ. ಒಂದು ದೇಶದ 'ಸಂಸ್ಕೃತಿ' ಯನ್ನು ಅಂಕಗಣಿತದ ಮಟ್ಟಕ್ಕೆ ತಂದು, ಕೂಡುವ-ಕಳೆಯುವ ಲೆಕ್ಕ ಹೇಳಿಕೊಡುವ ಪ್ರವೃತ್ತಿಯೇ ಆಘಾತಕರವಾದುದು. ಜೊತೆಗೆ ಜಾತ್ಯಾತೀತತೆಯೆಂಬ ಪರಿಕಲ್ಪನೆಯನ್ನು ರಾಮಜನ್ಮಭೂಮಿಯ ವಿವಾದವೊಂದರಿಂದಲೇ ನೋಡುವ, ನಿರ್ಧರಿಸುವ, ದೃಷ್ಟಿಕೋನವೂ ಪಾರ್ಶ್ವವಾಯು ಪೀಡಿತವಾದದ್ದು. ಈ ದೇಶದಲ್ಲಿರುವ ಅಸಂಖ್ಯಾತ ಜಾತಿಗಳು, ವಿವಿಧ ಧರ್ಮಗಳು ಶ್ರೇಣೀಕೃತ ಸಮಾಜದ ಸ್ವರೂಪಕ್ಕೆ ಕಾರಣವಾಗಿವೆಯೆಂಬುದನ್ನು ಗಮನಿಸದೆ 'ತೀರ್ಪು' ನೀಡುವ ಮನೋಧರ್ಮದಲ್ಲಿ ಮನಸ್ಸು ಮತ್ತು ಧರ್ಮ ಇದೆಯೆ ಎಂಬ ಪ್ರಶ್ನೆ ತಾನಾಗೇ ಉದ್ಭವವಾಗುತ್ತದೆ.

'ದೂರವೇ ಈ ದೇಶದ ಮಾನದಂಡ' ಎಂದು ಹೇಳುವಷ್ಟರಮಟ್ಟಿಗೆ ಸಾಮಾಜಿಕ ಅಸಮಾನತೆ ಗಾಢವಾಗಿದೆ. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯಿಂದ ಎಷ್ಟು ದೂರ ನಿಂತಿದ್ದಾನೆ ಎಂಬುದನ್ನು ನೋಡಿದರೆ ಆತ ಯಾರು, ಈತ ಯಾರು ಎಂಬುದನ್ನು ಹೇಳಬಹುದಾಗಿದೆ. ಕೆಲವರನ್ನು ಹಟ್ಟಿಯಲ್ಲಿ, ಕೆಲವರನ್ನು ಹಜಾರದ ಬಳಿ, ಕೆಲವರನ್ನು ಹಾಲಿನಲ್ಲಿ ನಿಲ್ಲಿಸುವ ಕ್ರಮದಲ್ಲಿಯೇ ನಮ್ಮ ಶ್ರೇಣಿಗಳು ಕಾಣಿಸಿಕೊಳ್ಳುತ್ತವೆ. ಕೆಲವರನ್ನು ಮಾತ್ರ ಅಡಿಗೆಮನೆಯ ವರೆಗೆ ಬಿಟ್ಟುಕೊಳ್ಳುವ 'ಮನೋಧರ್ಮ'ದಲ್ಲಿರುವ 'ಮೌಲ್ಯ' ಯಾವುದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಆದ್ದರಿಂದ 'ದೂರ' ಎನ್ನುವುದು ಈ ದೇಶದ ಶ್ರೇಣೀಕರಣದ ಒಂದು 'ಸಂಕೇತ'ವಾಗಿದೆ. ಈ ದೇಶದಲ್ಲಿ – ಆರ್ಥಿಕ ಕಾರಣಕ್ಕಷ್ಟೇ ಅಲ್ಲ, ಜಾತಿಯ ಕಾರಣಕ್ಕೆ ಒಂದು ಸಾಮಾಜಿಕ ಸಮೂಹವು ಇನ್ನೊಂದು ಸಮೂಹದ ಮೇಲೆ ಸವಾರಿ ಮಾಡುತ್ತ ಬಂದಿದೆ. ಇದು ಯಾವುದೋ ಎರಡು ಜಾತಿಗಳ ನಡುವಿನ ಅಂತರವಲ್ಲ. ಒಂದರಮೇಲೊಂದರಂತೆ ಸವಾರಿ ಮಾಡುವ ಜಾತಿಯ ಶ್ರೇಣೀಕರಣವನ್ನು ನಮ್ಮಲ್ಲಿ ಕಾಣಬಹುದಾಗಿದೆ. ಜಾತಿಯ ಕಾರಣಕ್ಕೇ ಕೆಲವರಿಗೆ ಸಾಮಾಜಿಕ ಘನತೆ ಲಭ್ಯವಾಗಿದ್ದರೆ, ಜಾತಿಯ ಕಾರಣಕ್ಕೇ ಅನೇಕರು ಸಾಮಾಜಿಕ ಗೌರವದಿಂದ ವಂಚಿತರಾಗಿದ್ದಾರೆ. ಬದಲಾಗುತ್ತಿರುವ ಸನ್ನಿವೇಶದಲ್ಲಿ ಸ್ವಲ್ಪ ಸುಧಾರಣೆ ಕಾಣುತ್ತಿದೆಯಾದರೂ ಅಸ್ಪೃಶ್ಯತೆ ಪೂರ್ಣ ನಾಶವಾಗಿಲ್ಲ; ಹಿಂದುಳಿದ ವರ್ಗಗಳ ಸಂಕಷ್ಟ ಪರಿಹಾರವಾಗಿಲ್ಲ. ಎಲ್ಲ ಜಾತಿಗಳಲ್ಲೂ ಬಡವರಿರುತ್ತಾರೆ ಎಂಬುದನ್ನು ಒಪ್ಪುತ್ತಲೇ ಜಾತಿಯ ಕಾರಣಕ್ಕಾಗಿಯೇ ನಿರ್ಮಾಣಗೊಂಡಿರುವ 'ಅಂತರ'ದ ಆಘಾತವನ್ನು ಮುಖ್ಯವಾಗಿ ಗಮನಿಸಬೇಕು. ಜಾತಿಯ ಕಾರಣಕ್ಕಾಗಿಯೇ ತುಳಿತಕ್ಕೊಳಗಾದವರ ಬಗ್ಗೆ ಜಾತಿಯನ್ನೇ ಮಾನದಂಡವಾಗಿಟ್ಟುಕೊಂಡು ಸುಧಾರಣೆಯ ಕ್ರಮಗಳನ್ನು ಕೈಗೊಳ್ಳುವುದು ಈ ದೇಶದಲ್ಲಿ ಅನಿವಾರ್ಯ ಹಾಗೂ ಅಗತ್ಯ. ಆದರೆ ಜಾತಿಯ ಗುರುತಿಸುವಿಕೆ 'ಜಾತಿವಾದ'ವಾಗಬಾರದು. ಜಾತಿಯ ಹೆಸರಿನಲ್ಲಿ ಇತರರಲ್ಲಿರುವ ಬಡವರನ್ನು ನಿರ್ಲಕ್ಷಿಸಬಾರದು. ಅಂದರೆ ಸಾಮಾಜಿಕ ಬಡತನ ಮತ್ತು ಆರ್ಥಿಕ ಬಡತನಗಳೆರಡನ್ನೂ ಆಧಾರವಾಗಿಟ್ಟುಕೊಂಡು ಶ್ರೇಣೀಕೃತ ಸಮಾಜದ ವಿಷವನ್ನು ಹೋಗಲಾಡಿಸಬೇಕು.

ಇಂತಹ ಸನ್ನಿವೇಶದಲ್ಲಿ ಮೇಲ್ ಜಾತಿ ಮತ್ತು ಮೇಲ್‌ವರ್ಗಗಳು ಮಾಡಿದ ಅನ್ಯಾಯವನ್ನು ಒಂದು 'ಚಾರಿತ್ರಿಕ ಸಂಭವ' ವನ್ನಾಗಿ ನೋಡಬೇಕೇ ಹೊರತು ಜಾತಿಯ ದ್ವೇಷಕ್ಕೆ ಇದು ಕಾರಣವಾಗಬೇಕಿಲ್ಲ. ಅದೇ ರೀತಿ ಮೇಲ್ ಜಾತಿ-ವರ್ಗಗಳ ಜನರು ತಮ್ಮ ಜಾತಿ-ವರ್ಣ-ವರ್ಗಗಳ ಬಗೆಗಿನ ಚಾರಿತ್ರಿಕ ಟೀಕೆಯನ್ನು ವೈಯಕ್ತಿಕ ಮಟ್ಟದಲ್ಲಿ ಪರಿಭಾವಿಸಬೇಕಿಲ್ಲ. ವಾಸ್ತವವಾಗಿ ಇಂಥವರಿಗೆ 'ಪಾಪಪ್ರಜ್ಞೆ' ಕಾಡಿಸಬೇಕು. ತಾವು ಅಯಾಚಿತವಾಗಿ ಹುಟ್ಟಿದ ಜಾತಿವರ್ಗಗಳು ಅಯಾಚಿತವಾಗಿ ಮತ್ತೊಂದು ಜಾತಿವರ್ಗದಲ್ಲಿ ಹುಟ್ಟಿದವರನ್ನು ಕೀಳಾಗಿ ಕಾಣುವ ಪರಿಸರವನ್ನು ನಿರ್ಲಿಪ್ತವಾಗಿ ನೋಡಿ ಪಾಪಪ್ರಜ್ಞೆಗೆ ಒಡ್ಡಿಕೊಂಡರೆ ಅದು ಸಾರ್ಥಕವಾದೀತು. ಇದು ಸಾರ್ಥಕ 'ಜಾತ್ಯಾತೀತತೆ' ಯಾಗುತ್ತದೆ. ಅಂತೆಯೇ ಕೆಳಜಾತಿಗಳಲ್ಲಿ ಹುಟ್ಟಿದವರು ಜಾತಿಯ ಕಾರಣಕ್ಕೇ ಶೋಷಣೆಯ ಸಂಕಟವನ್ನು ಅನುಭವಿಸಿರುವುದರಿಂದ ಅದೇ ಆಧಾರದ ಮೇಲೆ ವಿಶೇಷ ಸುಧಾರಣ ಕ್ರಮಗಳಿಗೆ ಒತ್ತಾಯಿಸುವುದು ನೂರಕ್ಕೆ ನೂರು ಸರಿಯಾದರೂ ಇದು ಜಾತಿದ್ವೇಷವಾಗದಂತೆ, ಜಾತಿವಾದವಾಗದಂತೆ ಸೂಕ್ಷ್ಮ ಗೆರೆಯೊಂದನ್ನು ಗುರುತಿಸಿಕೊಳ್ಳಬೇಕಾಗುತ್ತದೆ. ಮೇಲ್ ಜಾತಿಗಳು ಕೆಳಜಾತಿಗಳ ಸವಲತ್ತಿನ ಬಗ್ಗೆಯೇ ಬೊಬ್ಬೆ ಹೊಡೆಯುತ್ತ 'ಜಾತ್ಯಾತೀತ' ಎಂದಮೇಲೆ ಜಾತಿಯ ಆಧಾರದಲ್ಲಿ ಸವಲತ್ತುಗಳು ಯಾಕೆ ಎಂದು ಪ್ರಶ್ನಿಸುತ್ತಿರುವುದನ್ನು ಕಂಡಾಗ ಚರಿತ್ರೆಯನ್ನು ಅರ್ಥಮಾಡಿಕೊಳ್ಳದ ಕುರುಡು ವಾದವನ್ನು ಕಂಡಂತಾಗುತ್ತದೆ. ನಾವು ಮೊದಲು ಒಪ್ಪಿಕೊಳ್ಳಬೇಕು: 'ಈ ದೇಶದಲ್ಲಿ ಜಾತಿಗಳಿವೆ; ವರ್ಗಗಳಿವೆ. ಜಾತಿಯ ಕಾರಣಕ್ಕೆ ಅನೇಕ ಜಾತಿ ಬಾಂಧವರು, ವರ್ಗದ ಕಾರಣಕ್ಕೆ ಅನೇಕ ಬಡವರು ತುಳಿತಕ್ಕೊಳಗಾಗಿದ್ದಾರೆ' – ಈ ಸತ್ಯದ ಆಧಾರದ ಮೇಲೆ ಕೆಳಜಾತಿ ಮತ್ತು ವರ್ಗಗಳ ಬಗ್ಗೆ ವಿಶೇಷ ಕಾಳಜಿ ವಹಿಸದಿದ್ದರೆ ಅದು ಮಾನವೀಯ ಸಮಾಜವೇ ಅಲ್ಲ. ಈ ವಿಶೇಷ ಕಾಳಜಿ ಮತ್ತು ಕಾರ್ಯಕ್ರಮಗಳ ಮೂಲಕ ಜಾತ್ಯಾತೀತ, ವರ್ಗಾತೀತ ನೆಲೆಗೆ ಸಮಾಜವನ್ನು ಕೊಂಡೊಯ್ಯುವ ಬಗ್ಗೆ ಎಲ್ಲ ಜಾತಿ-ವರ್ಗದವರೂ ಕ್ರಿಯಾಶೀಲರಾಗಬೇಕು. ನಾನು ಮೊದಲೇ ಹೇಳಿದಂತೆ ಜಾತಿಯ ಗುರುತಿಸುವಿಕೆಯು ಆ ಗೆರೆಯನ್ನು ದಾಟಿ ಜಾತಿವಾದವಾಗದಂತೆ ನೋಡಿಕೊಳ್ಳುವ ಜವಾಬ್ದಾರಿ ನಮ್ಮ ಮೇಲಿದೆ. ಜಾತಿ ಸವಲತ್ತುಗಳು ಜಾತಿ ಸಂಘರ್ಷವಲ್ಲವೆಂಬ ತಿಳುವಳಿಕೆ ಮೂಡಬೇಕಾಗಿದೆ. ಇಂತಹ ಸಂಕೀರ್ಣ ಸ್ಥಿತಿಯನ್ನು ಅರ್ಥಮಾಡಿಕೊಳ್ಳದೆ ಸರಳವಾಗಿ ಇದು ಜಾತ್ಯಾತೀತ ರಾಷ್ಟ್ರವಾದ್ದರಿಂದ ಜಾತಿಯ ಹೆಸರು ಯಾಕೆ ಬೇಕು ಎಂದು ಕೇಳುವುದು ಸರಿಯಾದ ಚಿಂತನೆಯಲ್ಲ.

'ಜಾತ್ಯಾತೀತತೆ' ಎನ್ನುವುದು ನಾವು ತಲುಪಬೇಕಾದ ಆದರ್ಶದ ಪರಿಕಲ್ಪನೆ; ಈಗಾಗಲೇ ತಲುಪಿರುವ ಸ್ಥಿತಿಯಲ್ಲ. ಎರಡೇ ಜಾತಿಗಳೋ ಎರಡೇ ವರ್ಗಗಳೋ ಇದ್ದಾಗ ಸಮಾನತೆಯ ಮಾತು ಸುಲಭವಾದೀತು. ಆದರೆ ಬಹುಜಾತಿ, ಬಹುಧರ್ಮ, ಬಹು ಸಂಸ್ಕೃತಿಗಳ ನಾಡಿನಲ್ಲಿ ಸಮಾನತೆಯ ಕಲ್ಪನೆ ಮತ್ತು ಸ್ಥಾಪನೆ ಸರಳವಲ್ಲ. 'ಜಾತ್ಯಾತೀತತೆ' ಎನ್ನುವುದು ಸಹಜವಾಗಿಯೇ ತುಳಿತಕ್ಕೊಳಗಾದ ಜಾತಿ-ಜನಾಂಗಗಳ ಪರವಾದ ಪರಿಕಲ್ಪನೆಯಾಗಿ ಪ್ರಕಟಗೊಳ್ಳುತ್ತ ಬಂದಿದ್ದರೂ ಅಂತಿಮವಾಗಿ ಜಾತಿ-ಧರ್ಮಗಳ ಸಮಾನತೆಯನ್ನು ಹೇಳುತ್ತದೆ. 'ಜಾತ್ಯಾತೀತತೆ' ಯು ಸಮಾನತೆಯತ್ತ

ಯಾವುದೇ ಜಾತಿಯಲ್ಲಿ ಅಥವಾ ಧರ್ಮದಲ್ಲಿ ಗುರುತಿಸಿಕೊಳ್ಳದೆ ಇರುವುದು ಅತ್ಯಂತ ಆದರ್ಶದ, ಅಪೇಕ್ಷಣೀಯ ನೆಲೆ. ಇದು ಎಲ್ಲರಿಗೂ ಸಾಧ್ಯವಾಗದೆ ಇರುವ ಸಂಕೀರ್ಣ ಸನ್ನಿವೇಶದಲ್ಲಿ ನಾವಿರುವುದರಿಂದ ಜಾತಿಯಲ್ಲಿ ಹುಟ್ಟಿಯೂ ಜಾತಿವಾದಿಯಾಗದೆ, ಧರ್ಮವೊಂದರ ಭಾಗವಾಗಿಯೂ ಧರ್ಮಾಂಧರಾಗದೆ ಬದುಕುವುದನ್ನು ಜಾತ್ಯಾತೀತತೆ ಮತ್ತು ಧರ್ಮನಿರಪೇಕ್ಷ ನೆಲೆಗಳೆಂದು ಗುರುತಿಸಲಾಗುತ್ತಿದೆ.

ಪ್ರೊ|| ಬರಗೂರು ರಾಮಚಂದ್ರಪ್ಪ

ಇಟ್ಟ ಒಂದು ಗಟ್ಟಿ ಹೆಜ್ಜೆ ಎಂಬುದನ್ನು ಮೇಲ್‌ಜಾತಿ ವರ್ಗಗಳು ಮತ್ತು ಕೆಳಜಾತಿ ವರ್ಗಗಳು ಒಟ್ಟಿಗೇ ಅರ್ಥಮಾಡಿಕೊಂಡಾಗ ಅದಕ್ಕೊಂದು ಅರ್ಥಪೂರ್ಣತೆ ಬರುತ್ತದೆ. ಒಂದು ಜಾತಿಯ ಅವಹೇಳನವೇ ಜಾತ್ಯಾತೀತತೆಯಲ್ಲ. ಅದೊಂದು ಪ್ರಬುದ್ಧ ಪರಿಕಲ್ಪನೆ ಎಂಬುದನ್ನು ಎಲ್ಲರೂ ತಿಳಿಯಬೇಕಾಗಿದೆ. ಈ ರೀತಿಯ ತಿಳುವಳಿಕೆಯುಳ್ಳ ಕೆಳಜಾತಿಗಳಿಗೆ ಸಮಾನತೆಯ ಆಶಯದೊಂದಿಗೆ ಸಮಚಿತ್ತ ಲಭ್ಯವಾದರೆ ಮೇಲ್‌ಜಾತಿಗಳಿಗೆ ಪಾಪಪ್ರಜ್ಞೆ ಕಾಡಿಸಿ ಕೆಳಜಾತಿ-ವರ್ಗಗಳ ಜೊತೆ ಗುರುತಿಸಿಕೊಳ್ಳುವ ಮನೋವೈಶಾಲ್ಯ ಬೆಳೆಯುತ್ತದೆ. ಬುದ್ಧ, ಬಸವಣ್ಣ, ಗಾಂಧಿ ಇವರನ್ನು ಕಾಡಿಸುತ್ತ ಬಂದ 'ಪಾಪಪ್ರಜ್ಞೆ' ಇಂದು ಚಾರಿತ್ರಿಕ ಮಹತ್ವ ಪಡೆದಿರುವುದನ್ನು ಗಮನಿಸಬಹುದು.


**Statement about ownership and other particulars about newspaper**

**FORM IV**

| | | |
|---|---|---|
| 1. Place of publication | : | Bangalore |
| 2. Periodicity of its publication | : | Monthly |
| 3. Printer's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 4. Publisher's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 5. Editor's Name | : | G. Ramakrishna |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 6. Name and address of individuals who own the newspaper and partners and shareholders holding more than one percent of the total capital | : | Navakarnataka Publications (P) Ltd., Embassy Centre Crescent Road P. B. No. 5159 Bangalore - 560 001 (Sole Proprietors) |

I, R. S. Rajaram, hereby declare that the particulars given above are true to the best of my knowledge and belief.

Sd/-
R. S. Rajaram
Publisher

Date : 28-2-2004


ಜಾತಿಗೂ ಸಾಮಾಜಿಕ-ಆರ್ಥಿಕ ಸ್ಥಿತಿಗತಿಗಳಿಗೂ ಈ ದೇಶದಲ್ಲಿ ಸಂಬಂಧ ವಿರುವುದರಿಂದ ಜಾತಿಯನ್ನು ಒಂದು ಸಾಮಾಜಿಕ ವಾಸ್ತವವೆಂದು ಗುರುತಿಸುತ್ತ, ಜಾತಿಯನ್ನು ಮೀರಿ ಜಾತ್ಯಾತೀತವಾಗುವ ಕ್ರಮಗಳನ್ನು ಚಿಂತಿಸುವುದೇ ಇಂದಿನ ಮುಖ್ಯ ಸಮಸ್ಯೆ ಹಾಗೂ ಸವಾಲು. ಇದು ವಿವೇಕ ಮತ್ತು ಔಚಿತ್ಯದ ಪ್ರಶ್ನೆ. ಸರಳರೇಖೆಯ ಪ್ರಶ್ನೆಯಲ್ಲ. ಯಾಕಾಗಿ ಮತ್ತು ಎಲ್ಲಿಯವರೆಗೆ ಜಾತಿಯ ಗುರುತಿಸುವಿಕೆ ಸಾಧುವಾದುದು ಎಂಬ ವಿವೇಕವನ್ನು ಕಂಡುಕೊಂಡು ಔಚಿತ್ಯದಿಂದ ಮುನ್ನಡೆಯುವ ಅಗತ್ಯವಿದೆ.

ಧರ್ಮನಿರಪೇಕ್ಷತೆಯನ್ನೂ ಜಾತ್ಯಾತೀತ ಪರಿಕಲ್ಪನೆಯ ಭಾಗವಾಗಿ ನೋಡಲಾಗುತ್ತಿದೆ. ಇದು ಸರಿಯಾದುದೂ ಹೌದು. ಧರ್ಮವೊಂದರಲ್ಲಿ ಗುರುತಿಸಿಕೊಂಡಿದ್ದರೂ ಧರ್ಮಾಂಧರಾಗದೇ ಇರುವುದು, ಇನ್ನೊಂದು ಧರ್ಮವನ್ನು ದ್ವೇಷಿಸದೆ ಇರುವುದು, ಧರ್ಮದ ಆಧಾರದ ಮೇಲೆ ಆಕ್ರಮಣಶೀಲರಾಗದೆ ಇರುವುದು – ಅಂದರೆ ಧರ್ಮವನ್ನು ಒಳಗಿನ ಭಾಗವಾಗಿಸಿಕೊಂಡು 'ನಿರಪೇಕ್ಷ' ನೆಲೆಯಲ್ಲಿ ಬದುಕುವುದು – ಇದು 'ಧರ್ಮನಿರಪೇಕ್ಷತೆ' ಅಥವಾ ಒಟ್ಟಾರೆ 'ಜಾತ್ಯಾತೀತತೆ'ಯ ಅರ್ಥವಲಯವೆಂದು ನಾನು ಭಾವಿಸುತ್ತೇನೆ.

ಯಾವುದೇ ಜಾತಿಯಲ್ಲಿ ಅಥವಾ ಧರ್ಮದಲ್ಲಿ ಗುರುತಿಸಿಕೊಳ್ಳದೆ ಇರುವುದು ಅತ್ಯಂತ ಆದರ್ಶದ, ಅಪೇಕ್ಷಣೀಯ ನೆಲೆ. ಇದು ಎಲ್ಲರಿಗೂ ಸಾಧ್ಯವಾಗದೆ ಇರುವ ಸಂಕೀರ್ಣ ಸನ್ನಿವೇಶದಲ್ಲಿ ನಾವಿರುವುದರಿಂದ ಜಾತಿಯಲ್ಲಿ ಹುಟ್ಟಿಯೂ ಜಾತಿವಾದಿಯಾಗದೆ, ಧರ್ಮವೊಂದರ ಭಾಗವಾಗಿಯೂ ಧರ್ಮಾಂಧರಾಗದೆ ಬದುಕುವುದನ್ನು ಜಾತ್ಯಾತೀತತೆ ಮತ್ತು ಧರ್ಮನಿರಪೇಕ್ಷ ನೆಲೆಗಳೆಂದು ಗುರುತಿಸಲಾಗುತ್ತಿದೆ. ಆದರೆ ನಾನು ವೈಯಕ್ತಿಕವಾಗಿ ಜಾತಿ ಮತ್ತು ಧರ್ಮಗಳನ್ನು ಮೀರಿದ ಮನುಷ್ಯ ಮಾತ್ರನಾಗಲು ಇಚ್ಛಿಸುತ್ತೇನೆ.

ಅದೇನೇ ಇರಲಿ; ಈಗ ಧರ್ಮಗಳ ವಿಷಯಕ್ಕೆ ಬಂದಾಗ ಕೇಳಿಬರುವ ಬಹುಸಂಖ್ಯಾತ ಧರ್ಮೀಯರ ಮಾತುಗಳನ್ನು ಗಮನಿಸೋಣ. 'ಕೆಲವರು ಮಸೀದಿ, ಚರ್ಚುಗಳಿಗೆ ಧಕ್ಕೆಯಾದಾಗ ಮಾತ್ರ ಬೊಬ್ಬೆ ಹೊಡೆಯುತ್ತಾರೆ, ಮಂದಿರಕ್ಕೆ ಧಕ್ಕೆಯಾದಾಗ ಸುಮ್ಮನಿರುತ್ತಾರೆ. ಇವರು ಸೋಗಲಾಡಿ ಜಾತ್ಯಾತೀತರು' ಎಂಬರ್ಥದ ಮಾತುಗಳನ್ನು ಅನೇಕರು ಅನೇಕ ವಿಧಗಳಲ್ಲಿ ಹೇಳುತ್ತ ಬಂದಿದ್ದಾರೆ. ಜಾತಿಗಳಲ್ಲಿ ಮೇಲ್‌ಜಾತಿಯವರು, ವರ್ಗಗಳಲ್ಲಿ ಮೇಲ್‌ವರ್ಗದವರು, ಧರ್ಮಗಳಲ್ಲಿ ಬಹುಸಂಖ್ಯಾತ ಧರ್ಮದವರು ಆಕ್ರಮಣಶೀಲರಾದಾಗ, ಅಸಹನೆಯ ಆತುರ ತೋರಿದಾಗ ಇಂತಹ ವಿತಂಡವಾದಗಳು ಹುಟ್ಟುತ್ತವೆ. ಈ ರೀತಿಯ ಮಾತುಗಳು ಬುದ್ಧ, ಬಸವಣ್ಣಾದಿಗಳ ಪಾಪಪ್ರಜ್ಞೆಯ ನೆಲೆಯನ್ನು ಅರ್ಥಮಾಡಿಕೊಳ್ಳದೆ ಜಾತ್ಯಾತೀತ ಹಾಗೂ ಧರ್ಮನಿರಪೇಕ್ಷ ಪರಿಕಲ್ಪನೆಯ ಪ್ರಬುದ್ಧತೆಯನ್ನು ಅಲ್ಲಗಳೆಯಲು ಹವಣಿಸುತ್ತವೆ. ನನ್ನ ಮುಂದಿನ ಮಾತುಗಳಿಗೆ ಮುಂಚೆಯೇ ಧಾರ್ಮಿಕ ಮೂಲಭೂತವಾದದ ಬಗ್ಗೆ ನನ್ನ ನಿಲುವನ್ನು ಸ್ಪಷ್ಟಪಡಿಸುತ್ತೇನೆ. ನಾನು ಯಾವುದೇ ಧರ್ಮೀಯರ - ಅಂದರೆ ಹಿಂದೂ, ಮುಸ್ಲಿಂ, ಕ್ರೈಸ್ತ ಇತ್ಯಾದಿ – ಮೂಲಭೂತವಾದವನ್ನು ವಿರೋಧಿಸುತ್ತೇನೆ. ಆದರೆ ಲಾಡೆನ್ ಕಾರಣಕ್ಕೆ ಇಡೀ ಮುಸ್ಲಿಮರನ್ನು ವಿರೋಧಿಸುವುದಿಲ್ಲ. ಯಾಕೆಂದರೆ 'ಲಾಡೆನ್‌ನ ಇಸ್ಲಾಂ' ಬೇರೆ 'ಪೈಗಂಬರ್ ಇಸ್ಲಾಂ' ಬೇರೆ. ಅಂತೆಯೇ ಗಾಂಧೀಜಿಯವರ ಹಿಂದೂ ಧರ್ಮ ಬೇರೆ, ಗೋಡ್ಸೆ ಹಿಂದೂ ಧರ್ಮ ಬೇರೆ. ಇದನ್ನು ಅರ್ಥಮಾಡಿಕೊಳ್ಳದೆ ಧರ್ಮದ ಹೆಸರಿನಲ್ಲಿ ಯಾರೇ ಜನಾಂಗ ದ್ವೇಷವನ್ನು ಬಿತ್ತಿದರೂ, ಅದು ವಿರೋಧಾರ್ಹವಾದುದು.

ಆದರೆ, ಬಹುಸಂಖ್ಯಾತ ಧರ್ಮೀಯರು ಮತ್ತು ಅಲ್ಪಸಂಖ್ಯಾತ ಧರ್ಮೀಯರ ಸಮಸ್ಯೆಗಳ ಸ್ವರೂಪ ಏಕರೀತಿಯದಾಗಿಲ್ಲ ಎಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕು. ಈ ದೇಶದಲ್ಲಿ ಹೇಗೆ ಕೆಳಜಾತಿಗಳು ಮತ್ತು ಕೆಳವರ್ಗಗಳು ಆತಂಕದ ನಡುಕದಲ್ಲಿ ಬದುಕುತ್ತಾರೊ ಹಾಗೆಯೇ ಅಲ್ಪಸಂಖ್ಯಾತ ಧರ್ಮೀಯರು ಅಭದ್ರತೆಯ ಅಳುಕಿನಲ್ಲಿ ಬದುಕುತ್ತಿರುತ್ತಾರೆ. ಬಹುಸಂಖ್ಯಾತ ಧರ್ಮೀಯರ ಆಕ್ರಮಣಶೀಲತೆ ಹೆಚ್ಚಾದಂತೆ ಅಲ್ಪಸಂಖ್ಯಾತ ಧರ್ಮೀಯರು ಒಗ್ಗಟ್ಟಾಗುತ್ತ ಅಳುಕಿನಿಂದ ಮತ್ತಷ್ಟು ಆಕ್ರಮಣಶೀಲರಾಗುತ್ತಾರೆ. ಇದೇ ಸಂದರ್ಭದಲ್ಲಿ ಎರಡೂ ಕಡೆ ಸಾಮರಸ್ಯ ಪ್ರೇಮಿಗಳು ಇದ್ದೇ ಇರುತ್ತಾರೆ. ಮೂಲಭೂತವಾದಿಗಳ ವಿಜೃಂಭಣೆಯಲ್ಲಿ ಅವರು ಹಿನ್ನೆಲೆಗೆ ಸರಿಸಲ್ಪಟ್ಟಿರುತ್ತಾರೆ. ಆದ್ದರಿಂದ ಇಲ್ಲಿ ವಿರೋಧ ಇರಬೇಕಾದ್ದು ಧಾರ್ಮಿಕ ಮೂಲಭೂತವಾದಿಗಳ ಬಗ್ಗೆ. ಮುಸ್ಲಿಮರ ಒಗ್ಗಟ್ಟಿನ ಬಗೆಗೆ ಮಾತನಾಡುತ್ತ ಇಡೀ ಹಿಂದೂ ಧರ್ಮೀಯರನ್ನು ಮೂಲಭೂತವಾದಿಗಳನ್ನಾಗಿಸುವ ಹುನ್ನಾರಗಳು ನಡೆಯುತ್ತಿರುವುದೇ ಇಂದಿನ ಆತಂಕಕಾರಿ ಬೆಳವಣಿಗೆಯಾಗಿದೆ. ಧಾರ್ಮಿಕ ಸಾಮರಸ್ಯದ ಪರಂಪರೆಯ ಪಠಣ ಮಾಡುತ್ತಲೇ ಅತ್ಯಂತ ಆವೇಶದ ವಿವೇಕರಹಿತ ಕಾರ್ಯಾಚರಣೆಗೆ ತೊಡಗುವುದು

ಎಷ್ಟು ಉಚಿತವಾದುದು ? ಮಸೀದಿಯನ್ನು ಕೆಡವಿ ಶ್ರೀರಾಮ ದೇವಾಲಯ ಕಟ್ಟುವುದು ಧರ್ಮವೆ ? ಅಥವಾ ಧರ್ಮ ಎನ್ನುವುದು ಕೇವಲ ದೇವಾಲಯಗಳಲ್ಲಿದೆಯೆ ? ಸದಾ ಶ್ರೀರಾಮನನ್ನು ಸ್ಮರಿಸುತ್ತ ಬದುಕಿದ ಗಾಂಧೀಜಿ ಎಂದೂ ಇತರೆ ಧರ್ಮೀಯರಿಗೆ ಭಂಗ ತರಲಿಲ್ಲ. 'ಉಳ್ಳವರು ಶಿವಾಲಯವ ಮಾಡುವರು' ಎಂದು ಹೇಳಿದ ಬಸವಣ್ಣ 'ದೇಹವೇ ದೇವಾಲಯ'ವೆಂದು ಸಾರಿದರು. 'ಭಕ್ತಿಯೆಂಬದು ತೋರುಂಬಲಾಭ'ವಾಗಿದೆಯೆಂದು ಅಂದೇ ಅಲ್ಲಮಪ್ರಭು ವ್ಯಾಖ್ಯಾನಿಸಿದರು. ದೇವರ ಬಗ್ಗೆ ಮೌನ ವಹಿಸಿದ 'ಬುದ್ಧ' ನಮ್ಮ ಪರಂಪರೆಯ ಭಾಗವಾಗಿ ಪ್ರಸ್ತುತವಾಗಿರುವುದು ಇಂದಿನ ವಾಸ್ತವ. ಇವರೆಲ್ಲರನ್ನು ಕಾಡಿದ ಪಾಪಪ್ರಜ್ಞೆಯೇ ನಮ್ಮ ದೇಶದ ದೊಡ್ಡ ಪರಂಪರೆ. ಇದನ್ನು ನಾವ್ಯಾಕೆ ಅರ್ಥ ಮಾಡಿಕೊಳ್ಳುವುದಿಲ್ಲ? ಶ್ರೀರಾಮ ದೇವಾಲಯದ ನಿರ್ಮಾಣವನ್ನು ರಾಷ್ಟ್ರೀಯತೆಯ ಸಂಕೇತವೆಂದು ಬಿಂಬಿಸುವುದೇ ಒಂದು ತತ್ವಹೀನತೆ. ಯಾಕೆಂದರೆ ನಮ್ಮ 'ರಾಷ್ಟ್ರೀಯತೆ'ಯು ಒಂದು ದೇವಾಲಯವನ್ನು ಆಧರಿಸಿಲ್ಲ. ಬಹುರೂಪತೆಯೇ ನಮ್ಮ ರಾಷ್ಟ್ರೀಯತೆ. ಇದಕ್ಕೆ ಎಲ್ಲ ಧರ್ಮೀಯರೂ ಬದ್ಧವಾಗಿಲ್ಲ ಎನ್ನಿಸಿದಾಗ ಬುದ್ಧಿ ಹೇಳಬೇಕು; ಸೇಡು ಮತ್ತು ಸಂಘರ್ಷಗಳ ನೆಲೆಯಲ್ಲಿ ರಾಷ್ಟ್ರೀಯತೆಯನ್ನು ಮೆರೆಯುತ್ತೇವೆನ್ನುವುದು ವಿವೇಕದ ಹಾದಿಯಲ್ಲ. ನಮ್ಮ ದೇಶದ ಬಹುಪಾಲು ತಾತ್ವಿಕರು, ಸಂತರು ತೋರಿದ ಬೆಳಕು ಇದಲ್ಲ. ದೇವರು ಇದ್ದಾನೊ ಇಲ್ಲವೊ ಎಂಬ ಚರ್ಚೆಗಳು ನಡೆಯುತ್ತಿರುವ ಇಂದಿನ ದಿನಗಳಲ್ಲಿ ದೇವರು ಹುಟ್ಟಿದ ಜಾಗಗಳನ್ನು ಹುಡುಕುತ್ತ ಹುಯಿಲೆಬ್ಬಿಸುವುದು ಧರ್ಮವೂ ಅಲ್ಲ, ಧಾರ್ಮಿಕತೆಯೂ ಅಲ್ಲ. ಇದೇ ಮಾದರಿಯನ್ನು ಮುಸ್ಲಿಮರು ಅನುಸರಿಸಿದರೂ ಅದು ತಪ್ಪು. ಧರ್ಮ ಮತ್ತು ಧಾರ್ಮಿಕತೆಯನ್ನು 'ಭಕ್ತಿ'ಯ ವಿಷಯವಾಗಿಸುವ ಬದಲು 'ಹುಸಿಪ್ರತಿಷ್ಠೆ'ಯ ವಿಷಯವನ್ನಾಗಿಸುವುದು ರಾಷ್ಟ್ರೀಯ ವಿರೋಧಿ ಕ್ರಮವಷ್ಟೇ ಅಲ್ಲ; ಅಧಾರ್ಮಿಕವೂ ಹೌದು.

ಮೇಲ್‌ಜಾತಿ, ಮೇಲ್‌ವರ್ಗ ಮತ್ತು ಬಹುಸಂಖ್ಯಾತ ಧರ್ಮೀಯರಿಗೆ ಅಹಂಕಾರ ಮತ್ತು ಆಕ್ರಮಣಶೀಲತೆಗಳು ಬಂದರೆ, ಅವು ಯಾವತ್ತೂ ಅಪಾಯಕಾರಿಯಾಗುತ್ತವೆ. ಸಮಾನತೆ ಮತ್ತು ಸಾಮರಸ್ಯದ ಚಿಂತನೆಗಳು ಮೇಲಂತಸ್ತಿನವರ ಒಳಿತಿನಲ್ಲಿ ಹುಟ್ಟುವುದಿಲ್ಲ; ಬಹುಸಂಖ್ಯಾತರ ಬುದ್ಧಿಗನುಗುಣವಾಗಿ ರೂಪುಗೊಳ್ಳುವುದಿಲ್ಲ. ಸಂಕೀರ್ಣ ಸ್ವರೂಪದ ನಮ್ಮ ದೇಶದಲ್ಲಿ ಸಮಾನತೆ ಮತ್ತು ಸಾಮರಸ್ಯ ಕಲ್ಪನೆಗಳು ಕೆಳಜಾತಿ, ಕೆಳವರ್ಗ ಮತ್ತು ಅಲ್ಪಸಂಖ್ಯಾತ ನೆಲೆಯಿಂದ ಅರ್ಥಪಡೆದುಕೊಳ್ಳುತ್ತ ಬೆಳೆಯುತ್ತವೆ. ಇದು ನಮ್ಮ ದೇಶದ ಪರಂಪರೆಯನ್ನು ಸರಿಯಾಗಿ ಅರ್ಥಮಾಡಿಕೊಂಡವರಿಗೆ ತಾನಾಗಿಯೇ ತಿಳಿಯುತ್ತದೆ. ಆದ್ದರಿಂದ ಮಸೀದಿ ಮತ್ತು ಚರ್ಚುಗಳಿಗೆ ಧಕ್ಕೆಯಾದಾಗ ಮಾತನಾಡುತ್ತಾರೆಂದು ಎಲ್ಲ ಜಾತ್ಯಾತೀತವಾದಿಗಳನ್ನು ಸಾರಾಸಗಟಾಗಿ ಹೀಗಳೆಯುತ್ತ ಬಹುಸಂಖ್ಯಾತ ಧರ್ಮೀಯರ ಆಕ್ರಮಣಶೀಲತೆಯನ್ನು ಸಮರ್ಥಿಸಲಾಗದು. ಮಂದಿರವಾಗಲಿ, ಮಸೀದಿಯಾಗಲಿ, ಚರ್ಚಾಗಲಿ ಹಾನಿಗೊಳಗಾದಾಗ ವಿರೋಧಿಸಬೇಕೆಂದು ನಿರೀಕ್ಷಿಸುವುದು ಸರಿಯಾದುದು. ಆದರೆ ಈ ನಿರೀಕ್ಷೆಯ ನೆಲೆಗಳನ್ನು ಮೀರಿ ಶ್ರೀರಾಮಜನ್ಮಭೂಮಿಯ ಸಮಸ್ಯೆ ಬೆಳೆದಿದೆ ಎಂಬುದನ್ನು ಮರೆಮಾಚಲಾಗದು.

ರಾಷ್ಟ್ರೀಯತೆ ಎಂದರೆ ಕೇವಲ ಹಿಂದೂಧರ್ಮದ ಪ್ರತಿಷ್ಠೆ ಹಾಗೂ ಪ್ರತಿಪಾದನೆಯಲ್ಲ. ಜಾತ್ಯಾತೀತತೆ ಎಂದರೆ ಯಾವೊಂದು ಜಾತಿಯ ಪ್ರಾಬಲ್ಯವೂ ಅಲ್ಲ. ಧರ್ಮನಿರಪೇಕ್ಷತೆ ಎಂದರೆ ಧರ್ಮಗಳ ಜಗಳವಲ್ಲ. ಜಾತಿ, ವರ್ಗ ಹಾಗೂ ಮತಧರ್ಮಗಳೇ ಇಲ್ಲದ ಸ್ಥಿತಿಯೊಂದು ಬಂದರೆ ನನ್ನಂಥವರಿಗೆ ಖಂಡಿತ ಸಂತೋಷವಾಗುತ್ತದೆ. ಆದರೆ ಅಂತಹ ಸನ್ನಿವೇಶದ ಸಾಧ್ಯತೆ ಇಲ್ಲದಿರುವಾಗ ನಾವು ಜಾತ್ಯಾತೀತತೆಯನ್ನು ಹೇಗೆ ಅರ್ಥಮಾಡಿಕೊಳ್ಳಬೇಕು ಎಂಬುದೇ ನಮ್ಮೆದುರಿನ ಪ್ರಶ್ನೆ. ನಮ್ಮ ಸಂವಿಧಾನ ಸಹ ಜಾತಿ ಮತ್ತು ಧರ್ಮಗಳ ಸಮಾನತೆಯ ಆಶಯವನ್ನು ಸಾದರಪಡಿಸುತ್ತದೆ. ಮೇಲುಗೈ ವಾದವನ್ನು ನಿರಾಕರಿಸುತ್ತದೆ. ಇದು ಪರಂಪರಾಗತ ಪ್ರತಿಷ್ಠೆಯಿಂದ ಅಸಮಾನತೆಯನ್ನು ವಿಸ್ತರಿಸುತ್ತ ಬಂದ ಜಾತಿ, ವರ್ಗ ಮತ್ತು ಮತಧರ್ಮಗಳು ತಿಳಿದುಕೊಂಡು ಸಮತೋಲನ ದೃಷ್ಟಿಯನ್ನು ಬೆಳೆಸಿಕೊಳ್ಳಬೇಕಾಗಿದೆ. ಜಾತ್ಯಾತೀತತೆ ಮತ್ತು ಧರ್ಮನಿರಪೇಕ್ಷತೆಯ ಪಾಠ ಪ್ರಾರಂಭವಾಗಬೇಕಾದ್ದು ಇಲ್ಲಿಂದಲೇ ಎಂದು ಅರ್ಥಮಾಡಿಕೊಳ್ಳಬೇಕಾಗಿದೆ.

ಪ್ರೊ॥ ಬರಗೂರು ರಾಮಚಂದ್ರಪ್ಪ
"ಸಂವೇದನೆ", ೨೭೫, ೧೧ನೇ 'ಬಿ' ಕ್ರಾಸ್, ೧೪ನೇ ಮುಖ್ಯರಸ್ತೆ,
ಜೆ. ಪಿ. ನಗರ ೨ನೇ ಹಂತ, ಬೆಂಗಳೂರು - ೫೬೦ ೦೭೮



## ಅರ್ಥಕ್ಕೆ ನಿಂತ ಪದ್ಯ

ಬೆಳ್ಳಂ ಬೆಳಗೇ
ಕನಸ ರೂಪದಿ ಕಾಡುವ ಕವಿತೆ
ಹಾಲಿನವ ಸೈಕಲ್ ಸದ್ದಿನ ಜತೆಗೆ
ಅರ್ಥಕ್ಕೆ ನಿಂತು ಬಿಡುತ್ತದೆ.

ತುಳಸಿ, ನೀರು, ರಂಗವಲ್ಲಿಗಳ ಜತೆಗೆ
ಚಿತ್ರ, ಚಿತ್ತಾರ ಬಿಡಿಸುವ ಕವಿತೆ
ಕಾಫಿ ಆಯ್ತಾ ಎನ್ನುವ ಇವರ ಮಾತಿಗೆ
ಹೆದರಿ ಮೂಲೆ ಸೇರುತ್ತದೆ.

ಕುಕ್ಕರಿನ ಸದ್ದು, ಒಗ್ಗರಣೆಯ ಘಾಟು
ಲಯ ವಿನ್ಯಾಸದ ಕವಿತೆ ಸಾಲು
ಆಟೋ ಸ್ಕೂಟರುಗಳ ಹೊಗೆ ತುಂಬಿದಂತೆಲ್ಲಾ
ಮಧ್ಯೆ ಎಲ್ಲೋ ಮಾಯವಾಗಿ ಬಿಡುತ್ತದಲ್ಲಾ!

ಇನ್ನು ಸ್ನಾನ ಬಟ್ಟೆಗಳ ಸರದಿ
ಪಕ್ಕದ ಮನೆ ಆಂಟಿ ತರುವ ವರದಿ
ನಡು, ನಡುವೆ ಮತ್ತೆ ಪ್ರತ್ಯಕ್ಷ.

ಊಟ ಕೊಟ್ಟು, ಎದೆಗೊರಗಿಸಿಕೊಳ್ಳಬೇಕು
ಕುಶಲ ಕೇಳಿ, ಮಾತಿಗೆ ಕೂರಬೇಕು
ಎನ್ನುವಷ್ಟರಲ್ಲಿ
ಶಾಲೆ ಮುಗಿಸಿ ಬಂದ ಮಗನತ್ತ ಗಮನ
ಅರ್ಥಕ್ಕೆ ನಿಂತ ಪದ್ಯ.
ಮತ್ತೆ ಮುಂಜಾವದವರೆಗೂ ಕಾಯಬೇಕು.

ಜಿ. ಎಚ್. ತ್ರಿವೇಣಿ, W/o : ಎಚ್. ವಿ. ಶಿವಕುಮಾರ್, ಅಂಚೆ ಇಲಾಖೆ, ಕಡೂರು

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ

# ನನ್ನ ಕನಸಿನ ಕರ್ನಾಟಕ

ಇಂದು ನಾವು ಒಕ್ಕೂಟ ವ್ಯವಸ್ಥೆಯಲ್ಲಿ ಬದುಕುತ್ತಿದ್ದೇವೆ. ಈ ವ್ಯವಸ್ಥೆಗೆ ಭೂಮಿಕೆಯಾದ ಸಂವಿಧಾನವು ರಚನೆಯಾಗಿ ಈಗಾಗಲೇ ೫೩ ವರ್ಷಗಳು ಕಳೆದಿವೆ. ಈ ದಾರಿಯಲ್ಲಿ ಸಂವಿಧಾನದ ಆಶಯಗಳು ಸಾಕಾರಗೊಂಡಿಲ್ಲ ಎಂದು ಹೇಳಲಾಗದಿದ್ದರೂ ನಿರೀಕ್ಷಿತ ಮಟ್ಟದಲ್ಲಿ ಸಾಕಾರಗೊಂಡಿಲ್ಲ ಎಂಬುದು ಸ್ವಾತಂತ್ರ್ಯದ ಅರ್ಧ ಶತಮಾನದ ಸಾಧನೆಯಾಗಿದೆ ! ಸುಮಾರು ೫,೦೦೦ ಜಾತಿಗಳಿಂದ ವಿಭಜಿಸಲ್ಪಟ್ಟ ಇನ್ನೂ ಸರಿಯಾಗಿ ಹೇಳುವುದಾದರೆ ಶ್ರೇಣೀಕರಿಸಲ್ಪಟ್ಟ, ಭಾರತೀಯ ಸಮಾಜವು ಜಗತ್ತಿನ ಅರ್ಧ ಪಾಲು ನಾಚಿಕೆಯನ್ನು ತನ್ನದನ್ನಾಗಿಸಿಕೊಂಡಿದೆ. ಇದು ಭವ್ಯವೆಂದು ಜಾಹೀರಾತುಗೊಳ್ಳುತ್ತಿರುವ ಭಾರತದ ಯಾವತ್ತಿನ ಸತ್ಯ, ಇಂತಹ ಎಡೆಗಳಲ್ಲಿ ಸ್ವಾತಂತ್ರ್ಯದ ಕನಸುಗಳು ಸೊರಗುವುದು ಸಹಜ. ಇಂತಹ ವಿಕೃತ ಸಂಸ್ಕೃತಿಯನ್ನು ಹೊಂದಿರುವ ಕರ್ನಾಟಕ ಮತ್ತು ಭಾರತವನ್ನು ಆಳವಾಗಿ ಅರಿಯದ ಹೊರತು ವರ್ತಮಾನದಲ್ಲಿ ಭವಿಷ್ಯದ ಸಮಾಜವನ್ನು ಕಟ್ಟುವುದು ಸಾಧ್ಯವಿಲ್ಲ.

**ಜಾತ್ಯತೀತತೆಯ ಕನಸು**

ಜಗತ್ತಿನ ಚರಿತ್ರೆಯಂತೆ ಭಾರತದ ಚರಿತ್ರೆಯೂ ಸಾವಿರಾರು ವರ್ಷಗಳಿಂದ ವಿಕಾಸಗೊಳ್ಳುತ್ತಾ ಬಂದಿದೆ. ಎಲ್ಲ ದೇಶಗಳ ಸಂಸ್ಕೃತಿಯ ಸ್ವರೂಪವನ್ನು ಮನುಷ್ಯ-ಮನುಷ್ಯನ ನಡುವಿನ ಉತ್ಪಾದನಾ ಸಂಬಂಧಗಳು ನಿರ್ಧರಿಸಿರುವಂತೆ ಈ ದೇಶದ ಸಂಸ್ಕೃತಿಯನ್ನು ಸಹ ನಿರ್ಧರಿಸಿದೆ. ಇದರ ಮೂಲದಲ್ಲಿ ಎದ್ದು ಬಂದದ್ದು ವರ್ಗ ಕಲ್ಪನೆಯಾಗಿದೆ. ದುಡಿಯುವ ಮತ್ತು ದುಡಿಸಿಕೊಳ್ಳುವ ಎರಡು ವರ್ಗಗಳು ಇಲ್ಲಿ ಕಂಡುಬರುತ್ತವೆ. ಇದು ಜಾಗತಿಕ ಸತ್ಯ. ಆದರೆ ಭಾರತದಲ್ಲಿ ಮಾತ್ರ ದುಡಿಯುವ ವರ್ಗದ ಮುಗ್ಧತೆಯನ್ನು ಬಂಡವಾಳವನ್ನಾಗಿಸಿಕೊಂಡ ಪುರೋಹಿತಶಾಹಿಯು ಹಾಲು ಕರೆಯದಿದ್ದರೂ ತುಪ್ಪವನ್ನೇ ತಿನ್ನುವ ನೀತಿಯಿಂದಾಗಿ ಕುಲ ಕಸುಬುಗಳನ್ನು ದ್ವೀಪಗಳನ್ನಾಗಿಸಿದೆ. ಒಂದು ದ್ವೀಪದ ಜನರಿಗೆ ಮತ್ತೊಂದು ದ್ವೀಪಕ್ಕೆ ಹೋಗುವ ಚಲನೆಯನ್ನು ನಿಷೇಧಿಸಿದೆ. ಇಂತಹ ವೃತ್ತಿ ಸ್ಥಿರೀಕರಣದ ನೀತಿಯಿಂದಾಗಿ ಪುರೋಹಿತಶಾಹಿಗೆ ತುಪ್ಪ ಖಾಯಂ ಆಯಿತಲ್ಲದೆ ಸಾಮಂತಶಾಹಿಗೆ ಸಿಂಹಾಸನವೂ ಮೀಸಲಾತಿಯಂತಾಯಿತು.

ಹೀಗೆ ಸಮಾಜದ ಎರಡು ಪಟ್ಟಭದ್ರ ಹಿತಾಸಕ್ತಿಗಳಾದ ಪುರೋಹಿತಶಾಹಿ ಮತ್ತು ಸಾಮಂತಶಾಹಿಯ ನೀತಿಯಿಂದಾಗಿ ಭಾರತವೇ ವಿಶಿಷ್ಟವಾಯಿತು; ಅದರ ಸಾಮಾಜಿಕ ಗೋಡೆಗಳು ಹಿಮಾಲಯದಂತೆ ಸುಭದ್ರವೂ ಸಾಗರದಂತೆ ಅಲಂಘ್ಯವೂ ಆಯಿತು. ಇಂತಹ ನೆಲೆಯಲ್ಲಿ ಸ್ಥಾಪಿತಗೊಂಡದ್ದು ಜಾತಿ ವ್ಯವಸ್ಥೆ. ಇಂತಹ ವ್ಯವಸ್ಥೆ ಜಾತ್ಯತೀತವಾಗಿ ಮಾರ್ಪಡುವುದು ನಮ್ಮ ಕನಸುಗಳಲ್ಲಿ ಮೊದಲನೆಯದು.

**ಸಮಾಜವಾದಿ ಕನಸು**

ಭಾರತದ ಜಾತಿ ವ್ಯವಸ್ಥೆ ಸಾವಿರಾರು ಮಜಲುಗಳಿಂದ ಲಂಬಕೋನಾಕೃತಿಯಾಗಿ ನಿಂತಿರುವುದು ಈಗಾಗಲೇ ಸ್ಪಷ್ಟ. ಇದಕ್ಕೆ ಕುಲಮೂಲದ ಕಸುಬುಗಳು ಸಾವಿರಾರು ವರ್ಷಗಳಿಂದ ಪುಷ್ಟಿಯನ್ನು ನೀಡುತ್ತಾ ಬಂದಿವೆ. ಇಂತಹ ವ್ಯವಸ್ಥೆ ಮೊಟ್ಟಮೊದಲಿಗೆ ಕಂಪನಕ್ಕೊಳಗಾಗಿ ಸಡಿಲಗೊಂಡದ್ದು ಬ್ರಿಟಿಷ್ ವಸಾಹತು ಕಾಲದಲ್ಲಿ ಎಂಬುದನ್ನು ಗಮನಿಸಬೇಕು. ಅವರು ಭಾರತಕ್ಕೂ ತಂದ ಕೈಗಾರಿಕೀಕರಣದ ಫಲಿತವಾಗಿ ದೊಡ್ಡ ಕೈಗಾರಿಕೆಗಳು ನಿರ್ಮಾಣವಾದವು. ಅಲ್ಲಿ ಹಲವು ಜಾತಿ ಮೂಲದ ವ್ಯಕ್ತಿಗಳು ಪರಸ್ಪರ ಸೇರುವಂತಾಯಿತು. ಆಗ ಕುಲಕಸುಬುಗಳು (ಪೌರೋಹಿತ್ಯವನ್ನೂ ಸೇರಿ) ಛಿದ್ರವಾದವಲ್ಲದೆ ಕಾರ್ಮಿಕರು ಜಾತಿಗಳನ್ನು ದಾಟುವಂತಾಯಿತು. ಇದರಿಂದ ಸಂಘಟಿತ ಕಾರ್ಮಿಕ ವಲಯ ನಿರ್ಮಾಣಗೊಂಡು ತಮ್ಮ ಹಿಂದಿನ ಕುಲ ಮೂಲದ ಮತ್ತು ಅಸಂಘಟಿತ ಗುಡಿಕೈಗಾರಿಕೆಗಳ ಅನಿಶ್ಚಿತ ಸಂಪಾದನೆಯ ಚಿಂತನೆಯಿಂದ ಹೊರಬರುವಂತಾಯಿತು. ಇದರಿಂದ ತಮ್ಮ ಯೋಜಿತ ಬದುಕು ಮೊದಲಾಯಿತಲ್ಲದೆ ಹೊಸ ಶಿಕ್ಷಣ, ಸಾಮಾಜಿಕ ಘನತೆ, ಹೊಸ ಕಾಲವನ್ನು ಅರಿಯುವ ಚಿಂತನೆ ದೇಶದ ಚರಿತ್ರೆಗೆ ತಿರುವನ್ನು ನೀಡಿತು. ಹೀಗೆ ಬದಲಾದ ಹೊಸ ಜೀವನ ಕ್ರಮಕ್ಕೆ ಕಾರಣವಾದ ಸಂಗತಿ ಯಾವುದು, ಎಂಬುದನ್ನು ಗಂಭೀರವಾಗಿ ಯೋಚಿಸಬೇಕು.

ವಸಾಹತುಶಾಹಿಯು ಆಳದಲ್ಲಿ ಬಂಡವಾಳಶಾಹಿಯೇ ಆಗಿದೆ. ಇದು ಭಾರತೀಯ ಸಂದರ್ಭದಲ್ಲಿ ಕುಲಕಸುಬುಗಳನ್ನಾಧರಿಸಿದ ಜಾತಿ ವ್ಯವಸ್ಥೆಯನ್ನು ಸ್ಥಿರೀಕರಿಸಿಕೊಂಡು ಬಂದ ಸಾಮಂತಶಾಹಿ ಅಥವಾ ಊಳಿಗಮಾನ್ಯ ವ್ಯವಸ್ಥೆಗಿಂತ ಉತ್ತಮವಾದುದಾಗಿದೆ ಎಂಬುದು ಸಮಾಧಾನಕರ ಸತ್ಯ. ಇದಕ್ಕೆ ಕಾರಣ, ಸಮಾಜದ ಕೆಳರಚನೆಯಾದ ಉತ್ಪಾದನಾ ಸಂಬಂಧಗಳ ಬದಲಾದ ಸ್ವರೂಪ. ಇದು ಇಲ್ಲಿನ ಒಟ್ಟು ತತ್ವದಲ್ಲಿ ತೀವ್ರ ಪರಿಗಣನಯೋಗ್ಯ ಎಂಬುದನ್ನು ಎಲ್ಲಿಯೂ ಮರೆಯುವ ಹಾಗಿಲ್ಲ. ಇದನ್ನೇ ವಿವರಿಸುವುದಾದರೆ, ವಸಾಹತುಶಾಹಿಯ ಹಿಂದಿನ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಜಮೀನ್ದಾರಿ ಪದ್ಧತಿಯೇ ಪ್ರಧಾನವಾಗಿತ್ತು. ಇಲ್ಲಿಯ ಕೃಷಿ ಮೂಲದ ಉತ್ಪಾದನಾ ಸಂಬಂಧಗಳು ಸಮಾಜದಲ್ಲಿ ದುಡಿಸಿಕೊಳ್ಳುವ ಮತ್ತು ದುಡಿಯುವ ವರ್ಗವನ್ನು ನಿರ್ಮಾಣ ಮಾಡಿತ್ತು. ದುಡಿಯುವ ವರ್ಗಕ್ಕೆ ಅನಿಯಮಿತ ಶ್ರಮ, ನ್ಯಾಯವಲ್ಲದ ಕೂಲಿ, ಬದುಕಿನ ಅಭದ್ರತೆ ಸಾಮಾನ್ಯವಾಗಿತ್ತು. ಇಂತಹ ವರ್ಗವು ಸಮಾಜದಲ್ಲಿ ಪ್ರಧಾನವಾಗಿತ್ತು. ಆದರೆ ಪ್ರಧಾನವಲ್ಲದ ಮತ್ತು ಭೌತಿಕ ಶ್ರಮಕ್ಕೆ ದೂರವಿದ್ದ ದುಡಿಸಿಕೊಳ್ಳುವ ವರ್ಗವು ಸುಖದ ಸುಪ್ಪತ್ತಿಗೆಯಲ್ಲಿ ಮೆರೆಯುತ್ತಿತ್ತಲ್ಲದೆ, 'ದಾನ', 'ಉಪವಾಸ', 'ಧ್ಯಾನ', 'ಸಂಗೀತ', 'ಕಾವ್ಯ' ಮೊದಲಾದವುಗಳನ್ನು ತನ್ನ ಆಸಕ್ತಿಗಳನ್ನಾಗಿಸಿಕೊಂಡಿತ್ತು. ಇಂತಹ ವರ್ಗಕ್ಕೆ ಆಗ ದುಡಿಯುವುದು, ಅವರ

**ಈ ದೇಶದ ಇವತ್ತಿನ ಒಟ್ಟು ಸಾಲವು ಒಂದು ಅಂಕಿ ಅಂಶದ ಪ್ರಕಾರ ರೂ. ೧೫,೦೦೦,೦೦ ಕೋಟಿ ಆಗಿದೆ. ಸ್ವಿಸ್ ಬ್ಯಾಂಕ್‌ನಲ್ಲಿರುವ ನಮ್ಮ ದೇಶದ ಬಂಡವಾಳಿಗರ ಕಪ್ಪು ಹಣ ರೂ. ೪೦,೦೦೦,೦೦ ಕೋಟಿ ಆಗಿದೆ. ಈ ೪೦,೦೦೦,೦೦ ಕೋಟಿ ಹಣ ಈ ದೇಶದ ಶ್ರೀಮಂತರಿಗೆ ಎಲ್ಲಿಂದ ಬಂತು ? ಅವರ ಶ್ರಮಕ್ಕೆ ಅಷ್ಟೊಂದು ಬೆಲೆಯೇ ? ಇಲ್ಲವಾದಲ್ಲಿ ಅದು ಯಾರ ಶ್ರಮಕ್ಕೆ ಸಲ್ಲಬೇಕಾದ ನ್ಯಾಯ ?ಸಮಾಜದಿಂದ ಉತ್ಪನ್ನವಾದ ಸಂಪತ್ತು ಸಮಾಜಕ್ಕೆ ಹಂಚಿಕೆಯಾಗುವುದು ಅನ್ಯಾಯವೇ ? ಇಂತಹ ಕನಸನ್ನುಳ್ಳ ಸಮಾಜವಾದೀ ವ್ಯವಸ್ಥೆ ನಮ್ಮದಾಗುವುದು ಸ್ವಾತಂತ್ರ್ಯದ ಆಶಯವಲ್ಲವೇ ?**

ಪಾದುಕೆಗಳನ್ನು ಶಿರದ ಮೇಲೆ ಹೊತ್ತು ಸಂಭ್ರಮಿಸುವುದು, ಯುದ್ಧದಂತಹ ಸಂದರ್ಭಗಳಲ್ಲಿ 'ಬಲಿ'ಯಾಗುವುದು ಆದರ್ಶಗಳಾಗಿ ಮಾರ್ಪಟ್ಟವು. ಪುರುಷ ಮತ್ತು ರಾಜಪರವಾದ ವ್ಯವಸ್ಥೆಯಲ್ಲಿ ಹಿಂದಿನಿಂದಲೂ ಎರಡನೇ ದರ್ಜೆಯ ಪ್ರಜೆಯಾದ ಮಹಿಳೆ ಸಹಗಮನಕ್ಕೆ ಬಲಿಯಾಗುವುದೋ, ವಿಧವೆಯೋ ಆಗುವುದು ಪರಮ ಮೌಲ್ಯವಾಯಿತು. ಇಂತಹ ಸನ್ನಿವೇಶದಲ್ಲಿ ವಸಾಹತುಶಾಹಿ-ಬಂಡವಾಳಶಾಹಿಯ ಪ್ರವೇಶದಿಂದ ಉಂಟಾದ ಹೊಸ ಆರ್ಥಿಕ ಸಂಬಂಧಗಳು ಸಹಜವಾಗಿಯೇ ಭಾರತೀಯ ಸಂಸ್ಕೃತಿಯ ಸಾಮಾಜಿಕ ಸ್ವರೂಪವನ್ನು ಬದಲಾಯಿಸಿದವು.

ಒಂದು ಸಮಾಜದ ಸಾಮಾಜಿಕ ಸಂಬಂಧಗಳು ಮತ್ತು ಸಂಸ್ಕೃತಿಯ ಸ್ವರೂಪವು ಮನುಷ್ಯ-ಮನುಷ್ಯನ ನಡುವೆ ಇರುವ ಆರ್ಥಿಕ ಸಂಬಂಧಗಳ ಮೂಲದ್ದು ಎಂಬುದು ಈಗಾಗಲೇ ಜಗತ್ತು ಒಪ್ಪಿರುವ ವೈಜ್ಞಾನಿಕ ಸತ್ಯ. ಆದ್ದರಿಂದ ಹೊಸ ಕರ್ನಾಟಕ ಮತ್ತು ಭಾರತ ನಿರ್ಮಾಣದ ಕನಸುಗಳು ಸಮಾಜದೊಳಗಿನ ಆರ್ಥಿಕ ಸಂಬಂಧಗಳನ್ನು ಬದಲಾಯಿಸಿಕೊಳ್ಳುವುದರಿಂದ ಮಾತ್ರ ನನಸಾಗುತ್ತದೆಂಬುದು ನಾವು ಒಪ್ಪಿರುವ ತತ್ವವಾಗಿದೆ.

**ಸ್ವಾತಂತ್ರ್ಯದಿಂದ ಪರತಂತ್ರದೆಡೆಗೆ**

ವಸಾಹತು ಕಾಲದ ಬ್ರಿಟಿಷರ ಆಳ್ವಿಕೆಯು ವಾಸ್ತವವಾಗಿ ಬಂಡವಾಳ ಶಾಹಿಯ ಆಳ್ವಿಕೆಯೇ ಆಗಿತ್ತು. ಅಲ್ಲಿ 'ಸಾಮಾಜಿಕ' ಚಿಂತನೆಗಿಂತ 'ಆರ್ಥಿಕ ಚಿಂತನೆ'ಯೇ ಪ್ರಧಾನವಾಗಿರುತ್ತದೆ. ಇದರಿಂದಾಗಿ, ಹಗಲುದರೋಡೆ, ಲಾಭಕೋರತನ, ಅದಕ್ಕಾಗಿ ಒಡೆದು ಆಳುವ ನೀತಿ, ಸಾಧ್ಯವಾದಲ್ಲಿ ಗುಂಡು – ಇವು ಸೂರ್ಯಸ್ಪಷ್ಟ. ಇಂತಹ ಆಳ್ವಿಕೆಯಿಂದ ದೇಶದ ಸಾಮಂತರು, ಭೂ ಮಾಲೀಕರು, ಪುರೋಹಿತರು ನಲುಗಿದ್ದಾರೆ, ನಿಜ. ಆದರೆ ಸಾವಿರಾರು ವರ್ಷಗಳಿಂದಲೂ ಇವರ ಶೋಷಣೆಗೊಳಪಟ್ಟು ದುಡಿಯುತ್ತಾ ಬಂದ ದೇಶದಲ್ಲಿ ಬೆಳೆದ ದುಡಿಯುವ ವರ್ಗವು ಬ್ರಿಟಿಷರಿಂದ ಅನುಭವಿಸಿದ ನಷ್ಟ ಕಡಿಮೆಯೇ ಆಗಿದೆ ಅಥವಾ ಕೊಂಚ ಲಾಭವಾಗಿದೆಯೆಂದರೂ ತಪ್ಪಾಗದೆ, ತರ್ಕಪೂರಕವಾಗುತ್ತದೆ. ಆದ್ದರಿಂದ ಬ್ರಿಟಿಷ್ ಬಂಡವಾಳಶಾಹಿಯ ಶೋಷಣೆಗೊಳಪಟ್ಟದ್ದು ಭಾರತದ ಸಾಮಂತಶಾಹಿ ಮಾತ್ರ ಎಂಬುದು ಇನ್ನಷ್ಟು ಸತ್ಯದ ಮಾತಾಗುತ್ತದೆ. ಆದ್ದರಿಂದ ಇಲ್ಲಿ ಸ್ವಾತಂತ್ರ್ಯದ ಅತ್ಯಂತ ಪ್ರಾಥಮಿಕ ಆಸೆ ಯಾರಿಗೆ ಎಂಬುದು ಸ್ಪಷ್ಟವಾಗಬೇಕು. ಈ ನೆಲೆಯಲ್ಲಿಯೇ ಗಾಂಧೀ ಮಾದರಿಯ ಜನಪ್ರಿಯ ಹೋರಾಟಕ್ಕಿಂತ ಆಳದಲ್ಲಿ ಗಟ್ಟಿಯಾದ ಮಾರ್ಕ್ಸ್ ಮತ್ತು ಅಂಬೇಡ್ಕರ್‌ವಾದಿ ಸೈದ್ಧಾಂತಿಕ ಹೋರಾಟವನ್ನು ವಿವರಿಸಿಕೊಳ್ಳಬೇಕು. ಇದರ ವಿವರಣೆಯ ಒಟ್ಟು ಫಲಶ್ರುತಿಯೆಂದರೆ, ವಿದೇಶಿ ಬಂಡವಾಳಶಾಹಿ ನೀಡಿದ ಸ್ವಾತಂತ್ರ್ಯವು ಸ್ವದೇಶಿ ಬಂಡವಾಳಶಾಹಿಗೆ ವರ್ಗಾವಣೆಗೊಂಡದ್ದು.

೧೯೪೭ರ ಸ್ವಾತಂತ್ರ್ಯ, ೧೯೫೦ರ ಸಂವಿಧಾನ ಮತ್ತು ಗಣರಾಜ್ಯ : ಇವು ಅನಂತರ ಏನಾದವು ? ೧೯೯೦ರವರೆಗಿನ ರಾಷ್ಟ್ರೀಕರಣದ ಹಾದಿ - ಒಂದು. ಅನಂತರದಲ್ಲಿ ಗ್ಯಾಟ್ ಒಪ್ಪಂದದ ಪರಿಣಾಮವಾಗಿ ತೆರೆದುಕೊಂಡ ಖಾಸಗೀಕರಣದ ಹಾದಿ - ಇನ್ನೊಂದು. ಈ ಎರಡೂ ಹಾದಿಗಳು ಪರಸ್ಪರ ವಿರುದ್ಧ ದಿಕ್ಕಿನ ನಡಿಗೆಗಳಿಗೆ ಒತ್ತಾಸೆಯಾದವು ಎಂಬುದು ಗಮನಾರ್ಹವಾಗಿದೆ. ಆದರೂ ೪೭ರ ನಂತರ ಹೊಸ ಭಾರತದಲ್ಲಿ ಸಂವಿಧಾನದ ಆಣತಿಯ ಮೇರೆಗೆ ನಾವೆಲ್ಲರೂ ಸಮಾಜವಾದಿ ಸಮಾಜವನ್ನು ಕಟ್ಟುವ ಕನಸನ್ನು ಕಂಡೆವು. ಸಮಾಜದ ಉತ್ಪಾದನೆ ಮತ್ತು ಅದರ ಲಾಭ ಅಂತಿಮವಾಗಿ ಒಟ್ಟು ಸಮಾಜಕ್ಕೇ ಸಂದಾಯವಾಗಬೇಕು ಎಂಬುದು ಇದರ ಆಶಯ. ಆದರೆ ಆದದ್ದೇನು ? ದುಡಿಯುವ ವರ್ಗದ ಬದುಕು ಸುಂದರವಾಯಿತೇನು ? ಇದನ್ನು ಪೂರ್ಣವಾಗಿ ಒಪ್ಪುವಂತಿಲ್ಲ, ಕಾರಣ, ದುಡಿಯುವ ವರ್ಗದಲ್ಲಿಯೇ ಎರಡು ವಲಯಗಳಿವೆ.




೧. ಸಂಘಟಿತ ವಲಯ, ೨. ಅಸಂಘಟಿತ ವಲಯ.

ಈ ಸಂಘಟಿತ ವಲಯದಲ್ಲಿ ಕಾರ್ಖಾನೆಗಳಲ್ಲಿ ದುಡಿಯುವ ಕಾರ್ಮಿಕರು ಮತ್ತು ಸರ್ಕಾರಿ-ಖಾಸಗೀ ಕಚೇರಿ ಉದ್ಯಮಗಳಲ್ಲಿ ದುಡಿಯುವ ನೌಕರ ವರ್ಗವಿದೆ. ಇಲ್ಲಿಯ ಶ್ರಮಜೀವಿಗಳು ಸಂಘಟಿತರಾದುದರಿಂದ ತಮ್ಮ ಸಂಘಟನೆ ಮತ್ತು ಹೋರಾಟಗಳಿಂದ ನಿಯಮಿತ ಅವಧಿಯ ದುಡಿಮೆ, ಸೂಕ್ತ ವೇತನ, ರಜೆ ಸೌಲಭ್ಯ, ಬಡ್ತಿ, ಆರೋಗ್ಯ ಮೊದಲಾದ ಹಲವು ನಾಗರಿಕ ಸವಲತ್ತುಗಳನ್ನು ತನ್ನದಾಗಿಸಿಕೊಂಡಿದೆ. ಆದರೂ ಈ ವಲಯದಲ್ಲಿ ಶ್ರಮಿಕ, ಭೂಮಿ, ಬಂಡವಾಳಕ್ಕೆ ನೀಡಿ, ಅನಂತರ ಉಳಿದ ದೊಡ್ಡ ಮೊತ್ತವಾದ ಲಾಭವನ್ನು ಪುನರ್ ಹಂಚಿಕೆಗೆ ಒಳಪಡಿಸದ ಬಂಡವಾಳಿಗ ಅದನ್ನು ತನ್ನೊಬ್ಬನಲ್ಲಿ ಮಾತ್ರ ಶೇಖರಿಸಿಕೊಳ್ಳುತ್ತಾನೆ. ಈ ದೊಡ್ಡ ಮೊತ್ತದ ಲಾಭ ಶ್ರೀಮಂತ ಜೀವನ ನಿರ್ವಹಣೆಯ ವೆಚ್ಚವನ್ನೂ ಮೀರಿ ಹೊಸ ಬಂಡವಾಳವಾಗಿ ಮಾರ್ಪಡುತ್ತದೆ. ಇದರಿಂದ ಮತ್ತೊಂದು ಉದ್ಯಮದ ಸ್ಥಾಪನೆ ಮತ್ತು ಲಾಭದ ಮೂಲದ ಹೊಸ ಬಂಡವಾಳದ ಕ್ರೋಢೀಕರಣ ಸಾಧ್ಯವಾಗುತ್ತದೆ. ಇಂತಹ ಬಂಡವಾಳ ಮತ್ತು ಅಧಿಕ ಲಾಭವು ಶ್ರಮಿಕರ ಸಾಮಾನ್ಯ ಮತ್ತು ಬಂಡವಾಳಿಗರ ವಿಲಾಸೀ ಜೀವನದ ನಡುವಿನ ಅಡ್ಡಗೋಡೆಯಾಗುತ್ತದೆ. ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ, ದುಡಿಸಿಕೊಂಡ ವರ್ಗದ ಶ್ರಮದಷ್ಟೇ ಮೌಲಿಕವೂ ಮತ್ತು ಅದಕ್ಕಿಂತ ಮಹತ್ವದ್ದೂ ಆದ ಶ್ರಮಿಕರ ಶ್ರಮಕ್ಕೆ ಸಿಕ್ಕಿದ ಆರ್ಥಿಕ ನ್ಯಾಯ ಎಷ್ಟು ? ಎಂಬುದು. ಇಂತಹ ಆರ್ಥಿಕ ಅಂತರವು ಅಂತಸ್ತಿನ ಪ್ರಶ್ನೆಯನ್ನು ಹುಟ್ಟಿಸುತ್ತದಲ್ಲದೆ, ಸಾಮಾಜಿಕ ಅಂತರಕ್ಕೂ ನಾಂದಿ ಹಾಡುತ್ತದೆ. ಇಲ್ಲಿಂದಲೇ ದುಡಿಯುವ ಮತ್ತು ದುಡಿಸಿಕೊಳ್ಳುವ ಎರಡು ವರ್ಗಗಳ ಮೂಲದ ವರ್ಗ ಕಲ್ಪನೆ ಹುಟ್ಟಿಕೊಳ್ಳುವುದು. ಇಂತಹ ವರ್ಗ ತಾರತಮ್ಯದಿಂದಲೇ ವರ್ಗ ಸಮರ ಅನಿವಾರ್ಯವಾಗಿ, ಸಮಾಜವಾದವು ಪ್ರಸ್ತುತವಾಗುವುದು.

**ಸಾಮಾಜಿಕ ನ್ಯಾಯ**

ಹೀಗೆ ಸಂಘಟಿತ ವಲಯದ ಶ್ರಮಿಕರ ಸಂಕಷ್ಟವೇ ಇಂಥದ್ದಾಗಿರಬೇಕಾದರೆ ಇನ್ನು ಅಸಂಘಟಿತ ವಲಯದ ರೈತ, ಬಡಗಿ, ಕುಂಬಾರ, ಚಮ್ಮಾರ, ಕಮ್ಮಾರ, ವಡ್ಡ, ಉಪ್ಪಾರ, ಲಂಬಾಣಿ, ಕೊರಚ, ಕೊರಮ ಮೊದಲಾದವರ ಪಾಡೇನು ? ಇವರಿಗೆ ಯಾವ ರೀತಿಯಲ್ಲಿಯೂ ಬದುಕಿನಲ್ಲಿ ಸುಭದ್ರತೆ ಇಲ್ಲ. ಇದು ಇಲ್ಲವಾದ್ದರಿಂದ ಭವಿಷ್ಯದ ಬಗೆಗಿನ ಚಿಂತೆ ಶಾಶ್ವತ. ಪರಿಣಾಮವಾಗಿ ಅಭಿವೃದ್ಧಿಯೂ ಕಷ್ಟಸಾಧ್ಯ. ಇಂಥವರಿಗೆ ಪಾರ್ಲಿಮೆಂಟರಿ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಮೀಸಲಾತಿ ಅನಿವಾರ್ಯ. ಇದು ಶಾಶ್ವತ ಪರಿಹಾರವೇನಲ್ಲ; ಉತ್ಪಾದನಾ ಶಕ್ತಿಗಳೂ ನೆಮ್ಮದಿಯ ಬದುಕನ್ನು ನಡೆಸುವ ಸಮಾಜವಾದೀ ವ್ಯವಸ್ಥೆ ನಿರ್ಮಾಣವಾಗುವವರೆಗೆ ಅಗತ್ಯವಿರುವ ಒಂದು ತಾತ್ಕಾಲಿಕ ಅಗತ್ಯ. ಆದರೆ ಸ್ವತಂತ್ರ ಭಾರತದಲ್ಲಿ ಈ ಅಸಂಘಟಿತ ಮತ್ತು ಮೇಲ್‌ಶ್ರೇಣಿಗಳಲ್ಲಿನ ಅಸಂಖ್ಯ ಜಾತಿಗಳಿಂದ ಶೋಷಣೆಗೊಳಪಟ್ಟ ಈ ಕೆಳಜಾತಿಗಳ ಶ್ರಮಿಕರಿಗೆ ಸಮಾಜದ ಎಲ್ಲ ರಂಗಗಳಲ್ಲಿ ಮೀಸಲಾತಿ ಸಿಕ್ಕಿತೇ ? ಸಿಕ್ಕಿದೆ. ಆದರೆ ಅದು ಯಾವಾಗ ಸಾಧ್ಯವಾಯಿತೆಂಬುದನ್ನು ಪರಿಶೀಲಿಸಲೇಬೇಕು.

○ ಮೈಸೂರು ಸಂಸ್ಥಾನದಲ್ಲಿ ಅಂದಿನ ದೊರೆ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರಿಂದ ೧೯೧೪ರಲ್ಲಿ ಮೊಟ್ಟಮೊದಲಿಗೆ ಪರಿಶಿಷ್ಟ ಜಾತಿ ಮತ್ತು ಪಂಗಡದ ಜನರಿಗೆ ಮೀಸಲಾತಿ ದೊರೆಯಿತು.

○ ಇದು ಆನಂತರದಲ್ಲಿ ಇಡೀ ಭಾರತಕ್ಕೆ ವಿಸ್ತರಿಸಿತು. ಆದರೆ ದೇಶದಲ್ಲಿ ಶೇ. ೫೦ಕ್ಕೂ ಹೆಚ್ಚು ಇರುವ ಹಿಂದುಳಿದ ವರ್ಗಕ್ಕೆ ?

○ ೧೯೭೭ರಲ್ಲಿ ಕರ್ನಾಟಕದಲ್ಲಿ ಅಂದಿನ ಮುಖ್ಯಮಂತ್ರಿಗಳಾದ ಡಿ. ದೇವರಾಜು ಅರಸು ಅವರಿಂದ ಎಲ್. ಜಿ. ಹಾವನೂರು ವರದಿಯನ್ನು ಜಾರಿ ಮಾಡುವ ಮೂಲಕ ಇಡೀ ದೇಶದಲ್ಲಿ ಮೊಟ್ಟಮೊದಲಿಗೆ ಹಿಂದುಳಿದ ವರ್ಗಕ್ಕೆ ಮೀಸಲಾತಿಯನ್ನು ಕಲ್ಪಿಸಲಾಯಿತು. ಇದು ಕರ್ನಾಟಕದ ಕಥೆ.

○ ೧೯೯೦ರಲ್ಲಿ ಅಂದಿನ ಪ್ರಧಾನ ಮಂತ್ರಿ ವಿ. ಪಿ. ಸಿಂಗ್ ಅವರು ಮಂಡಲ್ ವರದಿಯನ್ನು ಜಾರಿ ಮಾಡುವ ಮೂಲಕ ಇಡೀ ದೇಶದಲ್ಲಿ ಹಿಂದುಳಿದ ವರ್ಗದವರಿಗೆ ಮೀಸಲಾತಿಯನ್ನು ಕಲ್ಪಿಸಿದರು.

ಹೀಗೆ ಮೀಸಲಾತಿ ಎಂಬ ಹೆಸರಿಗೆ ಸ್ವಾತಂತ್ರ್ಯಾನಂತರದ ಎಲ್ಲ ದಶಕಗಳಲ್ಲಿಯೂ ಅನಧಿಕೃತ ಜಾಹಿರಾತಿನ ಮೂಲಕವಾಗಿ ವ್ಯಾಪಕ ಪ್ರಚಾರ ದೊರೆತರೂ ಇಡೀ ದೇಶದ ಹಿಂದುಳಿದ ವರ್ಗಕ್ಕೆ ಸಾಮಾಜಿಕ ನ್ಯಾಯ ಕಲ್ಪಿಸಲು ಸಾಧ್ಯವಾದದ್ದು ಸ್ವಾತಂತ್ರ್ಯ ದೊರೆತ ೪೩ ವರ್ಷಗಳ ಅನಂತರ ಎಂಬುದನ್ನು ಗಮನಿಸಬೇಕು. ಇನ್ನು ಮಹಿಳಾ ಮೀಸಲಾತಿ ? ಇದು ಇಂದಿಗೂ ಗಗನ ಕುಸುಮ. ಪರಿಶಿಷ್ಟರಿಗೆ ಇವತ್ತಿನವರೆಗೂ ಯಾವುದೇ ರಾಜ್ಯ ಶೇ. ೧೮ರ ಮೀಸಲಾತಿಯನ್ನು ಸಂಪೂರ್ಣವಾಗಿ ಅನುಷ್ಠಾನಗೊಳಿಸಿಲ್ಲ. ಅದಕ್ಕಾಗಿಯೇ ಇತ್ತೀಚೆಗೆ ಬ್ಯಾಕ್‌ಲಾಗ್ ಹುದ್ದೆಗಳನ್ನು ತುಂಬುವ ಪ್ರಕ್ರಿಯೆ ನಡೆದದ್ದು.

ಮೀಸಲಾತಿಯೆಂದರೆ ಉದ್ಯೋಗ ನಿರ್ಮಾಣವಲ್ಲ; ಬಡತನ ನಿವಾರಣೆಯಲ್ಲ; ಇರುವ ಹುದ್ದೆಗಳನ್ನೇ ತುಂಬುವಾಗ ಪ್ರಾತಿನಿಧ್ಯವಿರದ ಜನಸಮುದಾಯಗಳಿಗೂ ನ್ಯಾಯಬದ್ಧ ಪ್ರಾತಿನಿಧ್ಯವನ್ನು ಕಲ್ಪಿಸುವುದು ಮಾತ್ರ.

ಇದು ಸಾಮಾಜಿಕ ನ್ಯಾಯದ ಪರಿಕಲ್ಪನೆ. ದೇಶವು ೭೦ರ ದಶಕದವರೆಗೆ ಅನೇಕ ಸಾರ್ವಜನಿಕ ಉದ್ಯಮಗಳನ್ನು ಸ್ಥಾಪಿಸುತ್ತಾ ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸುತ್ತಾ ಸಾಗಿತು. ಇಲ್ಲಿ ಸಾಮಾಜಿಕ ನ್ಯಾಯದ ಕಲ್ಪನೆಗೆ ಮನ್ನಣೆ ಇದೆ. ಆದರೆ ಇದರ ಪ್ರತಿರೂಪವಾದ ಮೀಸಲಾತಿ ಇಲ್ಲಿ ಅರ್ಧದಷ್ಟೂ ಅನುಷ್ಠಾನಕ್ಕೆ ಬರಲಿಲ್ಲ. ಇನ್ನು ೯೦ರ ದಶಕದಿಂದೀಚೆಗೆ ದೇಶವು ಜಾಗತೀಕರಣಗೊಳ್ಳುತ್ತ ಖಾಸಗೀ ರಂಗವನ್ನು ಬಲಗೊಳಿಸುತ್ತಿದೆ. ಈ ಮೂಲಕವಾಗಿ ತಾನು ಒಂದು ಬಗೆಯಲ್ಲಿ 'ಸಾರ್ವಜನಿಕ'ವಾಗದೆ 'ಖಾಸಗಿ'ಗೆ ಸೀಮಿತವಾಗುತ್ತಿದೆ. ಇಂತಹ ಎಡೆಗಳಲ್ಲಿ ಸಾಮಾಜಿಕ ನ್ಯಾಯವಾಗಲೀ, ಒಕ್ಕೂಟ ವ್ಯವಸ್ಥೆಯ ಧ್ಯೇಯೋದ್ದೇಶಗಳಾಗಲೀ, ಸಂವಿಧಾನ ಮತ್ತು ಅದರ ಕನಸುಗಳಾಗಲೀ ಅನುಷ್ಠಾನಗೊಳ್ಳಲು ಹೇಗೆ ಸಾಧ್ಯ ? ಇದು ಸ್ವಾತಂತ್ರ್ಯದ ಆಶಯವೇ ? ಸ್ವತಂತ್ರ ಭಾರತ ಸಾಗಬೇಕಾದ ದಿಕ್ಕೇ ? ಈ ದಾರಿಯಲ್ಲಿ ಬಂಡವಾಳಶಾಹಿ ವ್ಯವಸ್ಥೆಗೆ ವಿರುದ್ಧವಾದ ಸಮಾಜವಾದೀ ವ್ಯವಸ್ಥೆ ಮೂಡಲು ಸಾಧ್ಯವೇ ? ಈ ಹಿನ್ನೆಲೆಯಲ್ಲಿಯೇ ನಾವು ಪಡೆದ ಸ್ವಾತಂತ್ರ್ಯವು ಪರತಂತ್ರವಾಗುತ್ತಾ ಅಂದಿನ ವಸಾಹತುಶಾಹಿಯ ಜಾಗದಲ್ಲಿ ಇಂದಿನ ಜಾಗತಿಕ ನವವಸಾಹತುಶಾಹಿಯು ನೆಲೆಯೂರುತ್ತಿರುವುದು.

ಒಟ್ಟಾರೆ ೪೭ರ ಪೂರ್ವದ ವಸಾಹತುಶಾಹಿಯ ಜಾಗದಲ್ಲಿ ಇಂದು ನವವಸಾಹತುಶಾಹಿಯಿದೆ. ಅಂದಿನ ಬಂಡವಾಳಶಾಹಿಗೂ ಇಂದಿನ ಬಂಡವಾಳಶಾಹಿಗೂ ತಾತ್ವಿಕವಾಗಿ ವ್ಯತ್ಯಾಸವಿಲ್ಲ. ಆದರೆ ಅಂದಿನ ಸಮಾಜವಾದೀ, ಜಾತ್ಯತೀತ ಸಮೃದ್ಧ ಕರ್ನಾಟಕ – ಭಾರತದ ಕನಸು ಮಾತ್ರ ಇಂದಿಗೂ ಕನಸಾಗಿಯೇ ಉಳಿದಿದೆ. ಇದು ನಮ್ಮ ಮುಂದಿರುವ ಇವತ್ತಿನ ಸವಾಲು.

### ಸಮಾಜವಾದದೆಡೆಗೆ

ಈ ದೇಶದ ಇವತ್ತಿನ ಒಟ್ಟು ಸಾಲವು ಒಂದು ಅಂಕಿ ಅಂಶದ ಪ್ರಕಾರ ರೂ. ೧೫,೦೦೦,೦೦ ಕೋಟಿ ಆಗಿದೆ. ಸ್ವಿಸ್ ಬ್ಯಾಂಕ್‌ನಲ್ಲಿರುವ ನಮ್ಮ ದೇಶದ ಬಂಡವಾಳಿಗರ ಕಪ್ಪು ಹಣ ರೂ. ೪೦,೦೦೦,೦೦ ಕೋಟಿ ಆಗಿದೆ. ಈ ೪೦,೦೦೦,೦೦ ಕೋಟಿ ಹಣ ಈ ದೇಶದ ಶ್ರೀಮಂತರಿಗೆ ಎಲ್ಲಿಂದ ಬಂತು ? ಅವರ ಶ್ರಮಕ್ಕೆ ಅಷ್ಟೊಂದು ಬೆಲೆಯೇ ? ಇಲ್ಲವಾದಲ್ಲಿ ಅದು ಯಾರ ಶ್ರಮಕ್ಕೆ ಸಲ್ಲಬೇಕಾದ ನ್ಯಾಯ ? ಸಮಾಜದಿಂದ ಉತ್ಪನ್ನವಾದ ಸಂಪತ್ತು ಸಮಾಜಕ್ಕೆ ಹಂಚಿಕೆಯಾಗುವುದು ಅನ್ಯಾಯವೇ ? ಇಂತಹ ಕನಸನ್ನುಳ್ಳ ಸಮಾಜವಾದೀ ವ್ಯವಸ್ಥೆ ನಮ್ಮದಾಗುವುದು ಸ್ವಾತಂತ್ರ್ಯದ ಆಶಯವಲ್ಲವೇ ? ಈ ದಿಕ್ಕಿನ ಸಮಾಜವಾದೀ ಚಿಂತನೆ-ಸಂಘಟನೆ ಮತ್ತು ಕ್ರಿಯೆ – ಇವು ಮಾತ್ರ ಈ ದೇಶಕ್ಕೆ ಮುಕ್ತಿಯನ್ನು ಕೊಡಬಲ್ಲವು. ಈ ನೆಲೆಯಲ್ಲಿಯೇ ರಾಜಕೀಯ ಪಕ್ಷಗಳೆಂದು ಜಾಹಿರಾತುಗೊಳ್ಳುತ್ತಿರುವ ವಿವಿಧ ರಾಜಕೀಯ ಗುಂಪುಗಳ ಬೂರ್ಜ್ವಾ ಆಡಳಿತವನ್ನು ವಿಶ್ಲೇಷಿಸಿಕೊಳ್ಳಬೇಕು. ಆಗ ಕಾಣುವ ಹೊಸ ದಿಗಂತದಲ್ಲಿ ಕೆಂಪು ಸೂರ್ಯ ಹುಟ್ಟಬೇಕು.

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ
'ಅಕ್ಷರ', ೯೬೫, ೧ನೇ ಮುಖ್ಯರಸ್ತೆ, ಚಿನ್ನಣ್ಣ ಬಡಾವಣೆ
ಕಾವಲ್ ಬೈರಸಂದ್ರ, ಬೆಂಗಳೂರು - ೫೬೦ ೦೩೨

ಸುದ್ದಿ ಚಿತ್ರ





ಅತಿಥಿಗಳು

## ವೈದ್ಯಸಾಹಿತ್ಯ ಪ್ರಚಾರ ಆಂದೋಲನ

### ಸತ್ಕಾರ ಸಮಾರಂಭ

**ನ**ವಕರ್ನಾಟಕ ಪ್ರಕಾಶನ ಮತ್ತು ಕನ್ನಡ ವೈದ್ಯಸಾಹಿತ್ಯ ಪರಿಷತ್ತು – ಈ ಎರಡು ಸಂಸ್ಥೆಗಳೂ ಸೇರಿ ಆಸ್ಪತ್ರೆಯಿಂದ ಆಸ್ಪತ್ರೆಗೆ ವೈದ್ಯಸಾಹಿತ್ಯ ಪ್ರಚಾರ ಆಂದೋಲನವನ್ನು ಯಶಸ್ವಿಯಾಗಿ ನಡೆಸಿದವು. ೭.೭.೨೦೦೩ರಿಂದ ೧೨.೧೧.೨೦೦೩ರವರೆಗೆ ೧೨೦ ದಿನ ನಡೆದ ಈ ಕಾರ್ಯಕ್ರಮಕ್ಕೆ ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವೈದ್ಯಕೀಯ ಶಿಕ್ಷಣ ಇಲಾಖೆ, ಸರಕಾರಿ ಮತ್ತು ಖಾಸಗಿ ಆಸ್ಪತ್ರೆಗಳು ಸಹಕಾರ ನೀಡಿದವು.

ಈ ಆಂದೋಲನವನ್ನು ಯಶಸ್ವಿಯಾಗಿಸಲು ಸಹಕರಿಸಿದ ಗಣ್ಯರನ್ನು ೬.೨.೨೦೦೪ರಂದು ಹೊಟೆಲ್ ವುಡ್‌ಲ್ಯಾಂಡ್ಸ್‌ನಲ್ಲಿ ನಡೆದ ಸಮಾರಂಭದಲ್ಲಿ ಸತ್ಕರಿಸಲಾಯಿತು. ಈ ಸಮಾರಂಭದಲ್ಲಿ ಹಲವು ಆಸ್ಪತ್ರೆಗಳ ನಿರ್ದೇಶಕರು, ಅಧೀಕ್ಷಕರು, ಸ್ಥಾನೀಯ ವೈದ್ಯಾಧಿಕಾರಿಗಳು ಮತ್ತು ವೈದ್ಯಕೀಯ ಸಿಬ್ಬಂದಿ ಭಾಗವಹಿಸಿ ಸನ್ಮಾನ ಸ್ವೀಕರಿಸಿದರು. ಸಮಾರಂಭದಲ್ಲಿ ಆಂದೋಲನದ ಚಿತ್ರ ಪ್ರದರ್ಶನ ನಡೆಯಿತು.

ವೇದಿಕೆಯ ಮೇಲಿರುವವರು (ಎಡದಿಂದ ಬಲಕ್ಕೆ) ಡಾ|| ವಸುಂದರಾ ಭೂಪತಿ, ಡಾ|| ಸಿ. ಆರ್. ಚಂದ್ರಶೇಖರ್, ವೈದ್ಯಕೀಯ ಶಿಕ್ಷಣ ಇಲಾಖೆಯ ನಿರ್ದೇಶಕರಾದ ಡಾ|| ಮೀರಾ ಮೇವುಂಡಿ, ನಿಮ್ಹಾನ್ಸ್ ನಿರ್ದೇಶಕರು ಹಾಗೂ ಕುಲಪತಿಗಳಾದ ಡಾ|| ಡಿ. ನಾಗರಾಜ, ವೈದ್ಯಸಾಹಿತ್ಯ ಪರಿಷತ್ತಿನ ಅಧ್ಯಕ್ಷೆ ಡಾ|| ಲೀಲಾವತಿ ದೇವದಾಸ್, ನವಕರ್ನಾಟಕದ ಶ್ರೀ ಆರ್. ಎಸ್. ರಾಜಾರಾಮ್ ಮತ್ತು ಶ್ರೀ ಎನ್. ಗೋಪಾಲಕೃಷ್ಣ



ಅತಿಥಿಗಳು

# ಬರಗಾಲ

**ಮೂ**ಡಣದಲ್ಲಿ ಉದಯಿಸಿದ ಸೂರ್ಯನ ಕಿರಣಗಳು ಆ ಗುಡಿಸಿಲಿನ ಮೇಲು, ಆ ದೊಡ್ಡ ಬಂಗ್ಲೆಯ ಮೇಲೂ ಒಂದೇ ರೀತಿಯಾಗಿ ಬೀಳುತ್ತಿದ್ದವು.

ಲೂಚನ ಗುಡಿಸಲು ಗೌಡರ ತೋಟದ ಕೊನೆಯಲ್ಲಿತ್ತು, ಗೌಡರ ವಿಶಾಲ ಮನೆಯ, ಎತ್ತರಕ್ಕೆ ಏರಿದ್ದ ಹೆಂಚುಗಳು ಲೂಚನ ಗುಡಿಸಿಲಿನಿಂದ ಸ್ಪಷ್ಟವಾಗಿ ಕಾಣುತ್ತಿದ್ದವು.

ಲೂಚ ದಿನ ಬೆಳಿಗ್ಗೆ ಎದ್ದು ಮೊದಲು ತಲೆಯೆತ್ತಿ ನೋಡುವುದು ಈ ಹೆಂಚುಗಳ ಕಡೆಗೆ ಮತ್ತೆ ತಿರುಗಿ ನೋಡುವುದು ಮೂಡಣದ ಸೂರ್ಯನ ಕಡೆಗೆ.

ಲೂಚನಿಗೆ ತನ್ನದೇ ಆದ ಸಣ್ಣ ಭೂಮಿಯಿದೆ. ಗೌಡರೇ ಯಾವುದೋ ಕಾನೂನಿನಂತೆ ಅಳೆದುಕೊಟ್ಟದ್ದು. ಲೂಚನಂತೆ ಹಲವಾರು ಜನ ಊರಲ್ಲಿ ಹಾಗೆ ಸಣ್ಣಪುಟ್ಟ ಭೂಮಿ ಪಡೆದಿದ್ದರು.

ಮೊದಮೊದಲು ಲೂಚನಿಗೆ ತನ್ನದೇ ಭೂಮಿಯೆಂದು ಉಕ್ಕುವ ಸಂತೋಷ, ಎರಡೇ ವರ್ಷಗಳಲ್ಲಿ ಅವನ ಕನಸಿನ ಕೂಸಿನಂತೆ ಭೂಮಿಯಲ್ಲಿ ಪೈರು ತಲೆಯೆತ್ತಿ ನಿಂತಿತ್ತು. ಆ ವರ್ಷದಲ್ಲಿ ಮಳೆಯು ಚೆನ್ನಾಗಿ ಆಗಿತ್ತೆನ್ನಿ.



ಈಗೀಗ ಲೂಚನಿಗೆ ಭೂಮಿಯಲ್ಲಿ ಗೇಯುವುದು ತ್ರಾಸದಾಯಕವಾಗಿದೆ. ಮಳೆ ಬರದಿದ್ದಾಗ ನೀರಿಗಾಗಿ ಆತ ಹರಸಾಹಸ ಪಡಬೇಕಾಗಿದೆ. ಗೌಡರ ತೋಟದ ಅಂಚಿಗೆ ಅವನ ಭೂಮಿ ಇದ್ದದ್ದರಿಂದ ನೀರಿನ ಹರಿವು ಗೌಡರ ತೋಟದಿಂದಲೇ ಹಾದು ಬರಬೇಕು.

ಆದರೆ ಈ ಸಲ ನೀರು ಗೌಡರ ತೋಟದಿಂದ ಈಚೆ ಬರಲು ಮನಸ್ಸು ಮಾಡಲೇ ಇಲ್ಲ, ಲೂಚನ ಭೂಮಿ ಫಲ ಕೊಡಲೇ ಇಲ್ಲ.

ಇವುಗಳಿಂದ, ಆತನಿಗೆ ತಾನು ಮೊದಲು ಗೌಡರ ಭೂಮಿಯಲ್ಲಿ ಗೇಣಿಯಾಗಿ ದುಡಿಯುತ್ತಿದ್ದುದೇ ಈಗಿನ ಸ್ಥಿತಿಗಿಂತ ಆಗಬಹುದೆಂದು ಕೆಲವೊಮ್ಮೆ ಅನಿಸುತ್ತದೆ. ಆತನ ಹೆಂಡತಿ ಹಾಗೂ ಮಕ್ಕಳ ಪರಿಸ್ಥಿತಿ ಭೂಮಿಯ ಅಸ್ತಿತ್ವದ ಸುಳಿವೇ ಇಲ್ಲದಂತೆ ಹಾಗೆಯೇ ಇದೆ. ಹೆಂಡತಿಯ ಮಾತುಗಳಿಂದ ಧೈರ್ಯಗೊಂಡು ಗೌಡರ ಬಳಿ ಒಮ್ಮೆ ಹೋಗಿ ನೀರಿನ ವಿಷಯವಾಗಿ ಆತ ಮಾತನಾಡಿದ್ದ. ಗೌಡರ ತೋಟದಲ್ಲಿ ಅದ್ಭುತವಾಗಿ ಬಾವಿಯಿಂದ ನೀರು ಸೆಳೆಯುವ ಯಂತ್ರವನ್ನು ಕಂಡಿದ್ದ. ಅದರಿಂದ ಚಿಮ್ಮುವ ನೀರಿನ ರಭಸವನ್ನು ಕಂಡು ಉಗುಳು ನುಂಗಿದ್ದ. ಆದರೆ ಅವನ ತೋಟಕ್ಕೆ ನೀರು ಇನ್ನೂ ಬಂದೇ ಇಲ್ಲ.

ಇಂದು ಕೂಡಾ ಲೂಚ ಗೌಡರ ಮನೆಯ ಹೆಂಚುಗಳನ್ನೊಮ್ಮೆ ದಿಟ್ಟಿಸಿ ಸೂರ್ಯನನ್ನು ನೋಡಿದ. ಸೂರ್ಯ ಕರುಣೆಯಿಲ್ಲದಂತೆ ಉರಿಯುತ್ತಿದ್ದ. ಅವನ ಭೂಮಿ ಅಲ್ಲಲ್ಲಿ ಬಾಯಿ ತೆರೆದಿತ್ತು.

ಗೌಡರ ಮನೆಗೆ ಹೋಗಲು ಕಾಲುಗಳನ್ನು ಅವರ ಮನೆಯ ದಿಕ್ಕಿಗೆ ಎಳೆದ. ತನ್ನ ಸ್ವಂತ ಭೂಮಿಯೆಂಬುದು ಸಿಕ್ಕಿದ್ದರೂ ಆತ ಗೌಡರ ತೋಟದ ಕೆಲಸ ನಿಲ್ಲಿಸಿರಲಿಲ್ಲ. ಅವನು ಮಾಡುವ ಆ ಕೆಲಸಕ್ಕೆ ಅವನಿಗೆ ಗೌಡರ ತೋಟದಿಂದ ಬರುವ ಮಳೆಯ ನೀರು ದೊರಕುತ್ತಿತ್ತು. ಗೌಡರ ಮನೆಗೆ ಸಾಗುತ್ತಿದ್ದ ಲೂಚನಿಗೆ 'ತಾನು ಯಾಕಾಗಿ ಗೌಡರ ತೋಟದಲ್ಲಿ ದುಡಿಯಬೇಕು?' ಎಂಬ ಪ್ರಶ್ನೆ ಕಾಡತೊಡಗಿತು.

ಬಿಟ್ಟಿ ಕೆಲಸ, ಅದಕ್ಕೊಂದಿಷ್ಟು ನೀರು. ಸಂಬಳವಿಲ್ಲ.

''ಇವತ್ತು ಖಂಡಿತಾ ದುಡ್ಡು ಕೇಳಬೇಕು'' ಎಂದು ತನಗೆ ಕೇಳಿಸುವ ಹಾಗೆ ಹೇಳಿಕೊಂಡು ಗೌಡರ ತೋಟದಲ್ಲಿ ಹೆಜ್ಜೆ ಹಾಕಿದ.

ಫಕ್ಕನೆ ಲೂಚನ ದೃಷ್ಟಿ ಪೊಗದಸ್ತಾಗಿ ಬೆಳೆದ ಗೌಡರ ತೋಟದ ಬಾಳೆಗೊನೆಯ ಮೇಲೆ ಹೋಯಿತು. ಅಲ್ಲಿ ನಿಂತು ದೂರದಲ್ಲಿ ಕಾಣುವ ತನ್ನ ಜಮೀನಿಗೂ ದೃಷ್ಟಿ ಹಾಯಿಸಿದ. ಹೊಟ್ಟೆ ಉರಿಯಿತು.



ಅವಿನಾ ಮೆಂಡೋನ್ಸ

ಗುಡಿಸಿಲಿನ ಚಿತ್ರ ಆತನ ಕಣ್ಣ ಮುಂದೆ ಬಂದಿತ್ತು. ಎಲುಬಿನ ಗೂಡಾಗಿರುವ ಸದಾ ಒಲೆಯ ಮುಂದೆ ಕೂತು ಕೆಮ್ಮುವ ಹೆಂಡತಿ. ಹೊಟ್ಟೆ ಬೆನ್ನಿಗಂಟಿಕೊಂಡು ಮಲಗಿರುವ ಮಕ್ಕಳು. ಒಂದು ವಾರದಿಂದ ಇಬ್ಬರು ಮಕ್ಕಳು ಶಾಲೆಗೆ ಹೋಗುತ್ತಿರಲಿಲ್ಲ. ಕೊನೆಯವನಿಗೆ ಆರೋಗ್ಯ ನೆಟ್ಟಗಿರಲಿಲ್ಲ. ಮೊದಲನೆಯವನ ಕಾಲು ಹುಟ್ಟಿದಂದಿನಿಂದ ಸರಿಯಿರಲಿಲ್ಲ.

ಇದೆಲ್ಲ ನೆನೆಸಿ, 'ಯಾವ ಜನ್ಮದ ಕರ್ಮದ ಫಲವೋ ಭಗವಂತ' ಎಂಬ ಉದ್ಗಾರ ಲೂಚನ ಬಾಯಲ್ಲಿ ನಿಟ್ಟುಸಿರಿನ ಜೊತೆ ಹೊರಟಿತು. ಕಣ್ಣಲ್ಲಿ ನೀರು ತುಂಬಿತು. ತನ್ನ ಸುತ್ತಮುತ್ತ ಕತ್ತಲು ಆವರಿಸಿ ತನ್ನನ್ನು ನುಂಗುತ್ತಿದೆಯೆನಿಸಿತು. ಇಡೀ ತಲೆ ಸಿಡಿದು ಹೋಗುವಂತೆ ಅವನಿಗೆ ಮೈಕೈಯಲ್ಲೆಲ್ಲಾ ನೋವು ಆವರಿಸಿತು. ಅಲ್ಲೇ ಕುಳಿತು ಸುಧಾರಿಸಿಕೊಂಡ.

ಬಾಳೆಗೊನೆ ಅವನನ್ನು ಅಣಕಿಸುವಂತೆ ಆತನಿಗೆ ಕಂಡಿತು.

ಪುನಃ ತನ್ನ ಕಾಲುಗಳನ್ನು ಎಳೆದುಕೊಂಡು ಗೌಡರ ಅಂಗಳ ತಲುಪಿದ. ಗೌಡರ ನಾಯಿ ತನ್ನ ಬಲಿಷ್ಠ ಶರೀರವನ್ನೊಮ್ಮೆ ಕೊಡವಿ ಅವನ ಕಡೆ ನೋಡಿ ಮಲಗಿಕೊಂಡಿತು. ಅದರ ತಟ್ಟೆಯಲ್ಲಿ ಉಳಿದ ಮಾಂಸದ ತುಂಡುಗಳಿದ್ದುವು.

ಲೂಚ ಗಟ್ಟಿಯಾಗಿ ಕೆಮ್ಮಿದ. ಗೌಡರು ತಮ್ಮ ಗುಡಾಣದಂತಹ ಹೊಟ್ಟೆಯನ್ನು ಕುಣಿಸುತ್ತಾ ಹೊರಗೆ ಬಂದರು. ಬಾಯಲ್ಲಿದ್ದ ಕವಳವನ್ನು ಜಗಿಯುತ್ತಾ 'ಥು' ಎಂದು ಅಂಗಳದ ಪಕ್ಕ ಉಗುಳಿದರು. ಅಲ್ಲೆ ಪಡಸಾಲೆಯಲ್ಲಿ ಕುರ್ಚಿಯಲ್ಲಿ ಕುಳಿತುಕೊಂಡರು. ''ಏನು?'' ಎನ್ನುವ ದೃಷ್ಟಿಯಿಂದ ಲೂಚನ ಕಡೆಗೆ ನೋಡತೊಡಗಿದರು.

ಲೂಚ ಇನ್ನೊಮ್ಮೆ ತನ್ನ ಗಂಟಲು ಸರಿಪಡಿಸುತ್ತಾ ಒಂದು ಬಾರಿ ತನ್ನ ಹಲ್ಲು ಕಿರಿದು ''ಯಜಮಾನ್ರೇ ಮಳೆ ಇಲ್ಲದಂಗಾಯ್ತಲ್ಲ'' ಎಂದ. ಗೌಡರು ಹೂಂಗುಟ್ಟಿದರು.

''ಏನಾದರೂ ಕೆಲಸವಿದೆಯಾ ಯಜಮಾನ್ರೆ'' ಎಂದ. ಅದಕ್ಕೆ ಗೌಡರು ಇನ್ನೊಮ್ಮೆ ಉಗುಳಿ ''ಹೂಂ, ಒಂದು ಬಾಳೆಗೊನೆ ತೋಟದಲ್ಲಿದೆ. ಆ ಗಿಡಕ್ಕೆ ಸ್ವಲ್ಪ ನೀರು ಹಾಯಿಸು ಮತ್ತು ಕೊಟ್ಟಿಗೆಯಲ್ಲಿ ಸುಮಾರು ಕೆಲಸವಿದೆ ನೋಡ್ಕೊ'' ಎಂದು ಹೇಳಿ ಹೊರಟು ಹೋದರು. ಲೂಚ ಅವರು ಹೇಳಿದ ಕೆಲಸಗಳನ್ನೆಲ್ಲಾ ಮಾಡಿ ಮುಗಿಸುವಷ್ಟರಲ್ಲಿ ಸಂಜೆಯಾಗಿತ್ತು. ಗೌಡರ ಹೆಂಡತಿ ಮಧ್ಯಾಹ್ನದ ಊಟವನ್ನೇನೋ ದಯಪಾಲಿಸಿದ್ದಳು. ಆಗ ಲೂಚನಿಗೆ ಮನೆಯ ನೆನಪು ಬರದೇ ಇರಲಿಲ್ಲ.

ಸಂಜೆ ಪುನಃ ಗೌಡರೆದುರು ಹಲ್ಲುಕಿರಿದು ನಿಂತ. ''ಯಜಮಾನ್ರೇ, ಮನೆಯಲ್ಲಿ ಏನೂ ಇಲ್ಲ. ಸ್ವಲ್ಪ ದುಡ್ಡು...'' ಎಂದ. ಗೌಡರು ''ದುಡ್ಡಾ ಏನೂ ಇಲ್ಲ. ಬರಗಾಲ ಬೇರೆ. ಹೀಗೆ ಬಿಟ್ಟಿಗೆ ತೆಗೆದುಕೊಂಡು ಹೋಗಿ ವಾಪಸ್ಸು ಕೊಡೋದು ಅಲ್ಲೇ ಉಳಿಯಿತು'' ಎಂದರು. ಲೂಚನಿಗೆ ಆಘಾತವಾಯಿತು. ''ಇವತ್ತಿನ ಸಂಬಳ ಒಡೆಯ'' ಎಂದ.

''ಸಂಬಳ ಯಾತಕ್ಕೆ? ಮಧ್ಯಾಹ್ನ ಹೊಟ್ಟೆ ಬಿರಿಯುವ ತನಕ ಊಟ ಮಾಡ್ಲಿಲ್ಲೇನು?'' ಲೂಚನಿಗೆ ಬವಳಿ ಬಂದಂತಾಯಿತು. ತಿರುಗಿ ನಡೆಯತೊಡಗಿದ. ''ನಾಳೆ ಇಲ್ಲಿ ಬಂದು ಹೋಗು'' ಎಂಬ ಗೌಡರ ಮಾತು ಅಸ್ಪಷ್ಟವಾಗಿ ಕೇಳಿಸಿತು.

ದಾರಿಯಲ್ಲಿ ಪುನಃ ಆ ಬಾಳೆಗೊನೆ ಅವನ ಕಣ್ಣಿಗೆ ಬಿದ್ದಿತು. ಗುಡಿಸಿಲಿನಿಂದ ಸ್ವಲ್ಪ ದೂರದಲ್ಲಿ ಹೆಂಡತಿಯ ಜೋರು ದನಿ ಕೇಳಿಸುತ್ತಿತ್ತು. ಜೊತೆಗೆ ಅವನ ಎರಡನೆಯ ಮಗನ ಅಳು. ಗುಡಿಸಿಲಿನಲ್ಲಿ ಮಗನ ಸ್ಲೇಟು ಒಂದು ಕಡೆ. ಅದರ ಬದಿಯಲ್ಲಿ ಕಡ್ಡಿಗಳ ಚೂರು ಬಿದ್ದುಕೊಂಡಿದ್ದುವು. ಅದರ ಹತ್ತಿರದಲ್ಲೇ ಕೊನೆಯ ಮಗು ನಿಸ್ತೇಜವಾಗಿ ಬಿದ್ದುಕೊಂಡಿತ್ತು. ಮೂರನೆಯವನು ಮೂಲೆಯಲ್ಲಿ ಕೂತು ತನ್ನ ಇಂಗಿ ಹೋದ ಕಣ್ಣುಗಳಿಂದ ತಾಯಿಯು ತಮ್ಮನನ್ನು ಬಾರಿಸುತ್ತಿದ್ದುದನ್ನು ನೋಡುತ್ತಿದ್ದ. ಲೂಚ ಹೋಗಿ ಇಬ್ಬರನ್ನೂ ತಳ್ಳಿ ''ಯಾಕೆ ಮಗುವಿಗೆ ಹೊಡೆದು ಸಾಯಿಸ್ತೀಯಾ?'' ಎಂದು ಹೆಂಡತಿಗೆ ದುರುಗುಟ್ಟಿ ಕೇಳಿದ.

ಹೆಂಡತಿ ಅಲ್ಲೆ ಬಿದ್ದಿದ್ದ ಕಡ್ಡಿ ಚೂರುಗಳನ್ನು ಹೆಕ್ಕಿ ''ನೋಡಿ ನಿಮ್ಮ ಮಗ ಕದ್ದು ತಂದದ್ದು'' ಎಂದು ತೋರಿಸಿದಳು. ಲೂಚ ಅವನನ್ನು ತೆಗೆದುಕೊಂಡು ದಿಟ್ಟಿಸಿದ. ಬಳಿಕ ನೀರು ತುಂಬಿದ ಮಗನ ಕಣ್ಣುಗಳನ್ನು ನೋಡಿದ. ಲೂಚನ ಕನಸುಗಳ ಪ್ರತಿರೂಪದಂತೆ ಆತ ನಿಂತಿದ್ದ. ಲೂಚ ಅವನನ್ನು ಬಳಿಗೆ ಕರೆದ. ಕೈಯಲ್ಲಿ ಕಡ್ಡಿ ಕೊಟ್ಟು ''ಬರಿ'' ಎಂದು ಹೇಳಿ ತಲೆ ನೇವರಿಸಿದ. ಆತನ ಹೆಂಡತಿ ಬೆರಗುಗಣ್ಣಿನಿಂದ ಎಲ್ಲವನ್ನು ನೋಡುತ್ತಿದ್ದಳು. ಆ ರಾತ್ರಿ ತಿನ್ನಲು ಮನೆಯಲ್ಲಿ ಏನೂ ಇರಲಿಲ್ಲ. ನಿನ್ನೆಯ ದಿನವೇ ಆತನ ಹೆಂಡತಿ ಗಂಜಿಯೆನ್ನುವುದಕ್ಕಿಂತ ನೀರು ಎನ್ನಬಹುದು ಅದನ್ನು ಎಲ್ಲರಿಗೂ ಕೊಟ್ಟಿದ್ದಳು. ಇವತ್ತು ಬರಿ ನೀರು ಬಿಟ್ಟು ಮತ್ತೇನಿರಲಿಲ್ಲ. ರಾತ್ರಿ ಹೆಚ್ಚಾದಂತೆ ರೋಗಿ ಮಗನ ನರಳಾಟ ಹೆಚ್ಚಾಯಿತು. ಮೂರನೆಯ ಹುಡುಗಿ ಹೊಟ್ಟೆ ಉರಿಯೆಂದು ಹೊರಳಾಡತೊಡಗಿದಳು. ಆತನ ಹೆಂಡತಿ ತಲೆಗೆ ಕೈಯಿಟ್ಟು ಕುಳಿತಿದ್ದಳು. ಲೂಚನಿಗೆ ನಿಲ್ಲುವ ತ್ರಾಣವಿರಲಿಲ್ಲ. ಲೂಚ ಕೂತಲ್ಲಿಂದಲೇ ತನ್ನ ಗುಡಿಸಿಲನ್ನು, ಗುಡಿಸಲಿನಲ್ಲಿ ಇರುವವರನ್ನು ದಿಟ್ಟಿಸಿದ. ಏನನ್ನಿಸಿತೋ, ಎದ್ದು ಮೂಲೆಯಲ್ಲಿದ್ದ ಕತ್ತಿಯನ್ನು ಹಿಡಿದುಕೊಂಡ. ಕತ್ತಲೆಯಲ್ಲಿ ಮಾಯವಾದ.

ಲೂಚ ಹಿಂದಿರುಗಿದಾಗ ಆತನ ಕೈಯಲ್ಲಿ ಬಾಳೆಕಾಯಿಯ ಗೊನೆಯಿತ್ತು. ಸರಿ ಮಧ್ಯರಾತ್ರಿಗೆ ಎಲ್ಲರನ್ನು ಎಬ್ಬಿಸಿದ. ಆತನ ಹೆಂಡತಿ ಗಡಬಡಿಸಿ ಎದ್ದಳು. ಮೂಲೆಯಿಂದ ಮಗುವಿನ ನರಳಾಟ ಕೇಳುತ್ತಿತ್ತು. ಅವನ ಹೆಂಡತಿ ಎಲ್ಲರಿಗೂ ಬಾಳೆಕಾಯಿ ಹಂಚಿದಳು. ಲೂಚನ ಕಣ್ಣುಗಳನ್ನು ನೋಡಿ ಆಕೆ ಎಲ್ಲ ಅರ್ಥಮಾಡಿಕೊಂಡಂತಿತ್ತು. ಇಡೀ ಬಾಳೆಗೊನೆ ಖಾಲಿಯಾಯಿತು.

ಇಷ್ಟಾದ ಮೇಲೆ ಲೂಚನಿಗೆ ಏನೋ ತಳಮಳ ಪ್ರಾರಂಭವಾಯಿತು. ಹೆಂಡತಿಯ ಕಡೆ ನೋಡಿದ. ಹೆಂಡತಿ ತಟ್ಟನೆ ಒಲೆಯಲ್ಲಿ ಬೆಂಕಿ ಉರಿಸಿದಳು. ಆ ಬೆಳಕಲ್ಲಿ ಎಲ್ಲರ ಕಣ್ಣುಗಳು ಮಿಂಚುತ್ತಿದ್ದವು. ಆಕೆ ಎಲ್ಲ ಸಿಪ್ಪೆಯನ್ನು ಒಲೆಗೆ ಹಾಕಿದಳು. ಮುಂಜಾವಿನಲ್ಲಿ ಸಿಪ್ಪೆ ಎಲ್ಲ ಸುಟ್ಟು ಕೇವಲ ಬೂದಿ ಮಾತ್ರ ಉಳಿಯಿತು. ಗೌಡರ ಬಾಳೆಗೊನೆ ಸುಳಿವು ಇಲ್ಲದಂತೆ ನಾಪತ್ತೆಯಾಗಿತ್ತು.

ಮರುದಿವಸ ಮಗುವಿನ ನರಳಾಟ ಜೋರಾಗಿತ್ತು. ಬಾಳೆಕಾಯಿ ತಿಂದು ಅದರ ಆರೋಗ್ಯ ಇನ್ನೂ ಹದಗೆಟ್ಟಿತು. ಬಾಳೆಕಾಯಿ ಅದಕ್ಕೆ ಪಥ್ಯವಾಗಲಿಲ್ಲ. ಮಗು ಉಳಿಯುವ ಭರವಸೆ ಕ್ಷಣಕ್ಷಣಕ್ಕೂ ಕಡಿಮೆಯಾಗುತ್ತಿತ್ತು.

ಅಷ್ಟರಲ್ಲಿ ಲೂಚನಿಗೆ ಗೌಡರ ಮನೆಯಿಂದ ಕರೆ ಬಂದಿತು. ಲೂಚ ನಡುಗುವ ಕಾಲುಗಳಿಂದಲೇ ಗೌಡರ ಮನೆ ತಲುಪಿದ. ಎಲ್ಲ ಕೆಲಸದಾಳುಗಳು ಒಂದುಗೂಡಿದ್ದರು. ಗೌಡರು ಆತಂಕದಿಂದ ಪಡಸಾಲೆಯಲ್ಲಿ ಶತಪಥ ತಿರುಗುತ್ತಿದ್ದರು. ಆಮೇಲೆ ಮುಂದೆ ಬಂದು ಹೇಳಿದರು :

''ನಮ್ಮ ಬಾಳೆಗೊನೆ ಕಳುವಾಗಿದೆ. ಸತ್ಯನಾರಾಯಣ ಪೂಜೆಗೆ ಮೀಸಲಿರಿಸಿದ್ದು. ಯಾರು ಕದ್ದರೂ ಅವನಿಗೆ ಒಳ್ಳೆಯದಾಗಲಿಕ್ಕಿಲ್ಲ''. ಲೂಚನ ಕಾಲುಗಳು ನಡುಗತೊಡಗಿದವು. ಎಲ್ಲರೂ ನಿರುತ್ತರದಲ್ಲೇ ಸಮಾಧಾನ ಕಂಡಂತಿತ್ತು. ಅಷ್ಟರಲ್ಲಿ ಒಬ್ಬ ಪೊಲೀಸ್ ಪೇದೆ ಬಂದ. ಎಲ್ಲರೂ ಮನೆಗೆ ಹೋಗುವಂತೆ ಗೌಡರು ಉಸುರಿದರು. ಲೂಚ ಹೋಗುತ್ತಿದ್ದಾಗ ಗೌಡರು ಕರೆದು ''ನಿನ್ನೆ ಏನು ಬರಲಿಲ್ಲ?'' ಎಂದು ಕೇಳಿದಾಗ ಲೂಚ ಪೇದೆಯ ಕಡೆ ನೋಡುತ್ತಾ ''ಮೈ ಸರಿಯಿರಲಿಲ್ಲ'' ಎಂದು ತೊದಲಿದ.

ಇದಾದ ನಂತರ ಬಾಳೆಗೊನೆಯ ಸುಳಿವು ಎಲ್ಲೂ ಸಿಗಲಿಲ್ಲ. ಲೂಚನ ಮಗು ಸತ್ತು ಹೋಗಿತ್ತು. ಆತನೋ ಇದು ತಾನು ಬಾಳೆಗೊನೆ ಕದ್ದ ಪಾಪಕ್ಕೆ ಶಿಕ್ಷೆ ಎಂದು ಭಾವಿಸಿದ್ದ.

ಒಂದು ವಾರದ ಬಳಿಕ ಲೂಚನೇ ಬಾಳೆಗೊನೆ ಕದ್ದನೆಂಬ ಗುಲ್ಲು ಹರಡಿತು. ಅವನ ಶಾಲೆಗೆ ಹೋಗುವ ಮಗ ತಾನು ಬಾಳೆಕಾಯಿಗಳನ್ನು ತಿಂದಿದ್ದು ಹೇಳಿ ಅದು ಮಕ್ಕಳಿಂದ ಹಿರಿಯರಿಗೆ ಹಿರಿಯರಿಂದ ಇಡೀ ಊರಿಗೆ ಹರಡಿತ್ತು. ಪೊಲೀಸರು ಲೂಚನನ್ನು ಹಿಡಿದುಕೊಂಡು ಹೋದರು.

ಯಾವ ಪುರಾವೆ ಇಲ್ಲದೆ ಇದ್ದುದರಿಂದ ಲೂಚ ಹದಿನೈದು ದಿವಸದ ಜೈಲುವಾಸದ ನಂತರ ಗುಡಿಸಿಲಿಗೆ ಮರಳಿದ. ಅವನ ಕೈ ಕಾಲುಗಳು ಹೊಡೆತಗಳಿಂದ ಮುರಿದೇಹೋಗಿದ್ದುವು.

ಆದರೆ ಗುಡಿಸಿಲಿನ ಸ್ಥಿತಿ ಸುಧಾರಿಸಿದಂತೆ ಕಂಡಿತು. ಹೆಂಡತಿ ಕೂಡಾ ದೇಹದಲ್ಲಿ ಆರೋಗ್ಯದ ಕಳೆ ಸೂಸುತ್ತಿದ್ದಳು. ಆದರೆ ಆಕೆಯ ಕೊರಗು ಮುಖದಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತಿತ್ತು. ಆಕೆ ಗೌಡರ ಮನೆಗೆ ಕೆಲಸಕ್ಕೆ ಹೋಗಲು ಪ್ರಾರಂಭಿಸಿದ್ದಳು.

ಹಿಂದಿರುಗಿದ ಮೇಲೆ ಲೂಚನಿಗೆ ಕೆಲಸ ಮಾಡಲಾಗಲಿಲ್ಲ. ಒಂದು ಮೂಲೆಯಲ್ಲಿ ಮಲಗಲು ಪ್ರಾರಂಭಿಸಿದವನು ಕೊನೆಗೆ ಹಾಸಿಗೆ ಹಿಡಿದ.

ಈಗೀಗ ಪ್ರತಿದಿನ ಆತನ ಹೆಂಡತಿ ಸಿಂಗರಿಸಿಕೊಂಡು ಗೌಡರ ಮನೆಗೆ ಕೆಲಸಕ್ಕೆ ಹೋಗುತ್ತಿದ್ದಳು. ಮಕ್ಕಳ ಹೊಟ್ಟೆಗೆ ಏನೂ ಕೊರತೆಯಿರಲಿಲ್ಲ.

ಇದೆಲ್ಲ ಆಗಿ, ಮುಂದಿನ ವರ್ಷ ಸೂರ್ಯನ ಸುತ್ತ ಮೋಡ ಕಟ್ಟತೊಡಗಿತ್ತು. ಮಳೆ ಬಂದಿತ್ತು. ಆದರೆ ಲೂಚನಿಗೆ ಬರಗಾಲ ಮುಗಿದಿರಲಿಲ್ಲ.



**ಅವಿನಾ ಮೆಂಡೋನ್ಸ**
ಜೋಗತ್ತಿಬೆಟ್ಟು ಶಾಲೆಯ ಬಳಿ
ಎಸ್. ವಿ. ಸಿ. ರಸ್ತೆ
ಕಾರ್ಕಳ - ೫೭೪೧೦೪

# ಜನಪರ ಹೋರಾಟಗಾರರೆಲ್ಲರೂ ಭಯೋತ್ಪಾದಕರೇ ?

**ಪೊಲೀಸರು ಭಯೋತ್ಪಾದಕ ದಮನ ಕಾರ್ಯಾಚರಣೆಯ ಹೆಸರಿನಲ್ಲಿ ಎಲ್ಲೆಂದರಲ್ಲಿ ಜನರನ್ನು ಹತ್ಯೆಗೈಯ್ಯತೊಡಗುವಾಗ ಸುಮ್ಮನೆ ಕೂರುವಷ್ಟು ಸಂವೇದನಾಶೀಲರು ನಾವಾಗಬಾರದು; ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು. ನಮ್ಮ ಮಾಧ್ಯಮಗಳೂ ಕೂಡ ಇಂತಹ ವಿವೇಚನಾರಹಿತ ಪೊಲೀಸ್ ಅತಿರೇಕಗಳ ಬಗ್ಗೆ ಎಚ್ಚರದಿಂದ ಪ್ರತಿಕ್ರಿಯಿಸಬೇಕು.**

**ಶ್ರೀನಿವಾಸ ಕಾರ್ಕಳ**

ಬೆಂಗಳೂರಿನ ಮನೆಯೊಂದರಲ್ಲಿ ಯಾರೋ ಕೆಲವರು ವಾಸ್ತವ್ಯವಿರುತ್ತಾರೆ. ಹಠಾತ್ತಾಗಿ ಅತ್ಯಾಧುನಿಕ ಶಸ್ತ್ರಸಜ್ಜಿತ ಪೊಲೀಸರ ತಂಡ ಅಲ್ಲಿ ಪ್ರತ್ಯಕ್ಷವಾಗುತ್ತದೆ. ಮನೆಯನ್ನು ಸುತ್ತುವರಿದು ಹೆಣ್ಣು ಗಂಡೆಂಬ ಭೇದವಿಲ್ಲದೆ ಅಲ್ಲಿ ಒಳಗಿದ್ದವರನ್ನೆಲ್ಲ ಕೊಂದುಹಾಕುತ್ತದೆ. ಬಳಿಕ, ಓರ್ವ ಮಹಿಳೆ ಸಹಿತ ಅಲ್ಲಿ ಒಳಗಿದ್ದವರೆಲ್ಲರೂ ಭಯಾನಕ ಉಗ್ರಗಾಮಿಗಳೆಂದೂ, ಶರಣಾಗಲು ಹೇಳಿದಾಗ ಅವರು ಗುಂಡು ಹಾರಿಸಿದರು, ಪ್ರತಿಯಾಗಿ ಆತ್ಮರಕ್ಷಣೆಗೆಂದು ಗುಂಡು ಹಾರಿಸಿದಾಗ ಅವರೆಲ್ಲ ಹತರಾದರೆಂದೂ ಪೊಲೀಸರು ಮಾಧ್ಯಮದ ವರದಿಗಾರರಿಗೆ ವಿವರ ನೀಡುತ್ತಾರೆ. ಬಹುತೇಕ ಮಾಧ್ಯಮಗಳ ಮಂದಿ ಇದೇ ವಿವರಗಳಿಗೆ ಇನ್ನಷ್ಟು ಚುರುಕುಮುಟ್ಟಿಸಿ ಛಿದ್ರಗೊಂಡ ಶವಗಳ ಚಿತ್ರ ಸಹಿತ ವರ್ಣರಂಜಿತವಾಗಿ ವರದಿ ಮಾಡುತ್ತಾರೆ. ಈ ಮಾಧ್ಯಮಗಳ ಮಾತನ್ನು ಶಿರಸಾವಹಿಸಿ ನಂಬುವ ಬಹುತೇಕ ಓದುಗರು ಮತ್ತು ಶ್ರೋತೃಗಳು ಪೊಲೀಸರು ಕ್ರೂರ ಭಯೋತ್ಪಾದಕರನ್ನು ಕೊಂದು ತಮ್ಮನ್ನೆಲ್ಲ ರಕ್ಷಿಸಿದರೆಂದೂ, ಅಂತಹ ಕ್ರೂರಿಗಳಿಗೆ ತಕ್ಕ ಶಾಸ್ತಿಯಾಯಿತೆಂದೂ ತೀರ್ಮಾನಿಸುತ್ತಾರೆ; ಪೊಲೀಸರ ಶೌರ್ಯ ಸಾಹಸವನ್ನು ಕೊಂಡಾಡುತ್ತಾರೆ.

ಹೀಗೆ ಅಮಾನುಷವಾಗಿ ಕೊಲ್ಲಲ್ಪಟ್ಟ ಮಂದಿ ಅಮಾಯಕರಿದ್ದಿರಲೂಬಹುದು. (ಹಾಗೆ ಹೇಳುವುದಕ್ಕೆ ಅವರು ಬದುಕಿಲ್ಲವಲ್ಲ!) ಅವರು ಉಗ್ರಗಾಮಿಗಳೆಂದು ರುಜುವಾತಾದುದು ಹೇಗೆ ? ಒಂದು ವೇಳೆ ಉಗ್ರಗಾಮಿಗಳೇ ಆಗಿದ್ದರೂ ಅವರಿಗೆ ಶರಣಾಗಲು ಅವಕಾಶ ನೀಡಲಾಯಿತೇ ? ಕೊಲ್ಲದೆ ಬೇರೆ ದಾರಿಯೇ ಇರಲಿಲ್ಲವೇ ? ಸೆರೆ ಹಿಡಿಯುತ್ತಿದ್ದರೆ ಅನೇಕ ವಿಚಾರಗಳು ತಿಳಿದುಬರುತ್ತಿರಲಿಲ್ಲವೇ ? ತಮ್ಮ ಬಗ್ಗೆ ಹೇಳಿಕೊಳ್ಳಲು ಅವರಿಗೆ ಅವಕಾಶ ನೀಡಲಾಯಿತೇ ? ಅಪರಾಧಿಗಳೆಂದು ರುಜುವಾತಾಗುವುದಕ್ಕೆ ಮುನ್ನವೇ ಅವರನ್ನು ಶಿಕ್ಷಿಸಲು ಪರವಾನಗಿ ನೀಡಿದವರಾದರೂ ಯಾರು ? ಪ್ರಜಾತಂತ್ರ ವ್ಯವಸ್ಥೆಯಲ್ಲಿಯೂ ಹೀಗೆ ಮಾಡಲು ಪೊಲೀಸರಿಗೆ ಮುಕ್ತ ಅವಕಾಶ ನೀಡುವುದು, ಜನರು ಈ ಪ್ರಕ್ರಿಯೆಯನ್ನು ಪ್ರಶ್ನಿಸದೆಯೇ ಅಂಗೀಕಾರ ಮುದ್ರೆ ಒತ್ತುತ್ತಾ ಹೋಗುವುದು ಇವೆಲ್ಲ ನಡೆಯುತ್ತಾ ಹೋದರೆ, ಮುಂದೆ ವ್ಯವಸ್ಥೆಯು ತಮಗಾಗದವರನ್ನು, ತಮ್ಮನ್ನು ಪ್ರಶ್ನಿಸುವವರನ್ನು ಹೀಗೆಯೇ ನಿವಾರಿಸುತ್ತಾ ಹೋಗಬಹುದಲ್ಲವೇ ?

ಇತ್ತೀಚೆಗೆ ಮಾಧ್ಯಮದ ಗೆಳೆಯರೋರ್ವರು ಮನೆಗೆ ಬಂದಿದ್ದರು. ಲೋಕಾಭಿರಾಮವಾಗಿ ಮಾತನಾಡುತ್ತಾ 'ಕುದುರೆಮುಖದಲ್ಲಿ ನಕ್ಸಲೀಯ ಹಾವಳಿಯ ಬಗ್ಗೆ ನಿಮ್ಮ ವಾಹಿನಿ ಅತಿಯೆನಿಸುವ ಹಾಗೆ ವರದಿ ಮಾಡಿದ್ದು ಅದೇಕೋ ನನಗೆ ಸರಿ ಕಾಣಲಿಲ್ಲ. ನೆಲೆ ಕಳೆದುಕೊಳ್ಳುವ ಭೀತಿ ಎದುರಿಸುತ್ತಿರುವ ಆದಿವಾಸಿಗಳನ್ನು ಸಂಘಟಿಸಿ ಶೋಷಕ ವ್ಯವಸ್ಥೆಯ ವಿರುದ್ಧ ದನಿ ಎತ್ತುವಂತೆ ದುರ್ಬಲರನ್ನು ಯಾರಾದರೂ ಹುರಿದುಂಬಿಸುತ್ತಿದ್ದಾರಾದರೆ ಅದು ಪ್ರತಿಕೂಲವಾಗಿ ವರದಿ ಮಾಡಲು ಅರ್ಹ ವಿಷಯವಲ್ಲ. ಇಷ್ಟಕ್ಕೂ ನಿಮ್ಮ ವಾಹಿನಿಯಂಥ ಮಾಧ್ಯಮಗಳೇ ಹೀಗೆ ಮಾಡಿದರೆ, ಜನಪರ ಚಳುವಳಿಗಳ ಹಿಂದೆ ಇನ್ನು ಯಾರು ನಿಲ್ಲಬೇಕು ?' ಎಂದೆ. ಅದಕ್ಕೆ ಅವರು 'ಏನ್ಮಾಡೋದು, ಏನ್ಮಾಡಿದ್ರೂ ಟಿ.ಆರ್.ಪಿ. ರೇಟ್ ಮೇಲೆ ಬರ್ತಾ ಇಲ್ಲ. ಹಾಗಾಗಿ ಇದನ್ನೆಲ್ಲ ಮಾಡ್ತಾರೆ' ಅಂದರು. ನನ್ನಲ್ಲಿ ಇದಕ್ಕೆ ಮರುಮಾತಿರಲಿಲ್ಲ. ಎಲ್ಲವೂ ಮಾರಾಟ ಮತ್ತು ಮಾರುಕಟ್ಟೆಯನ್ನೇ ಅವಲಂಬಿಸಿರುವ ಜಗತ್ತಿನಲ್ಲಿ ಅವರದ್ದು ನಿಜಕ್ಕೂ ವ್ಯಾವಹಾರಿಕ ಉತ್ತರ.

ಕೊನೆಗೆ ಹಾಗೆಯೇ ಆಯಿತು. ಕುದುರೆಮುಖ ರಾಷ್ಟ್ರೀಯ ಉದ್ಯಾನ ವ್ಯಾಪ್ತಿಯಲ್ಲಿ ಜನಜಾಗೃತಿ ಉದ್ದೇಶದಿಂದ ಓಡಾಡುತ್ತಿದ್ದ ಕೆಲವರನ್ನು ನಕ್ಸಲೀಯರೆಂದೂ, ಉದ್ಯಾನದಲ್ಲಿನ ಉಗ್ರರೆಂದೂ ಬಹಳಷ್ಟು ಮಾಧ್ಯಮಗಳು ಉದ್ರೇಕಕಾರಿಯಾಗಿ, ಅತಿರಂಜಿತವಾಗಿ ವರದಿ ಮಾಡತೊಡಗಿದವು. ಈ ನಕ್ಸಲೀಯರ ಬಗ್ಗೆ, ನಕ್ಸಲೀಯ ಚಳುವಳಿಯ ಬಗ್ಗೆ ಅಷ್ಟೊಂದು ಅರಿವಿಲ್ಲದ ಈ ಭಾಗದ ಮಂದಿ ಮಾಧ್ಯಮಗಳ ಈ ಉತ್ಪ್ರೇಕ್ಷೆಗಳ ಕಾರಣವಾಗಿ ನಕ್ಸಲೀಯರೆಂದರೆ ಭಾರತ ವಿರೋಧಿ ಪಾಕಿಸ್ತಾನಿ ಭಯೋತ್ಪಾದಕರಂತೆಯೇ ಇರಬೇಕು ಅಂದುಕೊಂಡರು. ಜನರನ್ನು ಸಂಘಟಿಸಲು ತಮ್ಮದೇ ಆದ ಸಿದ್ಧಾಂತಗಳೊಂದಿಗೆ ತೊಡಗಿಕೊಂಡಿದ್ದ ಮಂದಿಯನ್ನು ಅಮಾನುಷವಾಗಿ ಬೇಟೆಯಾಡಲು ಪೊಲೀಸರಿಗೆ ಅದ್ಭುತವಾಗಿ ರಂಗ ಸಜ್ಜು ಮಾಡಿಕೊಟ್ಟಂತಾಯಿತು.

ಅದರ ಮುಂದಿನ ಅಧ್ಯಾಯ ಮೊನ್ನೆ ಮೊನ್ನೆ ನಡೆದೇ ಹೋಯಿತು. ಕಾರ್ಕಳದ ಬಳಿಯ ಈದು ಎಂಬಲ್ಲಿನ ಮನೆಯಲ್ಲಿ ಜನಜಾಗೃತಿ ಸಭೆ ನಡೆಸಿ ಅಲ್ಲೇ ಉಳಿದಿದ್ದ ಮೂವರು ಮಹಿಳೆಯರು ಮತ್ತು ಈರ್ವರು ಪುರುಷರ ಮೇಲೆ ಪೊಲೀಸರು 'ಸಾಹಸಿಕವಾಗಿ' ದಾಳಿ ನಡೆಸಿದರು. ಹೇಳುವಂತಹ ಉಪಯೋಗಿ ಯಾವ ಶಸ್ತ್ರಾಸ್ತ್ರಗಳನ್ನೂ ಹೊಂದಿರದ ಆ ಮಂದಿಯನ್ನು ಶರಣಾಗಿಸಬಹುದಿತ್ತೋ ಏನೋ. ಗಾಯಗೊಳಿಸಿಯಾದರೂ ಸೆರೆ ಹಿಡಿಯಬಹುದಾಗಿತ್ತೋ ಏನೋ. ಸಿಕ್ಕಿದ್ದೇ ಅವಕಾಶ ಎಂಬಂತೆ ಸಾಹಸ ಮೆರೆದು ಎರಡು ಹೆಣ್ಣು ಜೀವಗಳನ್ನು ಹೊಸಕಿಹಾಕಲಾಯಿತು. ಓರ್ವಳು ಗಾಯಗೊಂಡು ಸಿಕ್ಕುಬಿದ್ದಳು. ಮತ್ತೀರ್ವರು ಪರಾರಿಯಾದರಂತೆ.

ಯಥಾಪ್ರಕಾರ ಪೊಲೀಸರು ಕೊಟ್ಟ ಸುದ್ದಿಯನ್ನೇ ಎಂದಿನ ಮಸಾಲೆಯೊಂದಿಗೆ ಮಾಧ್ಯಮಗಳು ವರದಿ ಮಾಡಿದವು. ರಾಷ್ಟ್ರೀಯ ಮಟ್ಟದ ಖಾಸಗಿ ವಾಹಿನಿಯೊಂದು 'ಕರ್ನಾಟಕದಲ್ಲಿ ಈರ್ವರು ನಕ್ಸಲೀಯರನ್ನು ಕೊಲ್ಲಲಾಯಿತು' ಎಂದು ತಕ್ಷಣ ಬಿತ್ತರಿಸಿತು. ಪ್ರಾದೇಶಿಕ, ಸ್ಥಳೀಯ ಮಾಧ್ಯಮಗಳೂ ಇದೇ ಜಾಡನ್ನು ಅನುಸರಿಸಿದವು. ನನಗೆ ಅರ್ಥವೇ ಆಗಲಿಲ್ಲ. ಪೊಲೀಸರು ಆ ಮಹಿಳೆಯರನ್ನು ನಕ್ಸಲೀಯರು ಎಂದಾಕ್ಷಣ ಮಾಧ್ಯಮಗಳೆಲ್ಲ ಕಣ್ಣುಮುಚ್ಚಿ ನಂಬಿ ಏಕೆ ಹಾಗೆಯೇ ವರದಿ ಮಾಡಬೇಕಿತ್ತು? ಪೊಲೀಸರ ಕಾರ್ಯಾಚರಣೆಯ ಅತಿಯನ್ನು ಮಾಧ್ಯಮಗಳು ಏಕೆ ಪರೋಕ್ಷವಾಗಿಯೂ ಪ್ರಶ್ನಿಸಲಿಲ್ಲ? ಅವರು ಉಗ್ರಗಾಮಿಗಳೋ ಅಲ್ಲವೋ ಎನ್ನುವುದು ಬೇರೆಯೇ ಪ್ರಶ್ನೆ. ಅದಕ್ಕಿಂತಲೂ ಮುಖ್ಯವಾಗಿ ಜನರನ್ನು ಸಂಘಟಿಸುವ ಎಲ್ಲರನ್ನೂ ನಾಳೆ ವ್ಯವಸ್ಥೆಯು ಪೊಲೀಸರ ಮೂಲಕ ನಕ್ಸಲೀಯರೆಂದು ಹೀಗೆ ಕೊಲ್ಲಿಸುತ್ತಾ ಹೋದರೆ ಗತಿಯೇನು ?

ಆದರೆ ನಮ್ಮಲ್ಲಿ ಎಲ್ಲ ದನಿಗಳೂ ಸತ್ತುಹೋಗಿಲ್ಲ. ಎಲ್ಲ ಅಂತಃಸಾಕ್ಷಿಗಳು ಅಳಿದುಹೋಗಿಲ್ಲ ಎಂಬಂತೆ ಮಂಗಳೂರಿನ ಪಿಯುಸಿಎಲ್ ಮತ್ತು ಬೆಂಗಳೂರಿನ ಸಂಘಟನೆಯೊಂದು ಪೊಲೀಸರ ವರ್ತನೆಯನ್ನು ಪ್ರಶ್ನಿಸುವ ಎದೆಗಾರಿಕೆ ತೋರಿದವು. ಮಾನವ ಹಕ್ಕುಗಳ ಆಯೋಗಕ್ಕೆ ದೂರನ್ನೂ ನೀಡಿದವು. ಬೆಂಗಳೂರಿನ ಕೆಲವು ಪತ್ರಿಕೆಗಳು ವಿವೇಚನಾಯುತವಾಗಿ ಚರ್ಚಿಸಿ ಈ ಸಂಬಂಧ ಅನೇಕ ಪ್ರಶ್ನೆಗಳನ್ನು ಮುಂದಿಟ್ಟವು.

ಈ ಎಲ್ಲ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಕೆಲವೊಂದು ಅಂಶಗಳನ್ನು ನಾವೆಲ್ಲ ಗಮನಿಸಬೇಕು. ದೇಶದ ಅನೇಕ ಕಡೆಗಳಲ್ಲಿ ಉಗ್ರಗಾಮಿಗಳು ನಾನಾ ನೆಪಗಳಲ್ಲಿ ಘೋರ ಕೃತ್ಯಗಳನ್ನು ಎಸಗುತ್ತಿದ್ದು ಆ ಕೃತ್ಯಗಳು ಖಂಡಿತವಾಗಿಯೂ ಖಂಡನೀಯ. ಆದರೆ ಈ ಪರಿಸ್ಥಿತಿಯ ಲಾಭ ಪಡೆದು ಪೊಲೀಸರು ಭಯೋತ್ಪಾದಕ ದಮನ ಕಾರ್ಯಾಚರಣೆಯ ಹೆಸರಿನಲ್ಲಿ ಎಲ್ಲೆಂದರಲ್ಲಿ ಜನರನ್ನು ಹತ್ಯೆಗೈಯ್ಯತೊಡಗುವಾಗ ಸುಮ್ಮನೆ ಕೂರುವಷ್ಟು ಸಂವೇದನಾಶೀಲರು ನಾವಾಗಬಾರದು; ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕು. ನಮ್ಮ ಮಾಧ್ಯಮಗಳೂ

ಕೂಡ ಇಂತಹ ವಿವೇಚನಾರಹಿತ ಪೊಲೀಸ್ ಅತಿರೇಕಗಳ ಬಗ್ಗೆ ಎಚ್ಚರದಿಂದ ಪ್ರತಿಕ್ರಿಯಿಸಬೇಕು. ಈಗಾಗಲೇ ಜನಪರ ಚಳುವಳಿಗಳು ವಿನಾಶದ ಹಾದಿಯಲ್ಲಿವೆ. ಜನರನ್ನು ಸಂಘಟಿಸುವವರನ್ನು ನಿರ್ದಯವಾಗಿ ಹತ್ತಿಕ್ಕಲಾಗುತ್ತಿದೆ. ಜನಪರ ಹಿತಾಸಕ್ತಿಯನ್ನು ಮುಂದಿಟ್ಟುಕೊಂಡು ಚಳುವಳಿ ನಡೆಸುವವರನ್ನು ಬಹಳಷ್ಟು ಮಾಧ್ಯಮಗಳು ಖಳನಾಯಕ ರಂತೆ ಚಿತ್ರಿಸುವ ಪ್ರವೃತ್ತಿ ಅಧಿಕವಾಗುತ್ತಿರುವುದು ಖೇದಕರ. (ಕೆಲ ಸಮಯದ ಹಿಂದೆ ಮಂಗಳೂರಿನಲ್ಲಿ ಖಾಸಗಿ ಬಸ್ ಮಾಲಿಕರು ಮನಬಂದಂತೆ ಬಸ್ ದರ ಏರಿಸಿದಾಗ ಬಡ ಕಾರ್ಮಿಕ ವರ್ಗಗಳವರು ಭಾರಿ ತೊಂದರೆಗೆ ಒಳಗಾದರು. ಈ ದರ ಏರಿಕೆ ಅವೈಜ್ಞಾನಿಕ ವಾಗಿದ್ದುದರಿಂದ ಕೆಲ ಎಡಪಂಥೀಯ ಸಂಘಟನೆಗಳು ಈ ಕಾರ್ಮಿಕರ ಬೆಂಗಾವಲಿಗೆ ನಿಂತರು. ಪ್ರತಿಭಟನಾ ಚಳುವಳಿ ನಡೆಯಿತು. ಈ ಸಂದರ್ಭದಲ್ಲಿ ಸಣ್ಣಮಟ್ಟಿನ ಗಲಭೆಯೂ ನಡೆಯಿತು. ಜನಸಾಮಾನ್ಯರ ಕಷ್ಟಕ್ಕೆ ಸ್ಪಂದಿಸ ಬೇಕಿದ್ದ ಮಾಧ್ಯಮಗಳು ಆಶ್ಚರ್ಯವೆಂಬಂತೆ, ಚಳುವಳಿ ಗಾರರ ವಿರುದ್ಧ ನಿಂತವು! ಒಂದೆರಡು ಮಾಧ್ಯಮಗಳನ್ನು ಹೊರತುಪಡಿಸಿ ಉಳಿದ ಎಲ್ಲವೂ ಈ ಚಳುವಳಿಗಾರರನ್ನು ದೇಶದ್ರೋಹಿಗಳೆಂಬಂತೆ ಚಿತ್ರಿಸಿದವು. ಬಸ್ಸುಗಳ ಒಡೆದ ಗಾಜುಗಳನ್ನೇ ವೈಭವೀಕರಿಸಿ ತೋರಿಸಿದವು. ಪತ್ರಿಕೆಗಳನ್ನು ಕೊಂಡು ಓದುವವರು ಜನಸಾಮಾನ್ಯರು. ಪತ್ರಿಕೆಗಳು ಬದುಕಿ ಉಳಿಯುವುದು ಜನಸಾಮಾನ್ಯರಿಂದ. ಆದರೆ ವ್ಯವಸ್ಥೆಯಿಂದ ತಮಗೆ ಅನ್ಯಾಯವಾಗಿದೆ ಎಂದು ಪ್ರತಿಭಟಿಸಿದರೆ ಆಗ ಈ ಕೆಲ ಮಾಧ್ಯಮಗಳು ಜನರ ವಿರುದ್ಧ!) ಇದು ದೇಶದ ಜನತಂತ್ರ ಪರಂಪರೆಯ ಆರೋಗ್ಯದ ದೃಷ್ಟಿಯಿಂದ ಒಳ್ಳೆಯ ಬೆಳವಣಿಗೆ ಖಂಡಿತಾ ಅಲ್ಲ. ಮಾಧ್ಯಮಗಳು ಸ್ವಂತ ವಿವೇಚನೆ ಬಳಸಿ ವಾಸ್ತವಕ್ಕೆ ಕನ್ನಡಿ ಹಿಡಿಯುವ ಕೆಲಸ ಮಾಡಬೇಕು. ಮಾಧ್ಯಮಗಳು ಜನಸಾಮಾನ್ಯರ ಪರ ನಿಂತಿರುವಷ್ಟು ಕಾಲವೂ ಜನ ಸಾಮಾನ್ಯರು ಮಾಧ್ಯಮಗಳೊಂದಿಗೆ ನಿಲ್ಲುತ್ತಾರೆ. ಈ ಕೊಡು-ಪಡೆ, ಜನತಂತ್ರ ವ್ಯವಸ್ಥೆಯಲ್ಲಿ ತುಂಬಾ ನಿರ್ಣಾಯಕ.


ಶ್ರೀನಿವಾಸ ಕಾರ್ಕಳ
'ನೆಲೆ', ಸೋಡು, ಭಜನಾಮಂದಿರ ರಸ್ತೆ, ಬಿಜೈ
ಮಂಗಳೂರು - ೫೭೫ ೦೦೪


## ಕದ ತೆರೆ



ಕದ ತೆರೆಯೇ ಸೇಸಮ್ಮ
ಕದ ತೆರೆಯೇ
ಆ ಕದವೋ ವಿಶಾಲ
ಕಲಾತ್ಮಕ ಹೊಂದಿಕೊಂಡಂತೆ
ದಪ್ಪನೆಯ ಹೊಸ್ತಿಲು
ಬರುವವರು ಮುಗ್ಗರಿಸುವಂತೆ
ಅಂತಿಂಥ ಮರವಲ್ಲ
ಪೂರಾ ತೇಗದ್ದು
ಇದು ಹಾಗಲ್ಲ ಸರಳ
ನಿರಾಡಂಬರ ಹೊಸ್ತಿಲೂ
ಕದ ತೆರೆಯೇ ಸೇಸಮ್ಮ
ಕದ ತೆರೆಯೇ ॥

ಅದು ತೆರೆದದ್ದು
ಅಪ್ಪನಿಗೆ ಆತನ ಗೆಳೆಯರಿಗೆ
ಅತಿಥಿ ಅಭ್ಯಾಗತರಿಗೆ
ಆಗೊಮ್ಮೆ ಈಗೊಮ್ಮೆ ನಮಗೂ
ಕೇಳಿದ್ದು ಠೇಂಕಾರ
ರಾಜಕಾರಣ ಶಕುನಿ
ತಂತ್ರ ಬೌದ್ಧಿಕ ಕಸರತ್ತು
ಕದ ತೆರೆಯೇ ಸೇಸಮ್ಮ
ಕದ ತೆಗೆಯೇ ॥

ಅದರ ಮುಂದಿದು ಏನೇನೂ
ಅಲ್ಲ ಆದರೂ ಮುಚ್ಚಟೆಯದು
ಕಿರುಗುಟ್ಟಿದರೆ ಸಾಕು
ಎಣ್ಣೆ ಸವರಲು ನಾ
ಮುಂದು ತಾ ಮುಂದು

ಆಟಕ್ಕೆ ಓಡಲು ಮುಳಿದಾಗ
ಕರೆಯಲು ತಡವಾಗಿ ಬಂದಾಗ
ತಲೆ ಮರೆಸಿಕೊಳಲು
ತೆಕ್ಕೆ ಒಡ್ಡಿ ಒಳಗೊಳಲು
ಕದ ತೆರೆಯೇ ಸೇಸಮ್ಮ
ಕಲರವದ ಕದ ತೆರೆಯೇ ॥

ತೋಟದ ಫಿಲಿಪ್ಪ ಮೀನಿನ
ಕಮಲಕ್ಕ ಕೆಲಸದ ಪಾತುಮ್ಮಳ
ಬದುಕ ಸುಖದುಃಖ
ಆಜ್ಜಿಯ ಕತೆ ಅಮ್ಮನ ಬಾಲ್ಯ
ಮೊಗ್ಗಿನ ಜಡೆ ಗೆಜ್ಜೆಯ ನಾದ
ಅಮ್ಮನ ಬರೆ ಗೆಳತಿಯ
ಗಾಯದ ಗುಟ್ಟ ಅರುಹಿದಾ
ಕದ ತೆರೆಯೇ ಸೇಸಮ್ಮ
ಗುಸಗುಸ ಪಿಸಪಿಸ ಸದ್ದಿನ ಕದ ತೆರೆಯೇ ॥

ಎರಡರ ಒಳಹೊರಗ ಕಂಡ
ಕಣ್ಣಿಗೀ ಮನೆಯ ಒಂಟಿ ಕದ
ಗಂಟಲ ಬಿಸಿತುಪ್ಪ
ಇದನೊಂದೇ ಕಂಡ ಈಕೆಗೆ
ಎಲ್ಲವೂ ಒಪ್ಪ
ಕದ ತೆರೆಯೇ ಸೇಸಮ್ಮ
ಅದನಿದನು ಜೋಡಿಸುವ ಕದ ತೆರೆಯೇ ॥


ಸಬಿಹಾ ಭೂಮಿಗೌಡ
ಕನ್ನಡ ಪ್ರವಾಚಕರು
ಮಂಗಳೂರು ವಿಶ್ವವಿದ್ಯಾಲಯ, ಕೊಣಾಜೆ

# ನ್ಯಾಯದ ದಾರಿಯಲ್ಲಿ

ಗಳತಗಾ ಗಾಯತ್ರೀನಂದನ



**ಕ**ಲ್ಲಪ್ಪ ಎಂದೂ ಆ ಬಗ್ಗೆ ಯೋಚಿಸಿರಲೇ ಇಲ್ಲ. ತನ್ನ ಪೂರ್ವಜನೊಬ್ಬ ಆ ನ್ಯಾಯದ ಬಾಗಿಲಲ್ಲಿ ಕಾದು ಕಾದು ಸೋತು ಸುಣ್ಣವಾಗಿ ಕೊನೆಗೆ ಮಣ್ಣಾದ ಕಥೆಯನ್ನು ಅವರಿವರಿಂದ ಕೇಳಿ ತಿಳಿದಿದ್ದ. ಈಗ ಅದೇ ನ್ಯಾಯದ ಬಾಗಿಲಲ್ಲಿ ತಾನು ಹೋಗಿ ನಿಲ್ಲಬೇಕಾಯಿತಲ್ಲ ಎಂಬುದ ನೆನಪಿಸಿಕೊಂಡು ದಿಗ್ಭ್ರಾಂತನಾಗಿದ್ದ. ತನ್ನ ಪೂರ್ವಿಕನ ಗತಿಯೇ ತನಗೊದಗಿದರೆ ?! ಎಂಬ ವಿಚಾರದಿಂದಲೇ ಅವನ ಕಣ್ಣಲ್ಲಿ ನೀರು ಮಡುಗಟ್ಟುತ್ತಿದ್ದವು. ವಿನಾಕಾರಣ ಆ ನಿಷ್ಠುರ ನ್ಯಾಯದ ಬಾಗಿಲಿಗೆ ತನ್ನನ್ನು ಎಳೆದ ಮಲ್ಲಪ್ಪಗೌಡನ ಮೇಲೆ ರೋಷ ಕೆರಳಿದರೂ ಅದು ತನ್ನ ದವಡೆಗೇ ಮೂಲ ಎಂಬುದನ್ನು ಅರಿತು ಸುಮ್ಮನಿದ್ದ. ಅವನು ಸುಮ್ಮನಿದ್ದರೂ ಕಾಲ ಸುಮ್ಮನಿರುತ್ತದೆಯೇ ? ಅಂತೂ ಕಲ್ಲಪ್ಪ ರಾಜ್ಯದ ಉನ್ನತ ನ್ಯಾಯಸ್ಥಾನದೆಡೆಗೆ ಹೋಗುವ ದಿನ ಬಂದೇಬಿಟ್ಟಿತು. ಸತ್ಯ ಪ್ರಾಮಾಣಿಕತೆಗಳಂತೆ ನಿಶ್ಶಕ್ತಿಯಾಗಿ ಆಗಲೋ ಈಗಲೋ ಎನ್ನುವಂತಿದ್ದ ಕಲ್ಲಪ್ಪನ ಅಜ್ಜಿ ಅವನನ್ನು ಬಳಿಗೆ ಕರೆದು ಹೇಳಿತು. ''ನಿಮ್ಮ ತಾತನ ಮುತ್ತಾತ ಆ ನ್ಯಾಯದ ಬಾಗಿಲಲ್ಲೇ ಹೆಣವಾಗಿ ಹೋದ. ಅದು ಆ ದಿನ ಮಗಾ. ದಿನಗಳು ಬದಲಾಗಿವೆ. ಇಲ್ಲಿ ನಿಂಗೆ ಅಂತಾ ಒಂದು ಹಕ್ಕಿದೆ. ಗಾಂಧೀ ಮಾತ್ಮ ಜೀವಾ ತೇಯ್ದು ತಂದಿಟ್ಟ ಈ ಕಾರುಬಾರಿನ್ಯಾಗೆ ಅನ್ಯಾಯ ನಿಂಗೆ ಆಗಾಕಿಲ್ಲ ಮಗಾ. ಆ ದೇವರ ಮೇಲೆ ಶ್ವಾಸ ಇರೋವರೆಗೂ ವಿಶ್ವಾಸ ಇಡು.'' ಕಲ್ಲಪ್ಪ ಎಲ್ಲಕ್ಕೂ ಹೂ ಎಂದ. ಆದರೆ ಅಷ್ಟೊಂದು ನಿಯತ್ತಾಗಿ ದುಡಿದರೂ ವರ್ಷ ವರ್ಷ ತಾನು ಜಮೀನು ಕಳೆದುಕೊಳ್ಳುತ್ತಲೇ ಇರುವ ಬಗ್ಗೆ ತನ್ನಪ್ಪ ಅವರಪ್ಪನ ಸಾಲಕ್ಕೆ ಮರಕ್ಕೆ ನೇಣು ಹಾಕಿಕೊಂಡಿದ್ದು ಹಾಗೂ ಕೊನೆಗೆ ಅಜ್ಜಿ 'ದೇವರು' ಅಂತ್ಹೇಳಿ ಮ್ಯಾಲಕ್ಕೆ ಕೈ ತೋರಿಸಿದ್ದು ತಿಳಿಯಲಾರದೆ ಚಡಪಡಿಸಿದ. ಅಜ್ಜಿಗೆ ಇದು ಹ್ಯಾಗೆ ತಿಳೀತು ಅಂತ ತಳಮಳಿಸಿದ. ಹಕ್ಕು ಎನ್ನುವುದು ಹಕ್ಕಿಯಂತಿರುತ್ತದೆಯೇ ? ಅದೆಂಥ ಹಕ್ಕಿ ? ಪಾರಿವಾಳದಂಥದೋ ? ಹದ್ದಿನಂಥದೋ ? ಎಂದು ಮೊದಲಾಗಿ ಗೊಂದಲಗೊಂಡ ಕಲ್ಲಪ್ಪ ''ಇದರವ್ವನ, ಆದದ್ದು ಆಗಿ ಹೋಗಲಿ'' ಎಂದು ತನ್ನ ಹಸಿರು ಟವೆಲ್ಲು ಜಾಡಿಸಿಕೊಂಡು ಎದ್ದೇ ಬಿಟ್ಟ

ರಾಜಧಾನಿ ಜಯಸಿಂಗಪುರಕ್ಕೆ ಹೋಗುವ ಮುಖ್ಯ ರಸ್ತೆಯಲ್ಲಿದ್ದ ನಿಲ್ದಾಣವೊಂದರಲ್ಲಿ ಕಲ್ಲಪ್ಪ ನಿಂತುಕೊಂಡು ವಾಹನಕ್ಕಾಗಿ ದಾರಿ ನೋಡತೊಡಗಿದ. ಹುಬ್ಬಿನ ಮೇಲೆ ಕೈಯಿಟ್ಟು ಕೆಂಪು ಗಾಡಿಯನ್ನು ಕಾಯತೊಡಗಿದ. ದಾರಿ ಮೇಲೆ ಸಾಗುತ್ತಿದ್ದ ಬಗೆಬಗೆಯ ವಾಹನಗಳನ್ನು ಕಂಡ ಕಲ್ಲಪ್ಪ ಬೆರಗಾದ. ಪುಟ್ಟ ಹಂಸದಂತೆ ಮುದ್ದಾದ, ಕುದುರೆಯಂತೆ ಕೆನೆಯುವ, ಗುಮ್ಮನಗುಸುಗನಂತೆ ಮಾತಾಡದೆ ಸಾಗುವ ವಾಹನಗಳನ್ನು ಕಂಡು ಖುಷಿಯಾದ. ತಾನೂ ಇಂಥದೊಂದು ವಾಹನದಲ್ಲೇ ಪ್ರಯಾಣಿಸ ಬರಬಹುದೆಂದು ಭಾವಿಸಿ ಮತ್ತಷ್ಟು ಖುಷಿಯಾದ. ಯಾರಾದರೂ ತನ್ನನ್ನು ಕಂಡು ನಿಲ್ಲಿಸಿ ವಾಹನದಲ್ಲಿ ಹತ್ತಿಸಿಕೊಳ್ಳಬಹುದೆಂದು ಕನಸು ಕಂಡಿದ್ದ ಕಲ್ಲಪ್ಪನಿಗೆ ಗಂಟೆಗಳು ಕಳೆದಂತೆ ವಾಸ್ತವ, ನೆತ್ತಿ ಮೇಲಿನ ಸೂರ್ಯನಂತೆ ಸುಡತೊಡಗಿತು. ಗಾಡಿಗಳು ಕ್ಯಾರೆ ಎನ್ನದೆ ಭರ್ರನೆ ಸಾಗಿ ಹೋಗಿ ಅವುಗಳು ಎಬ್ಬಿಸಿದ ಧೂಳು, ಹೊಗೆ ಮಾತ್ರ ಕಲ್ಲಪ್ಪನ ಮುಖದ ಮೇಲುಳಿಯತೊಡಗಿತು. ಅಲ್ಲಿ ಟೀ ಮಾಡಿ ಮಾರುತ್ತಿದ್ದವನಿಗೆ ಕಲ್ಲಪ್ಪ ''ಅಣ್ಣಾ ಇವುಗಳಲ್ಲಿ ನಾವು ಹೋಗೋ ಹಾಗಿಲ್ಲವ?'' ಎಂದು ಕೇಳಿದ. ಆತ ತಣ್ಣಗೆ ನಕ್ಕು ಟೀ ಬಿಸಿ ಮಾಡತೊಡಗಿದ. ಆ ನಂತರ ತನ್ನಷ್ಟಕ್ಕೆ ಎಂಬಂತೆ ''ನಮ್ಮಂಥೋರಿಗೆ ಸರ್ಕಾರ ಕೆಂಪು ಬಸ್ಬಿಟ್ಟಿದೆ'' ಎಂದು ಗುನುಗುಟ್ಟಿದ. ''ಅದ್ಯಾವಾಗ ಬರ್ತದೆ?''ಕಲ್ಲಪ್ಪ ಕೇಳಿದ. ಅಷ್ಟರಲ್ಲಿ ರಸ್ತೆ ಮೇಲೆ ಗದ್ದಲವಾಗತೊಡಗಿತು. ಯಾರೋ ಕೂಗುತ್ತಿದ್ದರು ''ಎಂಮೆಲ್ಲೆ ಸಾಹೇಬರಿಗೆ ಜಯವಾಗಲಿ'' ಎಂದು. ಕಲ್ಲಪ್ಪ ದಾರಿ ಬದಿ ಹೋಗಿ ನಿಂತ. ಎಂಮೆಲ್ಲೆ ಸಾಹೇಬನ ಕಾರು

ಸಾವಕಾಶವಾಗುತ್ತ ಬಂದು ಅಲ್ಲಿ ನಿಂತಿತು. ಜನರ ಗುಂಪು ಜಯಕಾರ ಹಾಕುತ್ತಾ ಅವನಿಗೆ ಹಾರ ಹಾಕಿತು. ಕಲ್ಲಪ್ಪನಿಗೆ ಅವನ ಮುಖ ನೋಡಿ ಬಹಳ ಆನಂದವಾಯಿತು. ಕೇವಲ ವರ್ಷದ ಹಿಂದೆ ಮನೆಗೆ ಬಂದು ''ನಿಮಗಾಗಿ ಬೇಕಾದ ಕೆಲಸ ಮಾಡಿ ಕೊಡುತ್ತೇನೆ. ನಿಮ್ಮ ಸೇವೆಗೋಸ್ಕರ ನಾನಿರೋದು'' ಎಂದು ಹೇಳಿ ಕೈಮುಗಿದವನು ಇವನೇ ಎಂದು ಖಾತ್ರಿ ಮಾಡಿಕೊಂಡು, ಜನದಟ್ಟಣೆಯಲ್ಲಿ ದಾರಿ ಬಿಡಿಸಿಕೊಂಡು ಅವನ ಬಳಿಗೆ ಹೋಗಿ ತನ್ನನ್ನು ಜಯಸಿಂಗಪುರದವರೆಗೆ ಬಿಡಲು ದಯವಿಟ್ಟು ಸಹಾಯ ಮಾಡಬೇಕೆಂದು ಕೇಳಿಕೊಂಡ. ಬೆಳಿಗ್ಗೆಯಿಂದ ಒಂದು ಹನಿ ನೀರೂ ಕುಡಿಯದೆ ಕೆಂಪು ಬಸ್ಸಿನ ದಾರಿ ಕಾಯುತ್ತಾ ನಿಂತಿದ್ದನ್ನು ಹೇಳಿದ. ಎಂಮೆಲ್ಲೆ ಸಾಹೇಬ ''ಕಲ್ಲಪ್ಪಣ್ಣ ಬರೀ ನಿನ್ನನ್ನು ಮಾತ್ರವಲ್ಲ ಇಡೀ ಊರನ್ನೇ ಜಯಸಿಂಗಪುರಕ್ಕೆ ಒಯ್ಯುವೆ'' ಎಂದು ಸಣ್ಣ ಭಾಷಣ ಬಿಗಿದ. ಪುಳಕಗೊಂಡ ಜನ ಚಪ್ಪಾಳೆ ತಟ್ಟಿ ಹೋ ಎಂದು ಅರಚಿತು. ಮುಂದೆಂದೂ ಹೀಗಾಗದಂತೆ ನೋಡಿಕೊಳ್ಳುವೆ ಎಂದು ಜನ್ಮಚಾಳಿಯಂತೆ ಭರವಸೆ ನೀಡಿ ಕಾರಿನೊಳಗೆ ತೂರಿ, ಕಪ್ಪು ಗಾಜನ್ನು ಕಿಟಕಿಗೆ ಏರಿಸಿ ಮರೆಯಾದ.

ಕಲ್ಲಪ್ಪ ಯಥಾಪ್ರಕಾರ ರಸ್ತೆ ಬದಿ ನಿಂತ. ಅವನಿಗೆ ಅಳು ಬಂದಂತಾಗಿತ್ತು. ಎರಡು ವರ್ಷದ ಹಿಂದೆ ಇದೇ ಎಮ್ಮೆಲ್ಲೆ ಊರಲ್ಲಿ ಕೆಲಸ ಇಲ್ಲದೆ ಪೋಕ್ರಿ ತಿರುಗಾಡುತ್ತಿದ್ದ. ಅದ್ಹೇಗೆ ಆ ತುಪ್ಪಳದಂಥ ಸೀಟಿನ ಕಾರನ್ನು ಪಡೆದ ಎಂಬ ಲೆಕ್ಕ ಕಲ್ಲಪ್ಪನ ತಲೆಗೆ ಹತ್ತದೆ ಹೋಯಿತು. ಗಾಯದ ಮೇಲೆ ಉಪ್ಪು ಸವರಿದಂತೆ ಕಲ್ಲಪ್ಪ ಹೊರಟಿದ್ದ ನ್ಯಾಯಸ್ಥಾನದೆಡೆಗೆ ಮಲ್ಲಪ್ಪ ಗೌಡರು ಕುದುರೆಯಂತೆ ಕೆನೆಯುವ ತಮ್ಮ ಕಾರಿನಲ್ಲಿ ಹೋದರು. ಅದನ್ನು ಕಂಡ ಕಲ್ಲಪ್ಪ ಅಸಹಾಯಕತೆಯಿಂದ ಚಡಪಡಿಸಿದ. ಕೆಂಪು ಬಸ್ಸಿನ ದಾರಿ ಕಾಯುತ್ತಾ ಕಲ್ಲಪ್ಪ ನಿಂತೇ ಬಿಟ್ಟ ಗಂಟೆಗಳು ಕಳೆದು ದಿನಗಳಾದವು, ದಿನಗಳು ತಿಂಗಳಾದವು, ತಿಂಗಳು ವರ್ಷವಾದವು. ಕಲ್ಲಪ್ಪನ ಕೆಂಪು ಬಸ್ಸು ಬರಲೇ ಇಲ್ಲ, ಅವನೂ ದಾರಿ ಕಾಯುವುದ ಬಿಡಲೇ ಇಲ್ಲ, ತಪಸ್ವಿಯಂತೆ ನಿಂತೇ ಇದ್ದ. ದುಃಖ, ಕೋಪ, ಅಸಹನೆ, ತಳಮಳ, ದಂಗೆ ಮೊದಲಾದ ಭಾವಗಳನ್ನು ದಾಟಿ ಕಲ್ಲಪ್ಪ ನಿರ್ಲಿಪ್ತಿಗೆ ಏರಿದ್ದ. ಕೂದಲು ನೆರೆತಿದ್ದವು. ಚರ್ಮ ಸುಕ್ಕಾಗಿತ್ತು. ಆದರೆ ನ್ಯಾಯ ಪಡೆಯುವ ಅವನ ಆಸೆ ಮಾತ್ರ ಮುಕ್ಕಾಗಿರಲಿಲ್ಲ. ಅಜ್ಜಿಯ ಮಾತಲ್ಲಿ ಅಚಲ ನಂಬಿಕೆ ಇರಿಸಿದ್ದ ಕಲ್ಲಪ್ಪ ನ್ಯಾಯ ತನಗೆ ದೊರೆತೇ ದೊರೆಯುತ್ತದೆ ಎಂದು ನಂಬಿಯೇ ಅಜ್ಜನಾಗಿದ್ದ. ಟೀ ಮಾಡುವವನ ಬದಲಿ ಆತನ ಮಗ ಬಂದಿದ್ದಾನೆ. ಎಷ್ಟೊಂದು ಬದಲಾವಣೆಯಾಗಿತ್ತು. ಲೆಕ್ಕ ಮಾಡಲು, ಉದ್ರಿ ನೆನಪಿಡಲು ಟೀ ಮಾಡುವವ ಕಂಪ್ಯೂಟರ್ ಇಟ್ಟಿದ್ದ. ಕಲ್ಲಪ್ಪನ ಕುರಿತು ಅವನಿಗೆ ಎಂಥದೋ ವಿಚಿತ್ರ ಪ್ರೀತಿ. ''ಅಜ್ಜಾ ಯಾರಿಗೆ ಬೇಕು ಈ ವನವಾಸ. ಆ ಮಲ್ಲಪ್ಪಗೌಡ ಎಷ್ಟೋ ವರ್ಷದ ಹಿಂದೇನೇ ನಿನ್ನ ಹೊಲದ ವ್ಯಾಜ್ಯ ಗೆದ್ದು ಸುಖವಾಗಿದ್ದಾನೆ ಬಡ್ಡಿಮಗ. ದಿನಾ ನೀನು ಹಿಂಗೆ ಕಾಯೋದನ್ನ ನನ್ನ ಕಡೆ ನೋಡಕ್ಕಾಗಲ್ಲ. ಬಿಟ್ಟು ಬಿಡು ಇದನ್ನು'' ಎಂದು ಎಷ್ಟೋ ಸಲ ಕಲ್ಲಪ್ಪನಿಗೆ ದುಂಬಾಲು ಬಿದ್ದಿದ್ದಾನೆ. ಆದರೆ ಕಲ್ಲಪ್ಪ ತನ್ನ ಕಾಯುವ ಕಾಯಕವನ್ನು ಬಿಟ್ಟಿರಲಿಲ್ಲ.

ಕಾಲ ಉರುಳುರುಳಿ ಒಂದು ದಿನ ಕಲ್ಲಪ್ಪನ ಕೊನೆಗಾಲ ಬಂದೇ ಬಿಟ್ಟಿತು. ಜೀವ ಆಗಲೋ ಈಗಲೋ ಎನ್ನುವಂತಿತ್ತು. ಟೀಯವ ಬಾಯಿಗೆ ನೀರು ಬಿಟ್ಟ. ಕಲ್ಲಪ್ಪಜ್ಜನ ಕಣ್ಣುಗಳಲ್ಲಿ ಇನ್ನೂ ನ್ಯಾಯದ ಆಶೆ ಕುಣಿಯುತ್ತಿತ್ತು. ಅಷ್ಟರಲ್ಲಿ ಊಹಿಸದ ರೀತಿಯಲ್ಲಿ ಜನ್ಮವಿಡೀ ಕಾದಿದ್ದ ಕೆಂಪು ಬಸ್ಸು ಗುಟುರು ಹಾಕುತ್ತ ಹೊಗೆ ಕಾರುತ್ತ ಕಲ್ಲಪ್ಪಜ್ಜನ ಎದುರಿಗೇ ಬಂದು ನಿಂತಿತು. ಧಡಾರನೆ ಬಾಗಿಲು ತೆಗೆದವನೊಬ್ಬ ಯಾರೂ ಸನಿಹಕ್ಕೇ ಬರಬಾರದಷ್ಟು ಒರಟಾಗಿ ''ಒಳಗೆ ಹತ್ಕೊಳ್ರೀ'' ಎಂದು ಅರಚಿದ. ಟೀಯವ ಕಲ್ಲಪ್ಪಜ್ಜನ ಮೈ ಅಲುಗಿಸಿ ಗಟ್ಟಿಯಾಗಿ ''ಅಜ್ಜಾ ನೀನು ಜಯಸಿಂಗಪುರಕ್ಕೆ ಹೋಗಬೇಕಾದ ಗಾಡಿ ಬಂದಿದೆ. ಇದು ನಿನಗೋಸ್ಕರಾನೆ ಇರೋದು, ಹತ್ತು'' ಎಂದು ಕರೆದ. ಅಷ್ಟು ಕೇಳಿಸಿದ್ದೇ ತಡ ಕಲ್ಲಪ್ಪಜ್ಜನಿಗೆ ಜೀವಮಾನವಿಡೀ ಕಾಡದಿದ್ದ ಪ್ರಶ್ನೆಯೊಂದು ಧುತ್ತನೇ ಚಿತ್ತದ ಹುತ್ತದಿಂದ ಎದ್ದು ಹಾವಿನಂತೆ ಹೆಡೆ ನಿಮಿರಿಸಿ ನಿಂತಿತು. ಅಜ್ಜಿ ಹೇಳಿದ್ದಳು ಕಾಲ ಬದಲಾಗಿದೆ. ನಿನಗೆ ನ್ಯಾಯ ಸಿಗುತ್ತದೆ. ನಿನಗೆ ಅಂತಾ ಒಂದು ಹಕ್ಕಿದೆ ಎಂದು. ಆದರೆ ಇದೆಂಥಾ ಕಾಲ ?! ನನ್ನ ತಾತನ ಮುತ್ತಾತ ಕನಿಷ್ಠ ಆ ನ್ಯಾಯದ ಬಾಗಿಲಲ್ಲಾದರೂ ಹೋಗಿ ಸತ್ತ. ಆದರೆ ನಾನು ಆ ನ್ಯಾಯದ ಬಾಗಿಲನ್ನೇ ನೋಡಲಿಲ್ಲವಲ್ಲಾ! ಎಲ್ಲಿದೆ ನನ್ನ ಆ ಹಕ್ಕೆಂಬ ಹಕ್ಕು ? ಮುಂತಾಗಿ ವಿಚಾರ ಮಾಡುವಷ್ಟರಲ್ಲಿ ಕಲ್ಲಪ್ಪಜ್ಜನ ಜೀವ ಹಕ್ಕಿಯಂತೆ ಕೆಂಪುಬಸ್ಸಿನ ಮೇಲಿಂದ ಹಾಗೇ ಹಾರಿ ಹೋಯಿತು.

*(ಖ್ಯಾತ ಕತೆಗಾರ ಕಾಫ್ಕನ ಕತೆಯೊಂದರಿಂದ ಪ್ರೇರಿತ)*



ಗಳತಗಾ ಗಾಯತ್ರೀನಂದನ
ಆರ್. ಎಸ್. ಸಂಕಪಾಳ ಅಂಚೆ, ಗಳತಗಾ - ೫೯೧೨೩೯
ತಾ॥ ಚಿಕ್ಕೋಡಿ, ಜಿ. ಬೆಳಗಾವಿ

# ಮಾರುಕಟ್ಟೆಯಲ್ಲಿ ಆರ್ಥಿಕ ಸಿದ್ಧಾಂತ
# ಜನಸಾಮಾನ್ಯರ ಹಕ್ಕುಬಾಧ್ಯತೆಗಳು

**ನ್ಯಾಯಶಾಸ್ತ್ರದ ಲ್ಯಾಟಿನ್ ಉಕ್ತಿ ಒಂದಿದೆ : Ub:Jus Ib:Remedium. ಎಂದರೆ ಎಲ್ಲಿ ಹಕ್ಕಿದೆಯೋ ಅಲ್ಲಿ ಪರಿಹಾರವಿದೆ. ಇಂದಿನ ನ್ಯಾಯಾಲಯಗಳ ಒತ್ತಡದ ಕಾರ್ಯವೈಖರಿಯಿಂದಾಗಿ ಈ ಉಕ್ತಿ ತನ್ನ ಅರ್ಥ ಕಳೆದುಕೊಳ್ಳುತ್ತಲಿದೆಯೆ ? ಅಥವಾ ಮಾರ್ಕ್ಸ್ ಹೇಳುವಂತೆ, ನೌಕರಿ ಇರುವ ಕೆಲಸಗಾರರು ನೌಕರಿ ಕಳೆದುಕೊಂಡು, ಭೂಮಿ ಹೊಂದಿರುವ ರೈತರು ಭೂಮಿಯಿಂದ ಹೊರದೂಡಲ್ಪಟ್ಟು ಬಹುಸಂಖ್ಯ ಜನ ವಿಭಾಗವೇ ನಿರ್ಗತಿಕರಾಗುವ ಸಂದರ್ಭ ಬಂಡವಾಳವಾದಿ ವ್ಯವಸ್ಥೆಯ ಅಂತಿಮ ಸಾಧನೆಯಾಗಿರುತ್ತದೆ.**

**ರವೀಂದ್ರ ಹಳಿಂಗಳಿ**

ಮಾರುಕಟ್ಟೆ ಆರ್ಥಿಕ ಸಿದ್ಧಾಂತ ಇಂದು ಎಲ್ಲ ಕ್ಷೇತ್ರಗಳನ್ನೂ ವ್ಯಾಪಿಸುತ್ತಿದೆ. ಇದು ಎಲ್ಲವನ್ನೂ ಮಾರುಕಟ್ಟೆಯ ಪೈಪೋಟಿ ನಿಯಮಗಳಿಂದಲೇ ತೀರ್ಮಾನಿಸುವ ನೀತಿ. ಇಲ್ಲಿ ಜನರ ಬದುಕಿಗೆ ಬೆಲೆಯಿಲ್ಲ. ಯಾರು ಸ್ಪರ್ಧಾ ಮಾರುಕಟ್ಟೆಯ ವ್ಯಾಪ್ತಿಯಲ್ಲಿ ಉಳಿಯಬಲ್ಲರೋ ಅವರು ಬದುಕಬಲ್ಲರು. ಆದರೆ ಈ ಸಿದ್ಧಾಂತ ನಮ್ಮ ಸಂವಿಧಾನದ ಮೂಲ ಆಕಾಂಕ್ಷೆಗಳಿಗೆ ವ್ಯತಿರಿಕ್ತವಾಗಿದೆ ಎಂಬುದನ್ನು ಆಳುವ ಸರಕಾರಗಳು ಗಮನಿಸುತ್ತಿಲ್ಲ. ಸಂವಿಧಾನದ ಕಾವಲುಗಾರರಂತಿರುವ ಸುಪ್ರೀಂಕೋರ್ಟ್ ಮತ್ತು ಹೈಕೋರ್ಟ್‌ಗಳು ಸಹ ಸಂವಿಧಾನದ ಆಶೋತ್ತರಗಳಿಗೆ ಹೊರತಾಗಿ ತೀರ್ಪು ನೀಡುತ್ತಿರುವುದನ್ನು ನಾವಿಂದು ಕಾಣುತ್ತೇವೆ. BALCO ವಿಷಯದಲ್ಲಿ ಇದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

೧೯೪೭ ಆಗಸ್ಟ್ ೧೫ರ ಮಧ್ಯರಾತ್ರಿ ಸ್ವಾತಂತ್ರ್ಯ ಪಡೆದುಕೊಂಡ ಭಾರತ ತನ್ನ ಸಂರಚನೆ, ಸ್ವಾಯತ್ತತೆ, ಭದ್ರತೆ, ಐಕ್ಯತೆ, ರಕ್ಷಣೆಗಳೊಂದಿಗೆ ಅಭಿವೃದ್ಧಿ ಸಾಧಿಸಲು ಸಂವಿಧಾನವನ್ನು ರಚಿಸಿಕೊಂಡಿತು. ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿಯಲ್ಲಿದ್ದ ದಿಗ್ಗಜರನ್ನೊಳಗೊಂಡ ಸಂವಿಧಾನ ರಚನಾ ಸಮಿತಿ ದೇಶದ ಪರಂಪರೆಯನ್ನು ಗೌರವಿಸಿ ಜನರ ಕಲ್ಯಾಣ ಸಾಧಿಸಲು ಮಾಡಬೇಕಾದುದನ್ನು ಹೇಳುತ್ತ ಒಂದು ಭದ್ರ ನೆಲೆಯನ್ನು ನಮಗೆ ಒದಗಿಸಿದೆ. ಸಂವಿಧಾನವನ್ನು ಮೀರಿ ಸರಕಾರಗಳು ಕಾನೂನು ರಚಿಸುವಂತಿಲ್ಲ. ಹಾಗೊಂದು ವೇಳೆ ರಚಿಸಿದಲ್ಲಿ ಅದನ್ನು ಸಂವಿಧಾನಬಾಹಿರವೆಂದು ತೀರ್ಮಾನಿಸುವ ಅಧಿಕಾರ ನ್ಯಾಯಾಂಗಕ್ಕೆ ಇರುತ್ತದೆ.

ನಾಗರಿಕ ಹಿತರಕ್ಷಣೆಗಾಗಿ ಮೂಲಭೂತ ಹಕ್ಕುಗಳನ್ನು ಘೋಷಿಸಲಾಗಿದೆ. ಹಕ್ಕುಗಳನ್ನು ಕಸಿದುಕೊಳ್ಳುವ ಅಧಿಕಾರ ಸರಕಾರಕ್ಕಿರುವುದಿಲ್ಲ. ಹಾಗೇನಾದರೂ ಹಕ್ಕುಗಳ ಉಲ್ಲಂಘನೆಯಾದಲ್ಲಿ ಅದನ್ನು ಪ್ರಶ್ನಿಸುವ ಅಧಿಕಾರ ನಾಗರಿಕರಿಗೆ ಇದೆ. ವಿದ್ವಾಂಸರು, ಪ್ರಾಮಾಣಿಕರು ಕಾನೂನು ಪಂಡಿತರು ಆಗಿದ್ದ ಡಾ|| ಬಾಬಾಸಾಹೇಬ ಅಂಬೇಡ್ಕರ್ ಅವರು ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿದ್ದರು. ಕಾರ್ಯಾಂಗ, ಶಾಸಕಾಂಗಗಳ ಅತಿರೇಕಕ್ಕೆ ಕಡಿವಾಣ ಹಾಕುವ ಅಧಿಕಾರವನ್ನು ನ್ಯಾಯಾಂಗಕ್ಕೆ ನೀಡಿರುವುದು ಅಂಬೇಡ್ಕರರ ಮುಂದಾಲೋಚನೆಗೆ ಸಾಕ್ಷಿಯಾಗಿದೆ.

ಕಾರ್ಯಾಂಗ, ಶಾಸಕಾಂಗಗಳು ಜನ ಕಲ್ಯಾಣಕ್ಕೆ ವಿರೋಧವಾಗಿ ನಡೆದುಕೊಂಡಲ್ಲಿ ನಮ್ಮ ಜನ ಪರಿಹಾರ ಕೋರಿ ನ್ಯಾಯಾಲಯಗಳಿಗೆ ಮೊರೆ ಹೋಗುತ್ತಾರೆ. ಜನಸಾಮಾನ್ಯರು ನ್ಯಾಯಕ್ಕಾಗಿ, ನೆಮ್ಮದಿಗಾಗಿ ನ್ಯಾಯಾಲಯ ಸರಕಾರಗಳ ಅತಿರೇಕಗಳನ್ನು ತಡೆಯುತ್ತದೆ ಎಂಬ ಭರವಸೆ ಜನರಿಗಿದೆ. ಇಲ್ಲಿಯವರೆಗೆ ನ್ಯಾಯಾಲಯಗಳು ಕೂಡ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಜನರ ಅಭಿಲಾಷೆಗೆ ಪ್ರಾಧಾನ್ಯತೆ ಇರಬೇಕೆನ್ನುವುದನ್ನು ಮನ್ನಿಸಿ ಸರಕಾರಗಳ ಅತಿರೇಕಗಳನ್ನು ತಡೆದು ತೀರ್ಪು ನೀಡುತ್ತಾ ಬಂದಿವೆ. ನಾಲ್ಕು ದಶಕಗಳ ಕಾಲ ಈ ವ್ಯವಸ್ಥೆ ಯಥಾವತ್ತಾಗಿ ನಡೆದುಕೊಂಡು ಬಂದಿದೆ. ೭೦-೮೦ರ ದಶಕದಲ್ಲಿದ್ದ ಹಲವು ಪ್ರತಿಭಾನ್ವಿತ ನ್ಯಾಯಮೂರ್ತಿಗಳು ಸಂವಿಧಾನದಲ್ಲಿ ಅಡಕವಾಗಿರುವ ಕಲ್ಯಾಣ ರಾಜ್ಯದ ಕಲ್ಪನೆಯನ್ನು ಎತ್ತಿ ಹಿಡಿದಿದ್ದಾರೆ. ಅದನ್ನು ಭದ್ರಗೊಳಿಸುತ್ತಾ ಸಾಗಿದ್ದಾರೆ. ಸಾಮಾಜಿಕ ನ್ಯಾಯ ಒದಗಿಸುವ ಗುರಿಯೊಂದಿಗೆ ನ್ಯಾಯದಾನದ ವ್ಯಾಪ್ತಿಯನ್ನು ಹಿಗ್ಗಿಸುತ್ತ 'ಬಾಗಿಲಿಗೆ ನ್ಯಾಯ', 'ಕಾನೂನು ನೆರವು', 'ಸಾರ್ವಜನಿಕ ಹಿತಾಸಕ್ತಿಯ ವ್ಯಾಜ್ಯ' ಮುಂತಾದ ಭರವಸೆಯ ಕಲ್ಪನೆಗಳು ಸಾಕಾರಗೊಳ್ಳಲು ನೆರವಾಗಿದ್ದಾರೆ. ಈ ಸಾಮಾಜಿಕ ನ್ಯಾಯ ಸಿದ್ಧಾಂತ ಭದ್ರಗೊಳ್ಳುವುದರ ಜೊತೆಗೆ ಇದಕ್ಕಾಗಿ ಹಲವು ಸಂಸ್ಥೆಗಳನ್ನು ಭದ್ರಗೊಳಿಸಲು ತಮ್ಮ ಗಣನೀಯ ಸೇವೆ ಸಲ್ಲಿಸಿದ್ದಾರೆ.

ಈಗ ಕಾಲ ಬದಲಾಗಿದೆ. ಮಾರುಕಟ್ಟೆ ಆರ್ಥಿಕ ನೀತಿಯ ಸಿದ್ಧಾಂತ ನ್ಯಾಯಾಲಯಗಳಲ್ಲೂ ಪ್ರವೇಶಿಸಲು ಹವಣಿಸುತ್ತಿದೆ. ಸತತ ನಾಲ್ಕು ದಶಕಗಳ ಕಾಲ ಸಂವಿಧಾನದ ಆಶೋತ್ತರಗಳನ್ನು ಎತ್ತಿಹಿಡಿದಿದ್ದ ನ್ಯಾಯಾಂಗ ೯೦ರ ದಶಕದಲ್ಲಿ ಗಂಭೀರ ಪರೀಕ್ಷೆಗೆ ಒಳಪಟ್ಟಿದೆ. ಬಂಡವಾಳ ಮೂಲದ ಅರ್ಥ ವ್ಯವಸ್ಥೆಯಲ್ಲಿ ದುಡಿಯುವ ವರ್ಗ, ಶೋಷಿತ ಸಾಮಾನ್ಯರು ಬದುಕಿನ ಸ್ಪರ್ಧೆಯಲ್ಲಿ ಆಳುವ ವರ್ಗಕ್ಕೆ ಸಾಟಿಯಾಗಿ ನಿಲ್ಲರು. ಬದುಕಿನ ಸ್ಪರ್ಧಾ ಬಯಲು ಸಮನಾಗಿರುವುದಿಲ್ಲ. ಇದರ ಅರಿವಿದ್ದ ನ್ಯಾಯಮೂರ್ತಿ ಗಳು ಕೆಲಸಗಾರರಿಗೆ ಕೆಲಸದ ಭದ್ರತೆ, ಶ್ರಮಕ್ಕೆ ಸರಿಯಾದ ಕೂಲಿ, ಸಾಮೂಹಿಕ ಚೌಕಾಸಿ ಹಕ್ಕು, ಮುಷ್ಕರದಂತಹ ಅಪರೂಪದ ಕ್ರಮಗಳನ್ನು ಮನ್ನಿಸುತ್ತ ಅವುಗಳ ರಕ್ಷಣೆಗೆ ನ್ಯಾಯಾಂಗ ತೀರ್ಪುಗಳನ್ನು ನೀಡುತ್ತ ಬಂದಿದ್ದರು. ಈಗ ಈ ಹಕ್ಕುಗಳನ್ನು ಉಪೇಕ್ಷಿಸುವ ರೀತಿಯಲ್ಲಿ ತೀರ್ಪುಗಳು ಬರುತ್ತಿರುವುದು ಒಂದು ವಿಮುಖ ಬೆಳವಣಿಗೆಯಾಗಿರುತ್ತದೆ.

ಸಂವಿಧಾನದ ೩೯ನೇ ವಿಧಿ ಸರಕಾರ ತನ್ನ ಆಡಳಿತ ನೀತಿಯನ್ನು ರೂಪಿಸುವಾಗ ಈ ಕೆಳಗಿನ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಬೇಕೆಂದು ಒತ್ತಿ ಹೇಳುತ್ತದೆ.

ಎ) "ವಿಶೇಷವಾಗಿ, ರಾಜ್ಯವು ಪುರುಷ ಮತ್ತು ಮಹಿಳೆಯರನ್ನೊಳಗೊಂಡು, ನಾಗರಿಕರಿಗೆ ಸಮರ್ಪಕ ಜೀವನೋಪಾಯಗಳಿಗೆ ಆದ್ಯತೆ.

ಬಿ) ಸರ್ವರ ಹಿತ ಸಾಧಿಸುವ ದಿಶೆಯಲ್ಲಿ ಸಮಾಜದ ಭೌತಿಕ ಸಂಪನ್ಮೂಲಗಳ ನ್ಯಾಯಯುತ ಒಡೆತನ ಮತ್ತು ಹಂಚಿಕೆ.

ಸಿ) ಸಂಪತ್ತು ಮತ್ತು ಉತ್ಪಾದನಾ ಸಾಧನಗಳು ಸಾಮೂಹಿಕ ಹಿತಗಳಿಗೆ ಧಕ್ಕೆಯಾಗುವ ರೀತಿಯಲ್ಲಿ ಕೇಂದ್ರೀಕೃತವಾಗದಂತೆ ಆರ್ಥಿಕ ವ್ಯವಸ್ಥೆಯು ಕಾರ್ಯನಿರ್ವಹಿಸುವಂತೆ" ತನ್ನ ನೀತಿಗಳನ್ನು ನಿರೂಪಿಸಬೇಕು.

ಈಶೋಪನಿಷತ್ತಿನ ಮೊದಲ ಮಂತ್ರ ಕೂಡ ಈ ಕಲ್ಪನೆಯೊಂದಿಗೆ ಕೂಡಿರುವುದನ್ನು ಯಾರಾದರೂ ಗಮನಿಸಬಹುದು:

"ಈಶಾವಾಸ್ಯಮ್ ಇದಂ ಸರ್ವಂ ಯತ್‌ಕಿಂಚ ಜಗತ್ಯಾಂ ಜಗತ್

ತೇನ ತ್ಯಕ್ತೇನ ಭುಂಜೀಥಾಃ ಮಾ ಗೃಧಃ ಕಸ್ಯ ಸ್ವಿದ್ ಧನಮ್"

ಅಂದರೆ, "ಈಶನೇ ವಾಸಿಸುಹುದು ಈ ಜಗದೊಳೆಲ್ಲವೂ ಈಶನಿಗೆ ಮೀಸಲಿಹುದೆಲ್ಲವೂ. ತನಗೆ ಬೇಕಿರುವುದನ್ನು ಪಡೆದು ಮಿಕ್ಕುದೆಲ್ಲವನ್ನು ತ್ಯಜಿಸು" ಎಂಬ ಅರ್ಥ.

ಸಂವಿಧಾನವು ನಮ್ಮ ಪರಂಪರೆಗಳಿಗೆ ಪೂರಕವಾಗಿಯೇ ಜನತೆಯ ಆಶೋತ್ತರಗಳಿಗೆ ಧ್ವನಿ ನೀಡಲು ಯತ್ನಿಸಿದೆ. ಆದರೆ ಪರಂಪರೆ ಮತ್ತು ಸಂವಿಧಾನ ಎಲ್ಲವನ್ನೂ ಮೀರಿ ಇಂದು ವ್ಯವಹಾರಗಳು ನಡೆಯುತ್ತಲಿವೆ.

ಸಂವಿಧಾನದ ನಾಲ್ಕನೇ ಪರಿಚ್ಛೇದದಲ್ಲಿ ಬರುವ ಸರಕಾರದ ಮಾರ್ಗಸೂಚಿ ನೀತಿ ನಿರ್ದೇಶನಗಳು ಕಲ್ಯಾಣ ರಾಜ್ಯದ ಕಲ್ಪನೆಯನ್ನು ಸಾಕಾರಗೊಳಿಸಲು

ಕಲ್ಯಾಣ ರಾಜ್ಯದ ಕಲ್ಪನೆಯನ್ನು ಸಾಕಾರಗೊಳಿಸಲು ಸೂಚಿಸುತ್ತವೆ. ಮೂಲಭೂತ ಹಕ್ಕುಗಳ ಉಲ್ಲಂಘನೆಯಾದಲ್ಲಿ ಜನತೆ ನ್ಯಾಯಾಲಯಕ್ಕೆ ಮೊರೆ ಹೋಗಬಹುದು. ಆದರೆ ಈ ನೀತಿ ನಿರ್ದೇಶನಗಳನ್ನು ಮೀರಿದಲ್ಲಿ ಯಾವ ಕ್ರಮ ಜರುಗಿಸಲು ಸಾಧ್ಯ? ಇದು ಜಿಜ್ಞಾಸೆಯ ಪ್ರಶ್ನೆಯಾಗಿದೆ. ನಿರ್ದೇಶನಗಳು ಮೂಲಭೂತ ಹಕ್ಕಿನ ಸ್ಥಾನ ಪಡೆಯಲಾರವು, ನಿಜ. ಆದರೆ ಸರಕಾರ ಈ ನಿರ್ದೇಶನಗಳನ್ನು ಪಾಲಿಸುವ ದಿಶೆಯಲ್ಲಿ ಜನರ ಪರವಾಗಿ ಕೆಲವು ಕಾನೂನುಗಳನ್ನು ತಂದು ಜನರಿಗೆ ಕೆಲವು ಸೌಲಭ್ಯಗಳನ್ನು ಒದಗಿಸಿದಲ್ಲಿ ಉದಾ : ಕುಡಿಯುವ ನೀರು, ವಿದ್ಯುತ್ ಪೂರೈಕೆ, ನಾಗರಿಕ ಸೌಲಭ್ಯ, ಸಾರಿಗೆ ಸೌಲಭ್ಯ ಇವುಗಳನ್ನು ಜನಸಾಮಾನ್ಯರಿಗೆ ಎಟಕುವ ರೀತಿಯಲ್ಲಿ ಪೂರೈಸುತ್ತ ಬಂದಲ್ಲಿ ಅವುಗಳನ್ನು ವಾಪಾಸು ಪಡೆದು ಜನಸಾಮಾನ್ಯರನ್ನು ಮಾರುಕಟ್ಟೆಯ ಶಾರ್ಕ್ ಮೀನಿನ ನಿಯಮಗಳೇ ನೋಡಿಕೊಳ್ಳುವಂತೆ ಮಾಡಿದಲ್ಲಿ ಅದು ಸಂವಿಧಾನದ ಮೂಲ ಸ್ವರೂಪದ ಭರವಸೆಗಳಿಗೆ ವ್ಯತಿರಿಕ್ತ ಎಂದು ಸಾರಿ ಹೇಳುವ ಅಧಿಕಾರ ಸುಪ್ರಿಂ ಕೋರ್ಟ್, ಹೈಕೋರ್ಟ್‌ಗಳಿಗೆ ಇರುವುದಿಲ್ಲವೇ? ಸಂವಿಧಾನಾತ್ಮಕ ಕಾನೂನು ವಿಕಸಿಸಬೇಕಾಗಿರುವುದು ಈ ನಿಟ್ಟಿನಲ್ಲಿ.

ಜನಸಾಮಾನ್ಯರಿಗೆ ಸಂಪತ್ತಿನ ನ್ಯಾಯಯುತ ಹಂಚಿಕೆ ಆಗಲೆಂಬ ಗುರಿಯೊಂದಿಗೆ ಬೆಳೆದುಬಂದ ಸರಕಾರೀ ಸ್ವಾಮ್ಯದ ಸಾರ್ವಜನಿಕ ಉದ್ದಿಮೆಗಳನ್ನು ರಕ್ಷಿಸಲೇಬೇಕಲ್ಲವೆ? ಸ್ಪರ್ಧಾತ್ಮಕ ಮಾರುಕಟ್ಟೆಯ ನಿಯಮಗಳ ವ್ಯಾಪ್ತಿಗೆ ಒಳಪಡದ, ಮಾರುಕಟ್ಟೆ ಪರಿಧಿಯಿಂದ ಬಹುದೂರ ಇರುವ ಈ ದೇಶದ ಬಹುಸಂಖ್ಯಾತ ಜನಸಾಮಾನ್ಯರ ಹಿತಗಳನ್ನು ಕಾಪಾಡಬೇಕೆಂದಲ್ಲಿ ಈ ಉದ್ದಿಮೆಗಳು ಬೇಕೇ ಬೇಕು. ಸೇವೆ ಮತ್ತು ಸರಬರಾಜು ಕ್ಷೇತ್ರದಲ್ಲಿ ಸಾರ್ವಜನಿಕರ ಹಿತಗಳನ್ನು ಕಾಪಾಡುವ ಈ ಉದ್ದಿಮೆಗಳನ್ನು ದಿವಾಳಿ ಎಬ್ಬಿಸಲು ಯಾವುದೇ ಸರಕಾರಕ್ಕೆ ಅಧಿಕಾರವಿರಲಾರದು. ಅದು ಸಂವಿಧಾನದ ೪ನೇ ಪರಿಚ್ಛೇದದಡಿಯಲ್ಲಿ ಸಾಕಾರಗೊಂಡ ಆಕಾಂಕ್ಷೆಗಳಿಗೆ ವ್ಯತಿರಿಕ್ತವಾಗುತ್ತದೆ ಎಂದು ನ್ಯಾಯಾಂಗ ಸಾರಿ ಹೇಳಬೇಕಾಗಿದೆ. ಸಂವಿಧಾನ ನೀಡಿರುವ ಭರವಸೆ ಮತ್ತು ಆಶೋತ್ತರಗಳ ಈಡೇರಿಕೆಗಾಗಿ ಸರಕಾರ ನೀತಿಗಳನ್ನು ಕೈಗೊಂಡಲ್ಲಿ ಇಂಥ ಈಡೇರಿಸಲ್ಪಟ್ಟ ಸವಲತ್ತುಗಳನ್ನು ಇಲ್ಲವಾಗಿಸುವ, ಮುಂದಿಟ್ಟ ಹೆಜ್ಜೆಯನ್ನು ಹಿಂದಿಡುವ, ಅಂದರೆ ಭರವಸೆಗಳಿಂದ ವಿಮುಖವಾಗುವ ಪ್ರತಿಗಾಮಿ ನೀತಿಗಳನ್ನು ಅನುಸರಿಸುವ ಅಧಿಕಾರ ಸರಕಾರಕ್ಕೆ ಇರಲಾರದು. ಈ ದಿಶೆಯಲ್ಲಿ ತಾತ್ವಿಕ ಮತ್ತು ತಾರ್ಕಿಕ ಚರ್ಚೆ ನಡೆಯಬೇಕಾಗಿರುವುದು ಇಂದಿನ ತುರ್ತು ಅಗತ್ಯತೆಯಾಗಿದೆ. ಕಲ್ಯಾಣ ರಾಜ್ಯದ ಕಲ್ಪನೆಯ ಫಲಾನುಭವಿಗಳಾದ ಸಾಮಾನ್ಯ ನಾಗರಿಕರನ್ನು ವಂಚಿಸುವ, ಅವರನ್ನು ನಿರ್ಗತಿಕರನ್ನಾಗಿ ಮಾಡುವ ಅಧಿಕಾರ ಸರಕಾರಕ್ಕೆ ಇರಲಾರದು, ಇರಬಾರದೂ ಕೂಡ.

ಸಂವಿಧಾನ ನೀಡಿದ ರಕ್ಷಣೆಯ ಭರವಸೆಯ ಹಿನ್ನೆಲೆಯಲ್ಲಿ ನಮ್ಮ ನಿತ್ಯದ ಬದುಕಿನತ್ತ ನೋಡಿದಾಗ ೧೯೯೧ರ ನಂತರದ ಹೊಸ ಆರ್ಥಿಕ ನೀತಿಯ ಸಿದ್ಧಾಂತದಿಂದಾಗಿ ಸಾಮಾನ್ಯ ಜನ ಕಳೆದುಕೊಂಡಿರುವುದೇ ಜಾಸ್ತಿ. ಉದಾಹರಣೆಗೆ, ೧೯೯೪ರಲ್ಲಿ ನಗರ ಪ್ರದೇಶಗಳಲ್ಲಿನ ನಮ್ಮ ರಾಜ್ಯದ ಜನ ಕುಡಿಯುವ ನೀರಿಗಾಗಿ ನೀರು ಸರಬರಾಜು ಇಲಾಖೆಗೆ ವಾರ್ಷಿಕ ರೂ. ೧೪೦ ಪೈ. ೪೦, ತಿಂಗಳಿಗೆ ರೂ. ೧೧ ಪೈ. ೭೦ ನೀಡಬೇಕಿತ್ತು. ಗೃಹೋಪಯೋಗಿ ವಿದ್ಯುತ್ ಬಳಕೆಯಾಗಿದ್ದಲ್ಲಿ ೧೦೦ ಯೂನಿಟ್‌ಗಳಿಗೆ ರೂ. ೬೫ ನೀಡಬೇಕಿತ್ತು. ಈಗದು ರೂ. ೨೮೮ರಷ್ಟು ಹೆಚ್ಚಿದೆ. ಇದೇ ರೀತಿಯಲ್ಲಿ ಮನೆ ಕಂದಾಯ ೧೦೦ ರೂ. ಇದ್ದ ಕಡೆ ಈಗ ೪೦೦ ರೂ.ಗೆ ಏರಿದೆ. ಪೆಟ್ರೋಲ್, ಸೀಮೆಎಣ್ಣೆ, ಡೀಸೆಲ್ ದರಗಳೂ ಇದೇ ರೀತಿಯ ಏರಿಕೆ ಪ್ರಮಾಣದಲ್ಲಿವೆ. ಒಂದು ವಸ್ತು ಮಾತ್ರ, ಯಾವುದನ್ನು ಭಾರತೀಯರು ಸಂಪತ್ತಿನ ಸಂಕೇತವೆಂದು ಬಗೆಯುತ್ತೇವೆಯೋ ಅದು ಮಾತ್ರ ಅಗ್ಗದ ಪ್ರಮಾಣದಲ್ಲಿ ಏರುತ್ತ ಸಾಗಿದೆ. ೧೦ ಗ್ರಾಂ ಬಂಗಾರಕ್ಕೆ ೧೯೯೪ರಲ್ಲಿ ರೂ. ೪೬೮೦ ಇತ್ತು. ಈಗ ಅದು ರೂ. ೫೬೮೦ಕ್ಕೆ ಏರಿದೆ. ಯಾವುದರ ದರ ಏರಿಕೆ ದುಬಾರಿ? ಬಂಗಾರದ್ದೋ, ಕುಡಿಯುವ ನೀರಿನದೋ, ವಿದ್ಯುತ್ತಿನದೊ? ಬಂಗಾರಕ್ಕಿಂತ ನಿತ್ಯೋಪಯೋಗಿ ವಸ್ತು ಮತ್ತು ಸೇವೆಗಳ ಬೆಲೆ ಏರಿಕೆ ೫ ರಿಂದ ೧೦ ಪಟ್ಟು ಹೆಚ್ಚಿದೆ. ಈ ರೀತಿ ದೇಶವಿಂದು ಸಾಮಾನ್ಯ ಜನರ ಬದುಕಿಗೆ ವ್ಯತಿರಿಕ್ತವಾಗಿ ಸಾಗುತ್ತಿರುವಾಗ ಸಂವಿಧಾನ ನೀಡಿದ ಭರವಸೆಗಳ, ಈಡೇರಿಕೆಗಳ ರಕ್ಷಕ ಪಾತ್ರ ನಿರ್ವಹಿಸಬೇಕಿರುವ ನ್ಯಾಯಾಂಗ ಕ್ಷೇತ್ರದಿಂದ ಸಾಮಾನ್ಯ ಜನ ಬಹಳಷ್ಟನ್ನು ನಿರೀಕ್ಷಿಸುತ್ತಾರೆ.

ಇತ್ತೀಚಿನ ದಿನಗಳಲ್ಲಿ ಸಾರ್ವಜನಿಕ ಹಿತಾಸಕ್ತಿಯ ವ್ಯಾಜ್ಯಗಳು ಕರ್ನಾಟಕ ಹೈಕೋರ್ಟಿನಲ್ಲಿ ಅಪರೂಪವಾಗಿವೆ. ಸರಕಾರ ಅನುಸರಿಸುವ ವಿವೇಚನಾರಹಿತ ಅವಸರದ ನೀತಿಗಳಿಂದಾಗಿ ಜನಸಾಮಾನ್ಯರು ಸರಕಾರೀ ಇಲಾಖೆಗಳಿಂದ, ಸ್ಥಳೀಯ ಸಂಸ್ಥೆಗಳಿಂದ ಕಿರುಕುಳ ಅನುಭವಿಸುತ್ತಿದ್ದಾರೆ. ವಿದ್ಯುತ್ ಸರಬರಾಜು ನಿಗಮಗಳು ವಿದ್ಯುತ್ ಬೆಲೆಯನ್ನು ಹೆಚ್ಚಿಸುವುದನ್ನು ತಮ್ಮ ಕಾಯಕದ ಭಾಗವೆಂದು ಪರಿಗಣಿಸಿವೆ. ಅದೇ ರೀತಿಯಲ್ಲಿ ನಗರಸಭೆಗಳು, ಸಾರಿಗೆ ಇಲಾಖೆ, ರಹದಾರಿ ಇಲಾಖೆಗಳೂ ಸಹ.

ಒಂದು ಅಂಶವನ್ನು ಇಲ್ಲಿ ಗಮನಿಸಬೇಕು. ವಿವಿಧ ಇಲಾಖೆಗಳು, ಸಂಸ್ಥೆಗಳು, ನಾಗರಿಕರಿಂದ ಬೆಲೆಯನ್ನು, ತೆರಿಗೆಯನ್ನು, ಸುಂಕವನ್ನು, ಇನ್ನಿತರ ದಂಡಗಳನ್ನು ನಿರ್ದಾಕ್ಷಿಣ್ಯವಾಗಿ ವಸೂಲು ಮಾಡುತ್ತವೆ. ಇವುಗಳಿಗೆ ಹಣ ಪಾವತಿಸಲು ನಾಗರಿಕರು ಬದ್ಧರು. ಆದರೆ ಹೀಗೆ ವಸೂಲಾದ ಹಣದ ಸದ್ಬಳಕೆ ಆಗಿದೆಯೇ? ಪ್ರಶ್ನಿಸುವ ಹಕ್ಕು ನಾಗರಿಕರಿಗಿಲ್ಲ. ಇಂಥ ಸಂದರ್ಭದಲ್ಲಿ ನ್ಯಾಯಾಂಗದ ಮಧ್ಯಪ್ರವೇಶ ಅಪೇಕ್ಷಣೀಯವಾಗಿರುತ್ತದೆ. ಆದರೆ ನ್ಯಾಯಾಲಯಗಳು ಈಗಾಗಲೇ ತಮ್ಮ ಕೆಲಸದ ಹೊರೆಯನ್ನು ಹೆಚ್ಚಿಸಿಕೊಂಡಿವೆ. ತಾವು ಇತ್ಯರ್ಥಪಡಿಸಬೇಕಾದ ಸಮಸ್ಯೆಗಳನ್ನು ಸೋಂಬೇರಿ ಸರಕಾರಗಳು ಇತ್ಯರ್ಥ ಪಡಿಸದೆ ಅವುಗಳನ್ನು ನ್ಯಾಯಾಲಯದ ಅಂಗಳಕ್ಕೆ ತೂರುತ್ತಿರುವುದು ನ್ಯಾಯಾಲಯಗಳ ಕೆಲಸದ ಒತ್ತಡಗಳಿಗೆ ಮತ್ತೊಂದು ಕಾರಣ. ಉದಾಹರಣೆಗೆ : ಬಾಬರಿ ಮಸೀದಿಯನ್ನು ಕೆಡವಕೂಡದೆಂದು ಅದನ್ನು ರಕ್ಷಿಸಲು ಸರ್ವೋಚ್ಚ ನ್ಯಾಯಾಲಯ ಸರಕಾರಗಳಿಂದ ಮುಚ್ಚಳಿಕೆ ಪಡೆಯಿತು. ಉದ್ಧಟ ಸರಕಾರಗಳು ಮುಚ್ಚಳಿಕೆಯನ್ನು ಮರೆಮಾಚಿ ಕಟ್ಟಡ ಬೀಳಲು ನೆರವಾದವು. ಈಗ ಆ ಸ್ಮಶಾನ ಸ್ಥಳದಲ್ಲಿ ಏನಿತ್ತು ಎಂದು ಅರಿಯಲು ನ್ಯಾಯಾಲಯವು ಅಗೆಯುವ ಕಾರ್ಯಕ್ಕೆ ಕೈಹಾಕಬೇಕಾಯಿತು. ಹೀಗೆ ಈ ಸೋಂಬೇರಿ ಸರಕಾರಗಳ ಜಾಲ ಬೆಸ್ಟ್ ಬೇಕರಿ ಪ್ರಕರಣದವರೆಗೂ ಸಾಗುತ್ತಿದೆ. ಇದರಿಂದಾಗಿ ನ್ಯಾಯಾಲಯಗಳ ಕಾರ್ಯವೈಖರಿಗಳ ಮೇಲೆ ಪರಿಣಾಮ ಉಂಟಾಗದಿರದು. ಮೊದಲಿನಂತೆ ಈಗ ಜನಪರ ಚಿಂತಿಸುವ ಪರಿಸರವಾಗಲಿ, ಸಮಯವಾಗಲಿ ನ್ಯಾಯಾಲಯಗಳಿಗೆ ಇರುವುದಿಲ್ಲ. ಸಾರ್ವಜನಿಕ ಹಿತಾಸಕ್ತಿ ವ್ಯಾಜ್ಯಗಳಿಗೆ ಈಗ ಪ್ರವೇಶವಿಲ್ಲದಿರುವುದೇ ಇದಕ್ಕೆ ಸಾಕ್ಷಿ.

ನ್ಯಾಯಶಾಸ್ತ್ರದ ಲ್ಯಾಟಿನ್ ಉಕ್ತಿ ಒಂದಿದೆ : Ub:Jus Ib:Remedium. ಎಂದರೆ ಎಲ್ಲಿ ಹಕ್ಕಿದೆಯೋ ಅಲ್ಲಿ ಪರಿಹಾರವಿದೆ. ಇಂದಿನ ನ್ಯಾಯಾಲಯಗಳ ಒತ್ತಡದ ಕಾರ್ಯವೈಖರಿಯಿಂದಾಗಿ ಈ ಉಕ್ತಿ ತನ್ನ ಅರ್ಥ ಕಳೆದುಕೊಳ್ಳುತ್ತಲಿದೆಯೆ? ಅಥವಾ ಮಾರ್ಕ್ಸ್ ಹೇಳುವಂತೆ, ನೌಕರಿ ಇರುವ ಕೆಲಸಗಾರರು ನೌಕರಿ ಕಳೆದುಕೊಂಡು, ಭೂಮಿ ಹೊಂದಿರುವ ರೈತರು ಭೂಮಿಯಿಂದ ಹೊರದೂಡಲ್ಪಟ್ಟು ಬಹುಸಂಖ್ಯ ಜನ ವಿಭಾಗವೇ ನಿರ್ಗತಿಕರಾಗುವ ಸಂದರ್ಭ ಬಂಡವಾಳವಾದಿ ವ್ಯವಸ್ಥೆಯ ಅಂತಿಮ ಸಾಧನೆಯಾಗಿರುತ್ತದೆ. ಅಂದರೆ, ಜನರಿಗೆ ಹಕ್ಕುಗಳಿಲ್ಲ, ಅದರಂತೆ ಪರಿಹಾರವಿಲ್ಲ. ಅಂದರೆ No Jus No Remedium !

ರವೀಂದ್ರ ಹಳಿಂಗಳಿ
ಜಮಖಂಡಿ



## ಸಂಜ್ಞೆ

ನನ್ನಾಕೆ
ಸೀಟಿಯ ಮೂಲಕವೇ
ತನ್ನ ಬಯಕೆಗಳನ್ನು
ವ್ಯಕ್ತಪಡಿಸೋದ್ರೀ,
ಯಾಕಂದ್ರ
ಅವಳು ಬಿ.ಎಂ.ಟಿ.ಸಿ.
ಬಸ್ ಕಂಡಕ್ಟರ್ರೀ!

ಮಂಜು ಶೆಟ್ಟರ
ಕೇರಾಫ್ : ಈರಪ್ಪ ಎಂ. ಕಂಬಳಿ
ಡಿ-೧೫೪, ಜೀವನಭೀಮನಗರ
ಬೆಂಗಳೂರು - ೫೬೦ ೦೭೫

# ವಿದಾಯ



ಡಾ|| ಜಾನಕಿ ಸುಂದರೇಶ

ಆಫೀಸ್ ಸರ್ಕ್ಯುಲರ್ ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು ಹವಾಯಿ ಚಪ್ಪಲಿಯನ್ನು ತೊಸಪಸಾ ಎಳೆದುಕೊಂಡು ಅಟೆಂಡರ್ ಮೋನಪ್ಪ ಸೆಕ್ಷನ್ನಿನ ಒಳಗೆ ಹೊಕ್ಕ. ಪುಸ್ತಕವನ್ನು ಒಬ್ಬೊಬ್ಬರ ಮುಖಕ್ಕೊ ಒಡ್ಡಿ, 'ಓದಿ ಸೈನ್ ಹಾಕಿ ಸಾ' ಎಂದು ಟೇಬಲ್ಲಿಂದ ಟೇಬಲ್ಲಿಗೆ ತಿರುಗತೊಡಗಿದ. ಇಪ್ಪತ್ತೈದು ಮೂವತ್ತು ಮಂದಿ ಸಿಬ್ಬಂದಿಗಳು ಕೂರುವ ವಿಶಾಲವಾದ ಹಾಲ್ ಅದು. ಆ ತುದಿಯಿಂದ ಈ ತುದಿಯತನಕ ಎರಡೂ ಕಡೆಗಳಲ್ಲಿ ಸಾಲಾಗಿ ಕೂತಿದ್ದ ಘನಘೋರ ಗಂಭೀರ ಸರ್ಕಾರಿ ಯಂತ್ರದ ನಟ್ಟು ಬೋಲ್ಟು ಸ್ಪ್ರಿಂಗುಗಳಲ್ಲಿ ಮೋನಪ್ಪನ ಆಗಮನ ಒಂದು ಸಂಚಲವನ್ನುಂಟು ಮಾಡಿತು. ಇದೇನು ಹೊಸ ರಗಳೆ ತಂದನಪ್ಪಾ ಇವನು ಎಂದು ಶುರುವಾದ ಗೊಣಗಾಟವು ಕ್ರಮೇಣ ಮಂದ್ರದಿಂದ ತಾರಕದ ಕಡೆಗೆ ಏರುತ್ತಾ ಬಂದು ಸೆಕ್ಷನ್ನು ಗುಜುಗುಜು ಮಾತು ಚರ್ಚೆ, ನಗುವಿನಿಂದ ತುಂಬಿಹೋಯ್ತು. ಇದ್ಯಾವುದಕ್ಕೂ ಸೊಪ್ಪು ಹಾಕದೇ ತನ್ನ ಪಾಡಿಗೆ ತಾನು ಸೈನ್ ಹಾಕಿಸಿಕೊಂಡು ಸ್ಥಿತಪ್ರಜ್ಞನ ಗತ್ತಿನಲ್ಲಿ ಮೋನಪ್ಪ ಹೊರಟುಹೋದ. ಅವನಿಗೆ ಇತ್ತೀಚೆಗೆ ಶ್ರವಣಶಕ್ತಿ ಕಮ್ಮಿಯಾಗುತ್ತಿದ್ದುದರಿಂದ ಅದನ್ನು ಮುಚ್ಚಿಟ್ಟುಕೊಳ್ಳಲು ಇನ್ನಷ್ಟು ದೊಡ್ಡಸ್ತಿಕೆ, ಮತ್ತಷ್ಟು 'ಏನಾದ್ರೂ ಮಾಡ್ಕೊಳ್ಳಿ' ಧೋರಣೆ ತೋರಿಸುವ ಅನಿವಾರ್ಯತೆ ಹುಟ್ಟಿಕೊಂಡಿತ್ತು. ಸರ್ಕ್ಯುಲರ್ ಪುಸ್ತಕದಲ್ಲಿದ್ದ ವಿಷಯವೆಂದರೆ ''ಅಗತ್ಯ ವಿಷಯಗಳ ಬಗ್ಗೆ ಚರ್ಚೆ ಮಾಡಬೇಕಿರುವುದರಿಂದ ಇವತ್ತು ಸಂಜೆ ನಾಲ್ಕು ಮೂವತ್ತಕ್ಕೆ ಸ್ಟಾಫ್ ಮೀಟಿಂಗ್ ಕರೆಯಲಾಗಿದೆ. ಎಲ್ಲರೂ ತಪ್ಪದೇ ಭಾಗವಹಿಸುವುದು.''

''ಏನಂತೆ ಅಗತ್ಯ ವಿಷಯ ? ಯಾರಿಗಂತೆ ಅಗತ್ಯ ? ತಿಂಗಳಿಗೆ ನಾಲ್ಕು ಮೀಟಿಂಗ್ ಆಯ್ತಲ್ಲಪ್ಪಾ'' ಸುಧಾಕರ ಗೊಣಗಿದ.

''ಅಗತ್ಯ ಅಂದ್ರೆ ಇರುತ್ತಪ್ಪಾ. ಅವರ ಅಗತ್ಯ. ಅವರು ಕರೆದರು ಅಂದ್ರೆ ನಾಲ್ಕಲ್ಲ ನಲವತ್ತು ಮೀಟಿಂಗಿಗಾದ್ರೂ ಹೋಗಲೇಬೇಕಲ್ಲ'', ಶರೀಫ್ ದನಿಗೂಡಿಸಿದ.

''ಹೌದೌದು. ತಿಂಗಳಿಡೀ ಇದೇ ಕೆಲಸ ಮಾಡ್ಕೊಂಡು ಕೂತ್ರೆ ಟೇಬಲ್ ಮೇಲಿದೆಯಲ್ಲ ಮೌಂಟ್ ಎವರೆಸ್ಟ್ ಅದನ್ನ ಯಾರಪ್ಪಾ ನೋಡೋರು ? ನಾಳೆ ಅವರೇ ದಬಾಯಿಸ್ತಾರೆ. ಒಂದು ಫೈಲ್ ಮೂವ್ ಮಾಡೋಕೆ ನಿಮಗೆ ಎಷ್ಟು ವರ್ಷ ಬೇಕ್ರೀ ಅಂತ.''

''ದಬಾಯಿಸ್ತಾರಪ್ಪಾ ದಬಾಯಿಸ್ತಾರೆ. ಅವರಿರೋದೇ ದಬಾಯಿಸೋಕೆ. ನಾವಿರೋದೆ ದಬಾಯಿಸಿಕೊಳ್ಳೋಕೆ. ನಾವು ಮಾತಾಡೋ ಹಾಗೆ ಇದೆಯಾ ? ಹೋದ್ವರ್ಷ ಆ ದೊಡ್ಡಯ್ಯ ನಳಿನಾಕ್ಷಿಗೆ ಮಂಗಳಾರತಿ ಎತ್ತಿರಲಿಲ್ವಾ 'ಕೆಲಸ ಮಾಡೋಕಾಗದಿದ್ರೆ ರಿಸೈನ್ ಮಾಡ್ರೀ' ಅಂತ ? ಕೈ ಬಿಸಿ ಮಾಡದಿದ್ರೆ ಒಂದೇ ಒಂದು ದಿನ ಕೆಲಸ ಮಾಡಿದವನಲ್ಲ ಪುಣ್ಯಾತ್ಮ. ಉಳಿದವರಿಗೆಲ್ಲ ಉಪದೇಶ ಮಾಡೋಕೆ ಮಾತ್ರ ಯಾವಾಗಲೂ ರೆಡಿ.''

''ಅಯ್ಯೋ ಯಾಕೆ ಸುಮ್ಮನೆ ಚರ್ಚೆ ಮಾಡೋದು ? ವಿಷಯ ಎಲ್ಲರಿಗೂ ಗೊತ್ತಿದ್ದಿದ್ದೇ. ಎಷ್ಟೇ ಆಗಲಿ ನಾವು ಗುಲಾಮರು. ಗವರ್ನ್‌ಮೆಂಟ್ ಗುಲಾಮರು. ಜೀ ಹುಜೂರ್ ಅಂದ್ಕೊಂಡಿದ್ರೆ ಬದುಕ್ಕೋಬಹುದು. ಇಲ್ಲಾಂದ್ರೆ ಫುಟ್‌ಬಾಲ್ ತರಹ ಒದೆಸ್ಕೋತಾನೇ ಇರಬೇಕಾಗುತ್ತೆ''

ತಮ್ಮ ಅಸಹಾಯಕ ಪರಿಸ್ಥಿತಿಯ ಬಗ್ಗೆ ಆತ್ಮಾನುಕಂಪ ಅನುಭವಿಸುತ್ತ ಒಂದಷ್ಟು ಮಂದಿ ಸುಮ್ಮನೆ ಹುಬ್ಬು ಗಂಟಿಕ್ಕಿ ಶೋಚನೀಯ ಮುಖಮುದ್ರೆಯಲ್ಲಿ ಪೆನ್ನಿನ ತುದಿಯಿಂದ ಹಣೆ ಕೆರೆದುಕೊಳ್ಳುತ್ತಾ ಕೂತರು. ಪೆನ್ನಿನ ಈ ತುದಿಗೆ ಕೆಲಸ ಕೊಡುವ ಬದಲು ಆ ತುದಿಗಾದರೂ ಕೊಟ್ಟಿದ್ದರೆ ಅಷ್ಟರಲ್ಲಿ ಒಂದಿಷ್ಟು ಫೈಲುಗಳು ಮುಂದೆ ಹೋಗಿರುತ್ತಿದ್ದವು.

ಹಾಲ್‌ನ ಮೂಲೆಯಲ್ಲಿದ್ದ ಕಂಪ್ಯೂಟರ್ ಸೆಕ್ಷನ್ನಿನ ಗಾಜಿನ ಬಾಗಿಲು ತಳ್ಳಿಕೊಂಡು ಸೂಪರ್‌ವೈಸರ್ ಡಿಸೋಜ ಬಂದರು. ಅಚ್ಚ ಬಿಳಿಯ ಷರಟು, ಅರ್ಧ ಬೆಳ್ಳಗಾದ ತಲೆ, ಸಾತ್ವಿಕ ಮುಖಭಾವ: ಮೆಲುಮಾತಿನ ಡಿಸೋಜರೆಂದರೆ ಎಲ್ಲರಿಗೂ ಗೌರವ. ಅದೇನು ಕಾರಣವೋ ಡಿಸೋಜರು ಚಪ್ಪಲಿ ಹಾಕುತ್ತಿರಲಿಲ್ಲ. ಯಾವಾಗಲೂ ಬಿಳಿ ಪಂಚೆಯನ್ನು ಉಟ್ಟು ಆಫೀಸಿಗೆ ಬರುತ್ತಿದ್ದ ಡಿಸೋಜರಿಗೆ ಆಫೀಸಿನ ಅಧಿಕೃತ ತರಲೆ, ಸುಧಾಕರ 'ಸೋಜಭಟ್ರು' ಎಂದು ಹೆಸರಿಟ್ಟಿದ್ದ. ಅವರ ಎದುರೆದುರು ಹಾಗೆ ಕರೆಯುವಷ್ಟು ಧೈರ್ಯ ಮಾತ್ರ ಇರಲಿಲ್ಲ ಅಷ್ಟೇ. ಡಿಸೋಜರನ್ನು ನೋಡಿ ''ಏನ್ಸಾರ್, ಯಾಕಂತೆ ಮೀಟಿಂಗು'' ಎಂದ.

ಅವರು ಉತ್ತರಿಸುವ ಮೊದಲೇ ಪದ್ಮಯ್ಯ ಬಾಯಿ ಹಾಕಿದ. ''ಇನ್ಯಾಕೆ, ಯಾವನೋ ಮಿನಿಸ್ಟ್ರೋ ಆಫೀಸರ್ರೋ ಬರ್ತಾರೆ ಅಂತ ಕಾಣುತ್ತೆ. ಅದಕ್ಕೇ ಮೀಟಿಂಗು. ಕಲೆಕ್ಷನ್ನಿಗೆ ಅಷ್ಟೇ.''

ಅಚ್ಚುಮೆಚ್ಚಿನ ಮೇಷ್ಟ್ರು ಎದುರು ಹೋಗಿ ಗಯ್ಯಾಳಿ ಟೀಚರಮ್ಮನ ಮೇಲೆ ದೂರು

ಹೇಳುವ ಮಕ್ಕಳಂತೆ ಎಲ್ಲರೂ ಮತ್ತೆ ಪುನಃ ತಲೆಗೊಂದು ಮಾತಾಡುತ್ತಾ ವ್ಯವಸ್ಥೆಯ ವಾಸ್ತವ ಚಿತ್ರಣವನ್ನು ತೆರೆದಿಟ್ಟರು.

''ಏನ್ಸಾರ್, ದಿನ ಬೆಳಗಾದ್ರೆ ಬರೀ ಇದೇ ಕೆಲಸ ಆಯ್ತಲ್ಲ. ಮೊನ್ನೆ ತಾನೇ ಹೆಡ್ಡಾಫೀಸಿಂದ ಆಡಿಟ್‌ಗೆ ಬರ್‍ತಾರೆ ಅಂತ ಎಲ್ಲರ ಹತ್ರ ಇನ್ನೂರಿನ್ನೂರು ಕಿತ್ಕೊಂಡ್ರು. ಈಗ ಮತ್ತೆ ಸ್ಟಾಫ್ ಮೀಟಿಂಗು...''

''ನಮ್ಮ ಹತ್ರ ಇನ್ನೂರು ವಸೂಲು ಮಾಡಿದ್ರೆ ಅವರಿಗೆ ತಲುಪೋದು ನೂರು. ಉಳಿದ ನೂರು ಮಧ್ಯದಲ್ಲಿ ಯಾರ ಜೇಬಿಗೆ ಹೋಗುತ್ತೋ ದೇವರಿಗೇ ಗೊತ್ತು''

''ಸಾಲದ್ದಕ್ಕೆ ದಿನಕ್ಕೊಂದು ಟಿಕೇಟ್ ಪುಸ್ತಕ ತಂದುಕೊಡ್ತಾರೆ, ಮಾರಿ ಕೊಡಿ ಅಂತ. ಆ ಉತ್ಸವ ಈ ಮೆರವಣಿಗೆ ಇನ್ನೊಂದು ಬಿಲ್ಡಿಂಗ್ ಫಂಡಿಗೆ ಅಂತ. ಪಬ್ಲಿಕ್ಕು ಬೈಯೋದು ನಮ್ಮನ್ನ. ಒಳ್ಳೇ ಬಸ್‌ಸ್ಟ್ಯಾಂಡಲ್ಲಿ ಲಾಟರಿ ಟಿಕೇಟು ಮಾರೋ ಏಜೆಂಟಿಗಿಂತ ಕಡೆಯಾಗಿ ಹೋದ್ವಿ ನಾವು.''

ಅವೆಲ್ಲ ದೂರುಗಳು ಸತ್ಯವೆಂದು ಗೊತ್ತಿದ್ದ ಡಿಸೋಜರು ಮುಗುಳ್ನಕ್ಕರು. ಮೂವತ್ತು ವರ್ಷದ ಸರ್ವೀಸಲ್ಲಿ ಅವರು ಇಂಥ ಸಾವಿರಾರು ಗೊಣಗಾಟಗಳನ್ನು ಕೇಳಿದ್ದರು. ಗೊಣಗಾಟಗಳ ನಿಷ್ಪ್ರಯೋಜಕತೆಯನ್ನು ಅರಿತಿದ್ದರು. ಹಾಗೆಯೇ ಗೊಣಗಾಟದ ಉಪಯುಕ್ತತೆಯನ್ನು ಅರ್ಥ ಮಾಡಿಕೊಂಡಿದ್ದರು. ಗೊಣಗಾಡುವವರು ಗೊಣಗಿ ತೃಪ್ತಿಪಟ್ಟುಕೊಂಡು ಸುಮ್ಮನಾಗುತ್ತಾರೆ. ಅದಕ್ಕಿಂತ ಹೆಚ್ಚಿನದೇನನ್ನೂ ಮಾಡುವುದಿಲ್ಲವಾದ್ದರಿಂದ ಸಂಘರ್ಷಕ್ಕೆ ಆಸ್ಪದವಿಲ್ಲ.

''ಯಾಕ್ರಪ್ಪಾ ಇಷ್ಟೊಂದು ಬೇಜಾರಾಗ್ತೀರಾ ? ಈಗಿನ ಆಫೀಸರು ಒಳ್ಳೆಯವರಿದ್ದಾರೆ. ನಾವೆಲ್ಲ ಸ್ವಲ್ಪ ಅಡ್ಜಸ್ಟ್ ಮಾಡ್ಕೊಂಡು ಹೋಗಬೇಕು'' ತಣ್ಣಗೆ ಹೇಳಿದರು.

''ಅದೇನೋ ನಿಜ ಬಿಡಿ. ಇವರು ಸ್ವಲ್ಪ ಮನುಷ್ಯರ ಜಾತಿಗೆ ಸೇರಿದವರು. ಆ ದೊಡ್ಡಯ್ಯನ ಹಾಗೆ ಅಲ್ಲ.''

''ಸಧ್ಯ ಪುಣ್ಯಾತ್ಮ ತೊಲಗಿದನಲ್ಲ, ಅವನ ಹೆಸರೂ ಎತ್ತಬೇಡಿ.'' ದೊಡ್ಡಯ್ಯನ ಹೆಸರು ಕೇಳುತ್ತಲೇ ಹಾಲ್‌ನಲ್ಲಿದ್ದ ಬಹಳಷ್ಟು ಮಂದಿ ಮುಖ ಕಿವುಚಿದರು. ಮೂರು ತಿಂಗಳ ಹಿಂದಷ್ಟೇ ಹೆಡ್ ಆಫೀಸಿಗೆ ವರ್ಗವಾಗಿ ಹೋಗಿದ್ದ ದೊಡ್ಡಯ್ಯ ಇಲ್ಲಿ ಅಧಿಕಾರಿಯಾಗಿದ್ದಷ್ಟು ದಿನವೂ ಒಬ್ಬೊಬ್ಬರಿಗೆ ಒಂದೊಂದು ರೀತಿಯ ಕಿರುಕುಳ ಕೊಡುವುದನ್ನೇ ಸಮರ್ಥ ಆಡಳಿತಗಾರನ ಲಕ್ಷಣ ಎಂದು ಭಾವಿಸಿಕೊಂಡಿದ್ದ ವ್ಯಕ್ತಿ. ಸ್ಥಳೀಯ ಶಾಸಕನ ಭಾವಮೈದ ಬೇರೆ ಆಗಿದ್ದರಿಂದ ಆಫೀಸ್ ಸಿಬ್ಬಂದಿಯೆಲ್ಲ ಬಾಯಿಮುಚ್ಚಿಕೊಂಡು ಸಹಿಸಿಕೊಂಡಿದ್ದರು. ಬಾಯಿ ಬಿಟ್ಟರೆಂದರೆ ಮೂಗು ಒತ್ತಿ ಹಿಡಿದಾರೆನ್ನುವ ಭಯಕ್ಕೆ ಅಂದಿದ್ದನ್ನು ಅನ್ನಿಸಿಕೊಂಡು. ಹೇಳಿದ ಹಾಗೆ ಕೇಳಿಕೊಂಡಿದ್ದ ಆಫೀಸು ಅವರು ವರ್ಗವಾಗಿ ಹೋದ ನಂತರ ದೊಡ್ಡದಾಗಿ ನಿಟ್ಟುಸಿರು ಬಿಟ್ಟಿತ್ತು.

ಡಿಸೋಜ ಹೇಳಿದರು ''ದೊಡ್ಡಯ್ಯನವರು ವಾಲಂಟರಿ ರಿಟೈರ್‌ಮೆಂಟ್ ತಗೋತಾ ಇದಾರಂತೆ.'' ಸುಧಾಕರ ಎದ್ದು ನಿಂತು ಜೋರಾಗಿ ಚಪ್ಪಾಳೆ ತಟ್ಟಿದ. ನಂತರ ಡಿಸೋಜರವರ ಹತ್ತಿರ ಹೋಗಿ ನಾಟಕೀಯವಾಗಿ ಅವರ ಕೈ ಹಿಡಿದೆಳೆದು ಕುಲುಕುತ್ತಾ ''ಸಾರ್... ಸಾರ್ ಇಷ್ಟು ದಿನಕ್ಕೆ ಇವತ್ತೊಂದು ಒಳ್ಳೆಯ ಸುದ್ದಿ ಹೇಳಿದಿರಿ. ಲೋ ಮೋನಪ್ಪಾ, ಹೋಗಿ ಎಲ್ಲರಿಗೂ ಸ್ವೀಟು ತಗೊಂಬಾರಪ್ಪಾ. ಡಿಸೋಜ ಸಾಹೇಬರ ಲೆಕ್ಕದಲ್ಲಿ'' ಎಂದ ಏರಿದ ದನಿಯಲ್ಲಿ. ಎಲ್ಲರ ಮುಖದಲ್ಲೂ ಮಂದಹಾಸ.

ಟೈಪಿಸ್ಟ್ ನಳಿನಾಕ್ಷಿ ನಿಟ್ಟುಸಿರು ಬಿಡುತ್ತ ''ಸಧ್ಯ ! ಎಲ್ಲಿ ಪುನಃ ಇಲ್ಲಿಗೇ ಟ್ರಾನ್ಸ್‌ಫರ್ ಮಾಡಿಸ್ಕೊಂಡು ಬರ್‍ತಾರೋ ಅಂತ ಹೆದರಿಕೆಯಾಗಿತ್ತು. ಅವರಿಗೆ ಇನ್ನೂ ಎರಡು ವರ್ಷ ಸರ್ವೀಸಿತ್ತಲ್ಲಾ. ಯಾಕಂತೆ ವಾಲಂಟರಿ ರಿಟೈರ್‌ಮೆಂಟು?'' ಎಂದಳು.

''ಅದೇನೋ ಫಾರಿನ್ನಿಗೆ ಹೋಗೋ ಪ್ಲಾನ್ ಇದೆಯಂತೆ. ಏನೂಂತ ನನಗೂ ಸರಿಯಾಗಿ ಗೊತ್ತಿಲ್ಲ'' ಡಿಸೋಜ ಹೇಳಿದರು.

''ಓ ಇದು ಇನ್ನೂ ಒಳ್ಳೆಯದಾಯ್ತು. 'ದೊಡ್ಡಯ್ಯಾ ದೇಶ ಬಿಟ್ಟು ತೊಲಗಿ' ಅಂತ ಬ್ಯಾನರ್ ಬರೆಸಿ ಅವರ ಮನೆ ಮುಂದೆ ಕಟ್ಟೋಣ.''

ಸುಧಾಕರನ ಮಾತಿಗೆ 'ನಿಂದು ಅತಿಯಾಯ್ತು ಸಣ್ಣಮಕ್ಕಳ ಹಾಗೆ ಆಡಬೇಡ' ಎಂದು ಗದರಿದ ಶರೀಫ್, ಡಿಸೋಜರ ಕಡೆಗೆ ತಿರುಗಿ 'ನಿಮ್ದು ಏನೇ ಹೇಳಿ ಸರ್ ಆ ದೊಡ್ಡಯ್ಯನ ಥರ ದುಡ್ಡಿಗೆ ಬಾಯಿ ಬಿಡೋವ್ರನ್ನ ನಾನು ಎಲ್ಲೂ ನೋಡಿಲ್ಲ. ಅವರಿಗೆ ಹೆಸರಿಡುವ ಹೊತ್ತಲ್ಲಿ ಅವರ ತಂದೆಗೆ ಬಾಯಿತಪ್ಪಿ ದುಡ್ಡಯ್ಯ ಅಂತಿಡುವ ಬದಲು ದೊಡ್ಡಯ್ಯ ಅಂತಿಟ್ಟಿರಬೇಕು' ಎಂದ.



ಖುಷಿಯಾಗೋಕ್ಕೆ 'ಬೀರು' ಕುಡಿಸೋದಕ್ಕಿಂತ ನಿಮ್ಗೆ ನೀರು ಕುಡಿಸೋ ಜನ ಜಾಸ್ತಿ....

ಡಿಸೋಜ ಅದಕ್ಕೆ ಏನೂ ಪ್ರತಿಕ್ರಿಯೆ ನೀಡದೆ ''ಸಾಕು ಸಾಕು ಕೆಲಸ ನೋಡ್ಕೊಳ್ಳಿ'' ಎಂದು ಕ್ಯಾಬಿನ್ನಿನೊಳಗೆ ಹೊರಟುಹೋದರು. ಉಳಿದವರೆಲ್ಲ ಒಂದಷ್ಟು ಹೊತ್ತು ದೊಡ್ಡಯ್ಯನ ಗುಣಗಾನ ಮಾಡಿ ಸುಮ್ಮನಾದರು. ಎಲ್ಲ ಮುಖದಲ್ಲೂ ತೆಳುವಾಗಿ ನೆಮ್ಮದಿಯ ಛಾಯೆ ಮೂಡಿ ಎಂದೂ ಇಲ್ಲದ ಉತ್ಸಾಹದಿಂದ ಕೆಲಸದಲ್ಲಿ ತೊಡಗಿಕೊಂಡರು.

ಆದರೆ ಸಂಜೆ ಸ್ಟಾಫ್ ಮೀಟಿಂಗ್ ಮುಗಿಸಿ ಹೊರಬರುವಾಗ ಆ ನೆಮ್ಮದಿಯ ಛಾಯೆ ಒರೆಸಿಹೋಗಿತ್ತು. ಮೀಟಿಂಗ್‌ನಲ್ಲಿ ಕೆಲವೊಂದೆರಡು ವಿಷಯ ಚರ್ಚಿಸಿದ ನಂತರ ಆಫೀಸರ್ ನಿರಂಜನ ಪ್ರಭು''ಇನ್ನೊಂದು ಮುಖ್ಯ ವಿಷಯ. ನಿಮ್ಮ ಹಿಂದಿನ ಅಧಿಕಾರಿ ದೊಡ್ಡಯ್ಯನವರು ರಿಟೈರಾಗ್ತಾ ಇದಾರೆ. ಅವರಿಗೊಂದು ಬೀಳ್ಗೊಡುಗೆ ಸಮಾರಂಭ ಮಾಡುವುದು ಸೂಕ್ತ ಅನ್ನಿಸ್ತಿದೆ. ಅದನ್ನ ಯಾವ ರೀತಿ ಮಾಡಬಹುದು ಅಂತ ನಿಮ್ಮ ಅಭಿಪ್ರಾಯ ಕೊಡಿ'' ಎಂದರು.

ಹಿಂದಿನ ಸಾಲಿನಲ್ಲಿದ್ದ ಸುಧಾಕರ ತಗ್ಗಿದ ದನಿಯಲ್ಲಿ ''ಬೀದಿಗೆ ಹೋಗಿ ಪಟಾಕಿ ಹೊಡೆಯೋಣ'' ಎಂದ. ಸುತ್ತ ಇದ್ದವರೆಲ್ಲ ಕಿಸಿಕಿಸಿ ನಕ್ಕರು.

''ಎನಿ ಸಜೆಶನ್ಸ್ ಸುಧಾಕರ?'' ಪ್ರಭು ಕೇಳಿದರು. ದೊಡ್ಡಯ್ಯನವರೆಂದರೆ ಆಫೀಸಲ್ಲಿ ಯಾರಿಗೂ ಆಗುತ್ತಿರಲಿಲ್ಲವೆಂದು ಅವರಿಗೂ ಸ್ವಲ್ಪ ಗೊತ್ತಿತ್ತು. ಆದರೂ... ದೊಡ್ಡಯ್ಯ ಎಂಎಲ್ಎಯ ಭಾವಮೈದುನ.... ''ಏನಿಲ್ಲ ಸರ್... ಏನಿಲ್ಲ ಸರ್... ನೀವು ಹೇಗೆ ಹೇಳಿದರೆ ಹಾಗೆ...'' ಸುಧಾಕರ ತಡಬಡಾಯಿಸಿದ.

ಒಂದಿಷ್ಟು ಹೊತ್ತು ವಿದಾಯಕೂಟದ ಬಗ್ಗೆ ಮಾತಾಡಿದ ಸಾಹೇಬರು ಕೊನೆಗೆ ಸುಧಾಕರನಿಗೆ ಫಂಕ್ಷನ್ ಆರ್ಗನೈಸ್ ಮಾಡುವ ಕೆಲಸವನ್ನು, ಡಿಸೋಜರಿಗೆ ಹಣ ಸಂಗ್ರಹ ಮಾಡುವ ಕೆಲಸವನ್ನು ವಹಿಸಿಕೊಟ್ಟು ನಿಶ್ಚಿಂತರಾದರು. ಜಾಣ ಅಧಿಕಾರಿ ಅವರು. ಕ್ಲಾಸಲ್ಲಿ ಗಲಾಟೆ ಮಾಡುವ ಹುಡುಗನನ್ನೇ ಮಾನೀಟರ್ ಮಾಡಿದರೆ ನಂತರ ನಿಶ್ಚಿಂತೆ ತಾನೇ.

ಹಿರಿಯ ಅಧಿಕಾರಿಗೆ ಬೀಳ್ಕೊಡುವುದು ಅಂದರೆ ಸಣ್ಣಪುಟ್ಟವರಿಗೆ ಕೊಟ್ಟ ಹಾಗೆ ಸ್ಟೀಲು ಡ್ರಮ್ಮೋ, ಗಣಪತಿ ವಿಗ್ರಹಾನೋ (ಸಣ್ಣದು, ಹಿತ್ತಾಳೆಯದು; ಗಂಧದ್ದಾದರೆ ಆರಿಂಚು ಇರುತ್ತೆ) ಕೊಟ್ಟು 'ಆಯ್ತು' ಎನ್ನಿಸಿಬಿಡುವಹಾಗಿಲ್ಲ. ಚಿನ್ನದುಂಗುರಾನೋ ಸರಾನೋ ಕೊಟ್ಟು ರೇಶ್ಮೆ ಶಾಲು ಹೊದೆಸಿ ವೀಡಿಯೋಗ್ರಾಫರ್ ಕರೆಸಿ ಇತ್ಯಾದಿ ಇತ್ಯಾದಿಯಾಗಿ ಕನಿಷ್ಠಪಕ್ಷ ಹತ್ತು ಹದಿನೈದು ಸಾವಿರವಾದ್ರೂ ಖರ್ಚು ಮಾಡದಿದ್ರೆ ಸೆಂಡಾಫ್ ತೆಗೆದುಕೊಂಡವರಿಗೂ ಕೊಟ್ಟವರಿಗೂ ಶುದ್ಧ ಅವಮಾನದ ಸಂಗತಿ. 'ಯಾಕ್ರೀ ಕೊಡಬೇಕು?' ''ಹ್ಯಾಗೂ ಡಿಪಾರ್ಟ್‌ಮೆಂಟಂದಾನೇ ಹೋಗ್ತಿದಾನೆ, ಮತ್ತೆ ಇಷ್ಟೆಲ್ಲ ಖರ್ಚು ಮಾಡಿ ಮಸ್ಕಾ ಯಾಕ್ರೀ ಹೊಡೀಬೇಕು.'' 'ಡಿಸೋಜ ಅವರೇ, ಎಲ್ಲಾ ಬಿಟ್ಟು ಇಂಥವನಿಗಾಗಿ ದುಡ್ಡು ಕಲೆಕ್ಟ್ ಮಾಡೋ ಪರಿಸ್ಥಿತಿ ಬಂತಲ್ಲ ನಿಮಗೆ. ನಿಮ್ಮ ಮೇಲೇನೇ ನೂರೆಂಟು ದೂರು ಬರೆದು ಡಿಪಾರ್ಟ್‌ಮೆಂಟಲ್ ಎನ್‌ಕ್ವಯರಿ ಆಗೋ ಹಾಗೆ ಮಾಡಿದ್ದ ಪುಣ್ಯಾತ್ಮ. ನೀವು ಒಳ್ಳೇ ಏಸುಕ್ರಿಸ್ತನ ಥರ ಅವನಿಗೇ ಖುಷಿ ಮಾಡೋಕೆ ಹೊರಟಿದ್ದೀರಲ್ಲ.. ದೇವರೇ ಇವನನ್ನು ಕ್ಷಮಿಸು ಅಂದುಕೊಂಡು ....' ನೂರೆಂಟು ಮಾತುಗಳನ್ನು ಕೇಳಿಕೊಂಡು ಅಂತೂ ಇಂತೂ ಎಲ್ಲರ ಹತ್ತಿರ ಚಂದಾ ಸಂಗ್ರಹಿಸಿ ಸುಧಾಕರನಿಗೆ ಒಪ್ಪಿಸಿ ಡಿಸೋಜ ಉಸ್ಸೆಂದು ನಿಟ್ಟುಸಿರೆಳೆದರು.

ಆ ಕ್ಷಣಕ್ಕೆ ಸದ್ಯ ನನ್ನ ಜವಾಬ್ದಾರಿ ಮುಗಿಯಿತು ಎಂದುಕೊಂಡಿದ್ದ ಡಿಸೋಜರಿಗೆ ತನ್ನಂಥ ಸಾಧುಸ್ವಭಾವದ ವಿಧೇಯ ವ್ಯಕ್ತಿಗಳಿಗೆ ಜವಾಬ್ದಾರಿ ಯಾವತ್ತೂ ಮುಗಿಯುವುದಿಲ್ಲ ಎಂದು ಸ್ಪಷ್ಟವಾಗಿದ್ದು ಬೀಳ್ಕೊಡುಗೆಯಂದು ಮೈಕ್ ಮುಂದೆ ನಿಂತಾಗ. ಕಾರ್ಯಕ್ರಮ ನಿರ್ವಹಣೆ ಮಾಡುತ್ತಿದ್ದ ಸುಧಾಕರ 'ಈಗ ಶ್ರೀ ದೊಡ್ಡಯ್ಯನವರಿಗೆ ಶುಭ ಹಾರೈಸಲು ಸಭಾಸದರಿಗೆ ಅವಕಾಶ' ಎನ್ನುತ್ತಿದ್ದಂತೆ ಆಫೀಸರು ಮುಂದಿನ ಸಾಲಿನಲ್ಲಿ ಕೂತಿದ್ದ ಡಿಸೋಜರನ್ನು ನೋಡಿ ಮಾತಾಡಿ ಎನ್ನುವಂತೆ ಸನ್ನೆ ಮಾಡಿಬಿಟ್ಟರು. ವಿಧಿಯಿಲ್ಲದೆ ಎದ್ದು ಹೋದ ಡಿಸೋಜ ಮೈಕಿನ ಮುಂದೆ ನಿಂತು ಹಾಲ್‌ನಲ್ಲಿದ್ದ ಎಂಭತ್ತು ತೊಂಭತ್ತು ಬಿಗಿದ ಮುಖಗಳನ್ನು ನೋಡಿದರು. ಮುಖಗಳಲ್ಲಿ ತುಂಬಿದ್ದ ವ್ಯಂಗ್ಯ, ತಿರಸ್ಕಾರ, ನಿರ್ಲಿಪ್ತಿ, ಬೇಸರಿಕೆಗಳನ್ನು ಗಮನಿಸಿದಂತೆ ಮನಸ್ಸು ಕ್ಷಣಕಾಲ ಖಾಲಿಖಾಲಿಯಾಯ್ತು. ಏನು ಮಾತಾಡುವುದು ? ಎಲ್ಲರೂ ಒತ್ತಾಯಕ್ಕೆ ಬಂದು ಕೂತವರು. ದೊಡ್ಡಯ್ಯ ಎಂಥ ವ್ಯಕ್ತಿಯೆನ್ನುವುದು ಎಲ್ಲರಿಗೂ ಗೊತ್ತು. ಆದರೂ ವಿದಾಯಕೂಟವೆಂದ ಮೇಲೆ ನಾಲ್ಕು ಒಳ್ಳೆಯ ಮಾತಾಡದೇ ಇರುವಂತಿಲ್ಲ. ಹೊಗಳಲು ಹೊರಟರೆ ತರಲೆ ಸುಧಾಕರ ನಾಳೆ 'ಸೋಜಭಟ್ರು ಹೊಗಳು ಭಟ್ರಾಗಿಬಿಟ್ಟಿದ್ದಾರೆ' ಎಂದು ಹಿಂದಿನಿಂದ ಆಡಿಕೊಳ್ಳದೇ ಇರುವುದಿಲ್ಲ. ಸಂದಿಗ್ಧಕ್ಕೆ ಸಿಲುಕಿದ ಡಿಸೋಜ, ದೊಡ್ಡಯ್ಯನವರಲ್ಲಿ ಕಂಡಿದ್ದ ಒಂದೆರಡು

ಒಳ್ಳೆಯ ಅಂಶಗಳಿಗೇ ಭೂತಗನ್ನಡಿ ಹಿಡಿದು ಹಿಗ್ಗಿಸಿ ನಾಲ್ಕು ಮಾತಾಡಿಬಿಡುವುದೆಂದು ತೀರ್ಮಾನಿಸಿದರು. ಆದರೆ ಮಾತು ಪ್ರಾರಂಭಿಸಿದ ನಂತರ ಅಭ್ಯಾಸಬಲದಿಂದ ಅಯಾಚಿತವಾಗಿ 'ದಕ್ಷ' 'ಉತ್ತಮ' ಇತ್ಯಾದಿ ಪದಗಳು ನುಸುಳಿಬಂದವು.

''ದೊಡ್ಡಯ್ಯನವರು ಓರ್ವ ದಕ್ಷ ಅಧಿಕಾರಿ. ಕಟ್ಟುನಿಟ್ಟಿನ ಶಿಸ್ತಿನ ವ್ಯಕ್ತಿತ್ವದವರು. ಅವರು ಎಷ್ಟು ಶಿಸ್ತಿನವರೆನ್ನುವುದು ಅವರ ಉಡುಗೆ ತೊಡುಗೆಗಳನ್ನು ಗಮನಿಸಿದರೇ ಗೊತ್ತಾಗುತ್ತದೆ. ಯಾವಾಗಲೂ ಬಹಳ ನೀಟು. ಎಷ್ಟೇ ಸೆಖೆ ಇದ್ದರೂ ಶೂಸು ಟೈ ಬಿಟ್ಟದ್ದಿಲ್ಲ. ಅವರ ಛೇಂಬರಿನಲ್ಲೂ ಅಷ್ಟೇ ಒಂದೇ ಒಂದು ದಿನ ಫೈಲುಗಳ ರಾಶಿ ಇರಲು ಬಿಟ್ಟವರಲ್ಲ. ಟೇಬಲ್ ಮೇಲಿನ ಹೂದಾನಿಯಲ್ಲಿ ಯಾವತ್ತೂ ಗುಲಾಬಿ ತಪ್ಪಿದ್ದಿಲ್ಲ. ಶಿಸ್ತು ಬದ್ಧತೆಗೆ ಸಮಯಪಾಲನೆಗೆ ದೊಡ್ಡಯ್ಯನವರು ಇನ್ನೊಂದು ಹೆಸರು ಎಂದರೆ ತಪ್ಪಾಗಲಿಕ್ಕಿಲ್ಲ. ಇಂತಹ ಉತ್ತಮ ಅಧಿಕಾರಿಯೊಬ್ಬರು ಇವತ್ತು ನಿವೃತ್ತರಾಗುತ್ತಿದ್ದಾರೆ. ಅವರ ಮುಂದಿನ ಬದುಕು... ಇತ್ಯಾದಿ... ಇತ್ಯಾದಿ....'' ಮುಂದೆ ಬಾಯಿಗೆ ಬಂದಂತೆ ಹೊಗಳಿ ಭಾಷಣ ಮುಗಿಸಿ ಬೆವರೊರೆಸಿಕೊಂಡು ಕೂತರು. ಅವರಿಗೆ ಅದೇಕೋ ನಾಚಿಕೆಯೆನ್ನಿಸತೊಡಗಿತು.

ಕೇಳುತ್ತ ಕೂತಿದ್ದ ಆಫೀಸಿನವರಿಗೆಲ್ಲ ಮೊದಮೊದಲು ಅವರ ಫಜೀತಿ ಪರದಾಟ ತಮಾಷೆ ಎನಿಸತೊಡಗಿದ್ದುದು, ಮಾತು ಹೊಗಳಿಕೆಗೆ ತಿರುಗಿದಾಗ ಜಿಗುಪ್ಸೆಯಾಗಿ ರೂಪಾಂತರ ಗೊಂಡಿತು. ಎಲ್ಲರಿಗಿಂತ ಹೆಚ್ಚು ಮೈ ಉರಿದಿದ್ದು ಶರೀಫ್‌ಗೆ. ಡಿಸೋಜರ ಹೊಗಳಿಕೆಗಿಂತ ಹೆಚ್ಚಾಗಿ, ಅವರ ಮಾತು ಕೇಳುತ್ತ ದೊಡ್ಡಯ್ಯ ಮುಖ ಮೊರದಗಲ ಮಾಡಿಕೊಂಡು ಹೌದು ಹೌದು ಎನ್ನುವಂತೆ ತಲೆ ಆಡಿಸುತ್ತ ಕೂತಿದ್ದು ನೋಡಿ ಇವನಿಗೆ ಚೆನ್ನಾಗಿ ನೀರಿಳಿಸಬೇಕು ಎಂದುಕೊಂಡ. ಸ್ವಲ್ಪವೂ ನಾಚಿಕೆ ಮುಜುಗರ ತೋರ್ಪಡಿಸದೇ, ಆತ್ಮಸಾಕ್ಷಿಯೆನ್ನುವುದು ಸತ್ತು ಕೊಳೆತೇ ಹೋಗಿದೆಯೇನೋ ಎನ್ನುವಂತೆ ಹೊಗಳಿಕೆಯನ್ನು ಎಂಜಾಯ್ ಮಾಡ್ತಾ ಇದಾನಲ್ಲ. ಮಾಡ್ತೇನಿ ಇವನಿಗೆ ಎಂದುಕೊಂಡು ಮೈಕ್ ಮುಂದೆ ಹೋಗಿ ನಿಂತ.

ಶರೀಫ್‌ಗೂ ದೊಡ್ಡಯ್ಯನಿಗೂ ಕಳೆದ ವರ್ಷವಷ್ಟೇ ನಡೆದಿದ್ದ ಜಟಾಪಟಿ ಎಲ್ಲರಿಗೂ ನೆನಪಾಯ್ತು. ಅವನಿಗೆ ಹೊಡೆದೇಬಿಡ್ತೇನಿ, ಆಗಿದ್ದಾಗಲಿ ಎಂದು ವೀರಾಗ್ರಣಿಯಂತೆ ಹೊರಟಿದ್ದ ಶರೀಫ್‌ನ ಯುದ್ಧೋನ್ಮಾದವನ್ನು ಅಡಗಿಸಲು ಡಿಸೋಜಾ ಭರ್ತಿ ಎರಡು ಗಂಟೆಗಳ ಕಾಲ ಹೆಣಗಾಡಿದ್ದರು. ಇವನು ಏನೇನೋ ಮಾತಾಡಿಬಿಡುತ್ತಾನೋ ಎಂದು ಡಿಸೋಜ ಚಿಂತಿತರಾದರೆ ಕೆಲವು ಜನ, ಶರೀಫ್‌ನ ಮಾತಿನ ಮಜಾ ತೆಗೆದುಕೊಳ್ಳಲು ಸಿದ್ಧರಾದರು. ಆದರೆ ಶರೀಫ್‌ನ ಐಡಿಯಾ ಬೇರೆಯೇ ಇತ್ತು. ಹೊಟ್ಟೆತುಂಬಾ ಬೆಣ್ಣೆ ಕದ್ದುತಿಂದು ತೃಪ್ತಿಯಿಂದ ಮೂತಿ ನೆಕ್ಕಿಕೊಳ್ಳುತ್ತ ಕಳ್ಳಮುಖ ಮಾಡಿಕೊಂಡು ಬರುವ ಬೆಕ್ಕಿನಂತೆ ಖುಶಿಯನ್ನು ಹತ್ತಿಕ್ಕಿ ಮಾತಾಡತೊಡಗಿದ (ದೊಡ್ಡಯ್ಯ... ಕಳ್ಳ ನನ್ನ ಮಗನೇ... ಸಿಕ್ಕಿಬಿದ್ದೆಯಾ ಇವತ್ತು... ತಗೋ... ರುಚಿ ನೋಡು).

''ಶ್ರೀಯುತ ದೊಡ್ಡಯ್ಯನವರು ನಿಜವಾಗಿಯೂ ದೊಡ್ಡವರು. ದೊಡ್ಡ ಮನಸ್ಸು ಅವರದು. ಅವರಂತಹ ಸಂಭಾವಿತರನ್ನು ಜಂಟಲ್‌ಮನ್‌ನನ್ನು ನಾನು ಇನ್ನೆಲ್ಲೂ ಕಂಡಿಲ್ಲ. ಒಂದು ದಿನ ಒಬ್ಬರಿಗೆ ನೋವು ಮಾಡಿದವರಲ್ಲ. ಸರ್ವೀಸಿನಲ್ಲಿ ಇದ್ದಷ್ಟು ದಿನವೂ ಎಲ್ಲರಿಗೂ ತಮ್ಮಿಂದ ಸಾಧ್ಯವಾದಷ್ಟು ಉಪಕಾರ ಮಾಡಿ ಜನಾನುರಾಗಿಯಾಗಿದ್ದವರು. ಅತ್ಯಂತ ಪ್ರಾಮಾಣಿಕರು, ಶುದ್ಧ ಹಸ್ತದವರು, ಸೇವೆಯೇ ಬದುಕೆಂದು ದುಡಿದು ನೂರಾರು ಕುಟುಂಬಗಳ ಬದುಕಲ್ಲಿ ದೀಪ ಹಚ್ಚಿದ ಸಮಾಜೋದ್ಧಾರಕರು. ಇಂಥಾ ಮಹಾತ್ಮಾಗಾಂಧಿಯಂತ ವ್ಯಕ್ತಿ ಜನಪ್ರಿಯ ಅಧಿಕಾರಿ ನಿಷ್ಠಾವಂತ ಸಾರ್ವಜನಿಕ ಸೇವಕರೊಬ್ಬರು ಇದ್ದಾರೆಂದರೆ ಯಾರೂ ನಂಬಲಿಕ್ಕಿಲ್ಲ ಆದರೆ ನಂಬಲೇಬೇಕು. ಇಂಥ ಅಧಿಕಾರಿಯ ಕೈಕೆಳಗೆ ಕೆಲಸ ಮಾಡುವ ಸದವಕಾಶ ಪಡೆದ ನಾವೇ ಭಾಗ್ಯವಂತರು ಪುಣ್ಯವಂತರು ಧನ್ಯರು. ಅವರು ನಿವೃತ್ತರಾದರೂ ನಮಗೆಲ್ಲ ಒಂದು ಒಳ್ಳೆಯ ಮೇಲ್ಪಂಕ್ತಿ ಹಾಕಿಕೊಟ್ಟಿದ್ದಾರೆ. ನಾವುಗಳು ಅವರು ಹಾಕಿಕೊಟ್ಟ ಮಾರ್ಗದಲ್ಲಿ ಮುಂದುವರಿದು ದೇಶವು ಉದ್ಧಾರವಾಗಲು ಶ್ರಮಿಸೋಣ...''

ಕೇಳುತ್ತಿದ್ದವರೆಲ್ಲ ಬೆಪ್ಪುಗಟ್ಟಿ ಥಂಡಾ ಹೊಡೆದು ಕೂತಿದ್ದರು. ಈ ಶರೀಫ ಹುಚ್ಚ ಇದೇನು ಇಂತಹ ಅಪ್ಪಟ ಅಪರಂಜಿ ಸುಳ್ಳುಗಳ ಸರಮಾಲೆ ಕಟ್ಟುತ್ತಿದ್ದಾನಲ್ಲ!

ಅವರೆಲ್ಲ ಅದೆಷ್ಟು ಚೋದ್ಯದಿಂದ ಅವನ ಮಾತುಗಳನ್ನು ನೆಟ್ಟಕಣ್ಣು ಬಿಟ್ಟಬಾಯಿಯಾಗಿ ಕೇಳಿದರೆಂದರೆ ಅವನ ಮಾತು ಮುಗಿದ ನಂತರ ಚಪ್ಪಾಳೆ ಹೊಡೆಯುವುದನ್ನೇ ಮರೆತು ನಿಶ್ಶಬ್ದವಾಗಿ ಕುಳಿತರು.

ಆತನ ಹೊಗಳು ಭಾಷಣದ ಹಿಂದಿನ ಉದ್ದೇಶವನ್ನು ಎಲ್ಲರಿಗಿಂತ ಮೊದಲು ನಿಖರವಾಗಿ ಗ್ರಹಿಸಿದ್ದು ಕಾತ್ಯಾಯನಿ. ಸರ್ರನೆ ಎದ್ದುಹೋಗಿ ಮೈಕ್ ಹಿಡಿದು ನಿಂತಳು.

''ಆತ್ಮೀಯರೇ... ದೊಡ್ಡಯ್ಯನವರು ಒಬ್ಬ ಆದರ್ಶ ವ್ಯಕ್ತಿ. ಪರನಾರೀ ಸಹೋದರ. ಹೆಂಗಸರೆಂದರೆ ಎಲ್ಲಿಲ್ಲದ ಗೌರವ. ಅವರು ಸಾರ್ವಜನಿಕರೇ ಇರಲಿ, ಸಹೋದ್ಯೋಗಿಗಳೇ ಇರಲಿ, ಒಡಹುಟ್ಟಿದ ಅಕ್ಕ ತಂಗಿಯರಂತೆ ಕಂಡು ತಮ್ಮ ಕೈಲಾದ ಸಹಾಯ ಸಹಕಾರ ನೀಡಿದವರು. ಈ ಭೂಮಿಯ ಮೇಲೆ ಇವರಂಥ ಸಹೃದಯರು ಇರುವುದರಿಂದಲೇ ಇವತ್ತು ಇಷ್ಟಾದರೂ ಮಳೆಬೆಳೆ ಆಗುತ್ತಿದೆ... ಮುಂದೆ ಹೇಗೋ ಗೊತ್ತಿಲ್ಲ.. ಅಭಿನವ ಶ್ರೀ ರಾಮಚಂದ್ರನಂಥ ದೊಡ್ಡಯ್ಯನವರು .....''

ಮೀಸೆ ತೀಡಿಕೊಳ್ಳುತ್ತ ಕೂತಿದ್ದ ಶರೀಫ್ ಶಹಬ್ಬಾಷ್ ಕಾತ್ಯಾಯನೀ ಎಂದುಕೊಂಡ. ಮನೆಯ ಜವಾಬ್ದಾರಿಯನ್ನೆಲ್ಲ ತಲೆಯಮೇಲೆ ಹಾಕಿಕೊಂಡು ಮದುವೆಯಾಗದೇ ಉಳಿದಿದ್ದ ಕಾತ್ಯಾಯನಿಗೆ ಸಾಹೇಬರು ವಿಶೇಷ ಗಮನ ಕೊಡುತ್ತಿದ್ದಿದ್ದು, ಆಕೆ ಅದು ಗೊತ್ತಿದ್ದೂ ಗೊತ್ತಿಲ್ಲದಂತೆ ನಟಿಸುತ್ತಾ ದೂರದೂರವೇ ಉಳಿದಿದ್ದು, ನಿರಾಶರಾದ ಅಯ್ಯನವರು ಕೊನೆಗೆ ಆಕೆಯನ್ನು ದೂರದ ಆಫೀಸಿಗೆ ತಿಂಗಳುಗಟ್ಟಲೆ ಡೆಪ್ಯುಟೇಶನ್ ಹಾಕಿ ಗೋಳುಹೊಯ್ದುಕೊಂಡಿದ್ದು. ಯಾರೂ ಬಾಯಿಬಿಟ್ಟು ಹೇಳದಿದ್ದರೂ ಎಲ್ಲರಿಗೂ ಅರ್ಥವಾಗಿತ್ತು.

ಕಾತ್ಯಾಯಿನಿ ಮಾತು ಮುಗಿಸುತ್ತಿದ್ದಂತೆ ದೊಡ್ಡಯ್ಯನವರಿಗೆ 'ಶುಭ' ಕೋರುವವರ ಸರತಿಯ ಸಾಲೇ ಸಿದ್ಧವಾಯ್ತು.

ತನ್ನ ಸರ್ವೀಸಿನುದ್ದಕ್ಕೂ ಪಾಪ, ಸಾಹೇಬರು ತನ್ನನ್ನು ತಾನು ದೈವಾಂಶ ಸಂಭೂತನೆಂದು ತಪ್ಪು ತಿಳಿದುಕೊಂಡು ಉಳಿದವರನ್ನು, ಕೈಕೆಳಗಿನ ಹುಲುಮಾನವರನ್ನು ಎಲ್ಲಿ ಇಡಬೇಕೋ ಅಲ್ಲಿ ಇಟ್ಟಿದ್ದರು ನಿಜ. ಆದರೂ ಅವರಿಗೆ ತಾನು ಅಷ್ಟೊಂದು ದೈವಾಂಶ ಭರಿತನೇನೂ ಅಲ್ಲವೆಂದೂ ಊಟ ನಿದ್ರೆ ಮಲಮೂತ್ರ ವಿಸರ್ಜನೆ ಮಾಡುವ ಸಿಡುಕು ಕೆಡುಕು ತುಂಬಿದ ನರಮಾನವರ ಜಾತಿಗೆ ಸ್ವಲ್ಪ ಸೇರಿರಲೂಬಹುದೆಂದು ಗುಮಾನಿ ಇದ್ದಿತು. ಹಾಗಾಗಿ ವಿದಾಯಕೂಟದಲ್ಲಿ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಒಂದೆರಡು ಕೊಂಕಿನ ಮಾತುಗಳು ಬರಬಹುದೆಂದು ನಿರೀಕ್ಷಿಸಿ ಅದಕ್ಕೆ ಹೇಗೆ ಉತ್ತರಿಸಬಹುದೆಂದು ಯೋಚಿಸಿಕೊಂಡು ಬಂದಿದ್ದರು. ಆದರೆ ಯಾಕೋ ಇಲ್ಲಿ ಎಲ್ಲಾ ಉಲ್ಟಾ ಹೊಡೆಯುತ್ತಿದೆ.

ಇವರಿಗೆ ನನ್ನನ್ನು ಹೀಗೆ ಬಾಯಿಗೆ ಬಂದಹಾಗೆ ಹೊಗಳಲು ಅಧಿಕಾರ ಕೊಟ್ಟವರು ಯಾರು ? ಇಲ್ಲಿ ಕೆಲಸ ಮಾಡುತ್ತಿದ್ದಾಗ ಒಂದಿಲ್ಲಾ ಒಂದು ತರಲೆ ಮಾಡಿದವರು, ಕಿರಿಕಿರಿ ಕೊಟ್ಟವರು, ಅವಿಧೇಯರು, ಮೂಗರ್ಜಿ ಬರೆದವರು ಎಲ್ಲರೂ ಸೇರಿ ಹೀಗೆ ವಾಚಾಮಗೋಚರವಾಗಿ ಹೊಗಳುತ್ತಿದ್ದಾರೆ. ಹೀಗೆ ಬಾಯಿಗೆ ಬಂದಹಾಗೆ ಹೊಗಳುವ ಬದಲು ಎದ್ದು ನಿಲ್ಲಿಸಿ ಮೆಟ್ಟಲ್ಲಿ ಹೊಡೆದಿದ್ದರೆ ಚೆನ್ನಾಗಿತ್ತು ಎನಿಸಿ ಭಯಂಕರ ಕೋಪ ಬಂದು ಎದೆ ಚುಳುಕ್ಕೆಂದಿತು. ಸರ್ಕಾರೀ ಸೇವಾ ನಿಯಮಾವಳಿಯೆನ್ನುವ ಭಗವಾನುವಾಚದ ಯಾವ ನಿಯಮದ ಪ್ರಕಾರ ಇವರಿಗೆಲ್ಲ ಬೆಂಡೆತ್ತಬಹುದು ಎಂದು ಯೋಚಿಸಿದರು. ಹಿಂದೆಯೇ ಯಾವ ನಿಯಮವಾದರೆ ಏನು ಬಂತು ಈ ಅಯೋಗ್ಯರಿಗೆ ಬುದ್ಧಿ ಕಲಿಸುವ ಅಧಿಕಾರ ಕೈಯಿಂದ ಜಾರಿ ಹೋಗಿದೆಯಲ್ಲ ಎಂದು ಖೇದವಾಯ್ತು. ಸರ್ವೀಸಿನಿಂದ ಹೊರಟು ಹೋಗುತ್ತಿರುವ ಅಸಹಾಯಕ ವ್ಯಕ್ತಿಗೆ ಹೀಗೆ ಹೊಗಳಿ ಅವಮಾನ ಮಾಡಿದರಲ್ಲ ಇವರಿಗೆ ಮಾಡ್ತೇನಿ ಈಗ. ನನ್ನದೇ ಕೊನೆಯ ಭಾಷಣ ಹೇಗೂ ಎಂದುಕೊಂಡು ಎದ್ದು ನಿಂತರು.

ಕೆಮ್ಮಿ ಗಂಟಲು ಸರಿಮಾಡಿಕೊಳ್ಳುತ್ತಿದ್ದರೆ ಕೊನೆಯ ಸಾಲಿನಲ್ಲಿ ಕೂತಿದ್ದ ವಿಜಯಲಕ್ಷ್ಮಿಯ ಮುಖ ಕಂಡಿತು. ''ಸಾರ್ ನಂಗೆ ಆರೋಗ್ಯ ಸರಿ ಇಲ್ಲ. ಹೆವಿವರ್ಕ್ ಮಾಡಬಾರದು ಅಂತ ಡಾಕ್ಟರು ಹೇಳಿದ್ದಾರೆ. ದಯವಿಟ್ಟು ಫೀಲ್ಡ್‌ವರ್ಕ್‌ಗೆ ಹಾಕಬೇಡಿ'' ಎಂದು ಎರಡು ವರ್ಷದ ಕೆಳಗೆ ಆಕೆ ಅಂಗಲಾಚಿ ಬೇಡಿಕೊಂಡಿದ್ದಳು. ಅದಕ್ಕೆ ತಾನು ''ಅದೆಲ್ಲಾ ಆಗೋಲ್ಲ, ಈಗ ಅರ್ಜೆಂಟಾಗಿ ಸರ್ವೇ ವರ್ಕ್ಸ್ ಮುಗೀಲೇಬೇಕು. ಈ ಟೈಮಿಗೇ ಪ್ರೆಗ್ನೆಂಟ್ ಆಗಿ ಅಂತ ನಾನೇನು ಹೇಳಿದ್ದೆನಾ ? ಯು ಶುಡ್ ಪ್ಲಾನ್ ಸಚ್ ಥಿಂಗ್ಸ್. ಎನಿವೇ... ಪ್ರೆಗ್ನೆನ್ಸಿ ಈಸ್ ನಾಟ್ ಡಿಸೀಸ್'' ಎಂದು ಗದರಿದ್ದು ನೆನಪಾಯ್ತು. ಆಕೆಯ ಲೆಕ್ಕದಲ್ಲಿ ಯಾವ ರಜವೂ ಇರಲಿಲ್ಲ. ಅಷ್ಟೊಂದು ವಿಶ್ರಾಂತಿ ಬೇಕೇಬೇಕು ಅಂತಾದ್ರೆ ಸಂಬಳವಿಲ್ಲದ ರಜಾ ಹಾಕಿ ಮನೆಯಲ್ಲಿ ಮಲಕ್ಕೋಬೇಕಾಗಿತ್ತು. ಕೊನೆಗೆ ಆಕೆ ತನಗೆ ಅಬಾರ್ಶನ್ ಆಗಿದ್ದಕ್ಕೆ ನಾನೇ ಜವಾಬ್ದಾರನೇನೋ ಎನ್ನುವಂತೆ ಎಲ್ಲರ ಹತ್ತಿರ ಗೋಳಾಡಿದ್ದಳು. ಅಯ್ಯೋ ಮಕ್ಕಳೇನು, ನಮ್ಮ ದೇಶದಲ್ಲಿ ಬೇಕಾದಷ್ಟು ಹುಟ್ತಾವೆ ಎಂದುಕೊಂಡರು. ಆದರೂ ಯಾಕೋ ಒಂದು ಕ್ಷಣ ಆಕೆಯ ಸತ್ತ ಭ್ರೂಣದ ಕಾಲ್ಪನಿಕ ಚಿತ್ರ ಕಣ್ಮುಂದೆ ಮೂಡಿ ಸುತ್ತಮುತ್ತ ಎಲ್ಲವೂ ಕೆಂಪುಛಾಯೆಯಲ್ಲಿ ಕಂಡಿತು. ಬಾಯಿ ಒಣಗಿ ಮುಖ ಬೆವರತೊಡಗಿತು.

ಹೇಗೋ ಸಾವರಿಸಿಕೊಂಡು 'ಮಾನ್ಯ ಅಧ್ಯಕ್ಷರೇ, ನನ್ನ ಆತ್ಮೀಯ ಸಹೋದ್ಯೋಗಿಗಳೇ' ಎಂದು ಶುರುಮಾಡಿದರು. ದನಿ ಗೊಗ್ಗರಾಗಿ ಕೇಳಿಸಿತು. ಮುಂದೆ ಇದ್ದ ಮೈಕು ಫಳಫಳ ಹೊಳೆದು ಹಲ್ಲು ಕಿರಿದು ನಕ್ಕಿತು. ಟೇಬಲ್ ಮೇಲೆ ಬುಟ್ಟಿಯಲ್ಲಿ ಭರ್ತಿ ಇದ್ದ ಹಣ್ಣುಗಳೊಳಗೆ ಅಡಗಿ ಕೂತಿದ್ದ ಹುಳುಗಳು ವಿಷಸರ್ಪಗಳಾಗಿ ಬೆಳೆದು ಹೆಡೆ ಎತ್ತಿ ಹೊರಬರುತ್ತವೆನ್ನಿಸಿ ಆ ಕಲ್ಪನೆಗೆ ಮೈಕೈಯೆಲ್ಲಾ ತಣ್ಣತಣ್ಣಗಾಯ್ತು. 'ತುಂಬಾ ಥ್ಯಾಂಕ್ಸ್... ಎ.. ಎಲ್ಲರಿಗೂ ಧನ್ಯವಾದ' ಎಂದು ಪಿಸುಗುಟ್ಟಿ ಕುರ್ಚಿಯಲ್ಲಿ ಕುಸಿದು ಕೂತು ಕರ್ಚೀಫಿಗಾಗಿ ಜೇಬು ತಡಕತೊಡಗಿದರು.

**ಡಾ॥ ಜಾನಕಿ ಸುಂದರೇಶ**
ಸರಕಾರಿ ವಸತಿ ಗೃಹ-೫, ಪೆರ್ಲಿಯ, ಬಿ. ಸಿ. ರೋಡು - ೫೭೪೨೧೯ ದ. ಕ. ಜಿಲ್ಲೆ

# ವಿಶ್ವ ಸಾಮಾಜಿಕ ವೇದಿಕೆ - ೨೦೦೪ರ ಹಲವು ಆಯಾಮಗಳು

**ಕೆ. ಎಸ್. ಪಾರ್ಥಸಾರಥಿ**

**ಮುಂ**ಬಯಿಯಲ್ಲಿ ನಡೆದ **ವಿಶ್ವ ಸಾಮಾಜಿಕ ವೇದಿಕೆ ೨೦೦೪** ಹಾಗೂ **ಮುಂಬಯಿ-ಪ್ರತಿರೋಧ- ೨೦೦೪** ಸಮಾವೇಶಗಳ ಬಗ್ಗೆ ಮಾಧ್ಯಮಗಳು ಇನ್ನೂ ವಿಶ್ಲೇಷಿಸುತ್ತಲೇ ಇರುವುದೇ ಆ ಸಮಾವೇಶಗಳ ಅರ್ಥಪೂರ್ಣತೆಯ ಸಂಕೇತ. ಎರಡೂ ಸಮಾವೇಶಗಳ ಪ್ರತ್ಯಕ್ಷದರ್ಶಿಯಾಗಿ, ಇವುಗಳ ಪೂರ್ವಭಾವಿ ಮತ್ತು ತದನಂತರದ ಪ್ರಕಟಿತ ಪ್ರಚಾರ ಸಾಹಿತ್ಯಗಳನ್ನು ಒಂದಿಷ್ಟು ಆಸಕ್ತಿಯಿಂದಲೇ ನಾನು ಗಮನಿಸಿದ್ದೇನೆ. ಈ ಸಮಾವೇಶಗಳು ನಡೆದ ವೈಖರಿ, ಬಂದಿದ್ದ ಜನ ಇತ್ಯಾದಿ ವರದಿಗಳು ಬೇಕಾದಷ್ಟು ಬಂದಿವೆಯಾಗಿ ಅವುಗಳ ಪುನರಾವರ್ತನೆ ಇಲ್ಲಿ ಅನಗತ್ಯ. ಗಮನಿಸಬೇಕಾದ ಒಂದು ವಿಷಯವೆಂದರೆ ಈ ಸಮಾವೇಶಗಳ ಬಗ್ಗೆ ನಿಷೇಧಾತ್ಮಕವಾಗಿ ಮೂಗುಮುರಿಯುವಂತೆ ಬರೆದ, ವರದಿ ಮಾಡಿದ ಮಾಧ್ಯಮಗಳೇ ಹೆಚ್ಚು. ಒಂದಿಬ್ಬರು ಅಂಕಣಕಾರರು ಮತ್ತು ಕೆಲವೇ ಪತ್ರಿಕೆಗಳನ್ನು ಬಿಟ್ಟರೆ ಮಿಕ್ಕವರು ಒಂದು ರೀತಿಯ ಸಹಾನುಭೂತಿಯಿಂದ ಬರೆದವರೆ ವಿನಃ ಸಂಪೂರ್ಣ ಸಮರ್ಥಕರಾಗಿ ಅಲ್ಲ. ಈ ಸಮಾವೇಶಗಳ ಬಗ್ಗೆ ಇದೇಕೆ ಈ ಉಪೇಕ್ಷೆ ಅಥವಾ ಮಾತ್ಸರ್ಯ, ಅದರಲ್ಲಿ ಮೆಚ್ಚಬಹುದಾದ ಅಂಶವೇನೂ ಇರಲಿಲ್ಲವೇ ಎಂಬ ಚಿಂತನೆ ಪ್ರಸ್ತುತವಾಗುತ್ತದೆ. ಈ ವ್ಯಾಖ್ಯೆ ಮುಖ್ಯವಾಗಿ ಮೂರು ಸ್ತರಗಳಲ್ಲಿ ಆಗಬಹುದು : ಸರ್ಕಾರೇತರ ಸಂಸ್ಥೆಗಳ ಸ್ವರೂಪ ಮತ್ತು ಪಾತ್ರದ ಕುರಿತು ಬಂದ ಟೀಕೆಗಳು; 'ಮತ್ತೊಂದು ವಿಶ್ವ ಸಾಧ್ಯ' ಎಂಬ ಘೋಷಣೆಯ ಬಗ್ಗೆ ಹಾಗೂ ಇಂಥ ಸಮಾವೇಶಗಳ ಪ್ರಸ್ತುತತೆಯನ್ನು ಕುರಿತು.

ಎಲ್ಲಕ್ಕಿಂತ ಮೊದಲು ಗಮನಿಸಬೇಕಾದದ್ದು ಈ ವೇದಿಕೆಗಳೇ ಚಳುವಳಿಗಳಲ್ಲ. ಅವನ್ನು ಒಂದೇ ವೇದಿಕೆ ಎಂದು ಹೇಳುವಂತೆಯೂ ಇಲ್ಲ. ಇಲ್ಲಿ ಹಲವಾರು ವಿಭಿನ್ನ ಸಮಸ್ಯೆಗಳನ್ನು ಚರ್ಚಿಸುವ ನೂರಾರು ವೇದಿಕೆಗಳು ಪ್ರತಿದಿನವೂ ತಮ್ಮದೇ ಪ್ರತ್ಯೇಕ ಸಮಾವೇಶಗಳನ್ನು ನಡೆಸಿಕೊಂಡವು. ಕಾಶ್ಮೀರದ ಪ್ರತ್ಯೇಕತಾವಾದಿಗಳು ಪಾಕಿಸ್ತಾನದವರೊಡನೆ ಸಂಪರ್ಕಿಸಲು, ಟ್ರಾಟ್ಸ್ಕಿ ಧೋರಣೆಯವರೆಂದು ಹೇಳಿಕೊಳ್ಳುವ ಅಮೆರಿಕದ ಸೋಷಿಯಲಿಸ್ಟ್ ಪಾರ್ಟಿ ಏರ್ಪಡಿಸಿದ್ದ ವೇದಿಕೆ ಯಿಂದ ಹಿಡಿದು, ನಾವೂ ಮಾನವರೇ ಎನ್ನುವ ಸಲಿಂಗ ರತಿಯರು, ಹಿಜಿಡಾಗಳ ವೇದಿಕೆಗಳೂ ಸೇರಿದ್ದವು. ಭಾರತ ಸೇವಾದಳದವರೂ ಇದ್ದರು. ಮುಸ್ಲಿಂ ಮಹಿಳೆಯರ ಲೈಂಗಿಕ ಸಮಸ್ಯೆ – ಮಹಿಳೆಯರಿಗೆ ಮಾತ್ರ ಎಂಬ ಚರ್ಚೆಯೂ ಇತ್ತು. ಮಾಧ್ಯಮಗಳ ಸ್ವಾತಂತ್ರ್ಯ, ಆರ್ಥಿಕ ಸುಧಾರಣೆ, ಸಾಮ್ರಾಜ್ಯಶಾಹಿ ಪ್ರವೃತ್ತಿಗಳ ಸಂಬಂಧ, ಬೀದಿ ಮಕ್ಕಳ ಸಮಸ್ಯೆ, ರೈತರು, ಕಾರ್ಮಿಕರು, ಅಣ್ವಸ್ತ್ರ, ಜಾಗತೀಕರಣ, ಇರಾಕ್ ಯುದ್ಧ ಹೀಗೆ ನಡೆದ ೧೨೦೦ಕ್ಕೂ ಮಿಕ್ಕ ಚರ್ಚೆಗಳ ನಡುವೆ ಏಕಸೂತ್ರವಿತ್ತೇ? ಕಣ್ಣಿಗೆ ಕಂಡಂತೆ ಮೊದಲ ದಿನದ ಉದ್ಘಾಟನೆಯಲ್ಲಿ ಹಾಗೂ ಕೊನೆಯ ದಿನದ ಸಮಾರೋಪದ ಮೆರವಣಿಗೆ ಮತ್ತು ಸಾರ್ವಜನಿಕ ಸಭೆಯಲ್ಲಿ ಈ ಎಲ್ಲರೂ ಕಲೆತಿದ್ದರು. ಇಲ್ಲಿ ಯುದ್ಧ ವಿರೋಧಿ ನೀತಿ, ಅಣ್ವಸ್ತ್ರ ವಿರೋಧಿ ನಿಲುವು, ಜಾಗತೀಕರಣದ ವಿರೋಧ, ಮಾನವ ಹಕ್ಕುಗಳ ಸ್ಪಷ್ಟೀಕರಣ, ಮಾನವ ಸಮುದಾಯದ ಜಾತ್ಯತೀತ, ವರ್ಣಾತೀತ, ರಾಷ್ಟ್ರಾತೀತ ಮುಂತಾದವುಗಳಿಗೆ ಮೀರಿದ ಏಕತೆಯ ಪ್ರತಿಪಾದನೆ – ಈ ಹಂತದಲ್ಲಿ ನೆರೆದಿದ್ದವರ ಒಕ್ಕೊರಲಿನ ಧ್ವನಿ ಸ್ಪಷ್ಟವಿತ್ತು. ಇಲ್ಲಿಯ ಪ್ರತಿಯೊಂದು ವೇದಿಕೆಯಲ್ಲೂ ಪ್ರಸ್ತಾಪಿಸಿದ ವಿಷಯಗಳು ಎಲ್ಲ ಮಾನವರಿಗೂ ಅನ್ವಯವಾದುವು ಎಂಬ ಒತ್ತಾಯವಿತ್ತು. ಆದ್ದರಿಂದ ಅವುಗಳ ನಡುವೆ ಹೋರಾಟಕ್ಕೆ ಇಳಿದಾಗ ಭಿನ್ನಾಭಿಪ್ರಾಯ, ಒಡಕು ಮೂಡುವುದು ಸಲ್ಲದು ಎಂಬ ತಿಳಿವಳಿಕೆ ಮುಖ್ಯವಾಗಿತ್ತು. ಈ ಅರ್ಥದಲ್ಲಿ ಪ್ರಗತಿಪರ ಚಳುವಳಿಗಳನ್ನುಹೋರಾಟಗಳನ್ನುಯಾರೇ ಪ್ರಾರಂಭಿಸಲಿ, ಮಿಕ್ಕವರು ಅವರ ಬೆಂಬಲಕ್ಕೆ, ಸಹಭಾಗಿತ್ವಕ್ಕೆ, ಮುನ್ನುಗ್ಗಬೇಕು ಎಂಬ ಆಕಾಂಕ್ಷೆ ಇರಬೇಕಾದ್ದು ಸಹಜ. ಹೌದು, ವಿಶ್ವ ಸಾಮಾಜಿಕ ವೇದಿಕೆ ಒಟ್ಟಾರೆ ಭೂಮವಾಗಿ ಇನ್ನೂ ಚಳುವಳಿಯಾಗಿ ತಾನೇ ವಿಕಸಿತವಾಗಿಲ್ಲ. ಆದರೆ ಮುಂದೊಮ್ಮೆ ಸನಿಹದಲ್ಲೇ ಆ ಸ್ವರೂಪವನ್ನು ಪಡೆದೀತು ಎಂಬ ಆಶಯ ಅಲ್ಲಿ ಕಂಡುಬಂತು. ಎಲ್ಲೆಡೆ ಸಮಾಜದಲ್ಲಿ ಪ್ರತಿದಿನವೂ ನಡೆಯುತ್ತಿರುವ ಹಲವಾರು ಮಾನವಪರ ಹೋರಾಟಗಳು ಕೆಲವೊಮ್ಮೆ ಪರಸ್ಪರ ವಿರೋಧವಾಗಿರುವಂತೆ ಮೇಲ್ನೋಟಕ್ಕೆ ಕಂಡು ಬಂದರೂ ಅವೆಲ್ಲಾ ಒಂದು ಬೃಹತ್ ಪ್ರತಿರೋಧದ ಹಲವು ಝಲಕುಗಳೇ ವಿನಃ, ಪರಸ್ಪರ ವೈರುದ್ಧ್ಯಮಯವಲ್ಲ ಎಂದು ಆ ಅಪಾರ ಜನಸ್ತೋಮದ ಮಧ್ಯೆ ಭುಜಕ್ಕೆ ಭುಜ ತಗುಲಿಸಿ ಓಡಾಡಿದಾಗ ಅನುಭವಕ್ಕೆ ಬಂದಿದ್ದು ವಿಶ್ವ ಸಾಮಾಜಿಕ ವೇದಿಕೆಯ ಒಂದು ವೈಶಿಷ್ಟ್ಯ.

ಇಲ್ಲಿ ವಿಶ್ವದಾದ್ಯಂತ ಬಂದಿದ್ದ ಭಾಗವಹಿಸಿದ್ದ ಮುನ್ನೂರಕ್ಕೂ ಹೆಚ್ಚು ಸಂಘಟನೆಗಳು ಸರ್ಕಾರೇತರ ಸಂಸ್ಥೆಗಳು ಎಂಬ ಹಣೆಪಟ್ಟಿಯವು. ಈ ಹಣೆಪಟ್ಟಿಯನ್ನು ಇವಕ್ಕೆ ಅಂಟಿಸುವ ಮುಂಚೆ ಬಹುತೇಕ ಇವುಗಳನ್ನು ಸ್ವಯಂಸೇವಕ ಸಂಘಗಳೆಂದೂ ಕರೆಯುತ್ತಿದ್ದೆವು. ಈ ಸರ್ಕಾರೇತರ ಸಂಸ್ಥೆಗಳಿಗೆ ೧೯೭೦ರ ದಶಕದಿಂದ ವಿಶ್ವಸಂಸ್ಥೆಯೂ ಸೇರಿದಂತೆ ಪಶ್ಚಿಮದ ಎಲ್ಲಾ ಸರ್ಕಾರಗಳೂ ಹೆಚ್ಚು ಪ್ರಾಧಾನ್ಯತೆ ಕೊಡಲಾರಂಭಿಸಿದವು. ಸಾರ್ವಜನಿಕ ಸೇವಾಕ್ಷೇತ್ರಗಳಲ್ಲಿ ಸರ್ಕಾರೀ ಸಂಸ್ಥೆಗಳಿಗಿಂತ ಇವು ಹೆಚ್ಚು ಪರಿಣಾಮಕಾರಿ ಕೆಲಸ ಮಾಡಬಲ್ಲವೆಂಬ ಹೇಳಿಕೆ ಅದು. ನಮ್ಮದೇ ಪಂಚವಾರ್ಷಿಕ ಯೋಜನೆಯಡಿ ಇವುಗಳಿಗೆ ಮೂರನೆಯ ಯೋಜನೆಯಲ್ಲಿ ಸ್ಥಾನ ಕಲ್ಪಿಸಲಾಯ್ತು. ೮೦ರ ದಶಕದ ವೇಳೆಗೆ ವಿಶ್ವಸಂಸ್ಥೆ ಸರ್ಕಾರೇತರ ಸಂಸ್ಥೆಗಳಿಗೆ ಸಲಹಾಕಾರ ಸ್ಥಾನಮಾನವನ್ನು ಕೊಡಲಾರಂಭಿಸಿತು. ಇದೇ ಸಂದರ್ಭದಲ್ಲಿ ಅಲಿಪ್ತ ರಾಷ್ಟ್ರಗಳೂ ಅತ್ಯಂತ ಪ್ರಭಾವದ ಮಟ್ಟ ಮುಟ್ಟಿ, ಅವು ಪಶ್ಚಿಮದವರ ಆರ್ಥಿಕ ನೆರವಿಗೆ ಇನ್ನು ಕಾಯುವುದು ವ್ಯರ್ಥವೆಂದು ಪರಿಗಣಿಸಿ, ತಮ್ಮ ಸಮಸ್ಯೆಗೆ ಪರ್ಯಾಯ ಪರಿಹಾರ ಮಾರ್ಗವೆಂದು ಅಭಿವೃದ್ಧಿಶೀಲ ಮತ್ತು ಬಡ ದಕ್ಷಿಣ- ದಕ್ಷಿಣ ರಾಷ್ಟ್ರಗಳೆಂದು ಕರೆದವರ ಮಧ್ಯೆ ವಾಣಿಜ್ಯವೇ ಮೊದಲಾಗಿ ಅನೇಕ ಆರ್ಥಿಕ ಸಹಕಾರಕ್ಕೆ ಮುಂದುವರಿದಿದ್ದವು. ಫಿಡೆಲ್ ಕ್ಯಾಸ್ಟ್ರೋ ನೇತೃತ್ವದ ಆಯೋಗವೊಂದು ಇಂಥ ಸಹಕಾರದ ರೂಪುರೇಷೆಗಳನ್ನು ಗುರುತಿಸಿ ಪ್ರಕಟಿಸಿತೂ ಕೂಡ. ಸರ್ಕಾರೇತರ ಸಂಸ್ಥೆಗಳಿಗೆ ಪಶ್ಚಿಮದಿಂದ, ಅದರಲ್ಲೂ ನೆದರ್‌ಲ್ಯಾಂಡ್ಸ್ ಮೂಲಕ ಹಣದ ರಾಶಿ ಹರಿದುಬಂತು. ಸಿಐಎ ಮುಂತಾದ ಸರ್ಕಾರಗಳ ಬೇಹುಗಾರಿಕೆ ಸಂಸ್ಥೆಗಳೂ ನೆದರ್‌ಲ್ಯಾಂಡ್ಸ್ ಮೂಲಕ ಆಸಕ್ತ ದೇಶಗಳ ಆರಿಸಿದ ಸರ್ಕಾರೇತರ ಸಂಸ್ಥೆಗಳಿಗೆ ನಿರ್ದೇಶಿತ ಉದ್ದೇಶಕ್ಕಾಗಿ ಹಣ ಒದಗಿಸಿದ್ದು ಈಗ ಬಟ್ಟಬಯಲಾದ ವಿಷಯ. ಅಂದರೆ ಈ ಬೆಳವಣಿಗೆ ಅಲಿಪ್ತ ರಾಷ್ಟ್ರಗಳ ಪ್ರಾಬಲ್ಯದ ಬೆಳವಣಿಗೆಯ ಸೂಚಕವೆಂದೆನ್ನ ಬೇಕು. ಸೋವಿಯತ್ ಒಕ್ಕೂಟದ ಒತ್ತಾಸೆ ಇವುಗಳ ಹಿನ್ನೆಲೆಯಲ್ಲಿ, ಕೇವಲ ಆಕಸ್ಮಿಕವಾಗಿ ಅಲ್ಲದೆ ಪ್ರಜ್ಞಾಪೂರ್ವಕವಾಗಿ ಆಗಿದ್ದೂ ಎಂದೇ ಹೇಳಬೇಕಾಗುತ್ತದೆ. ಈ ರಾಷ್ಟ್ರಗಳಲ್ಲಿ ಪ್ರಗತಿಪರ ಕ್ರಾಂತಿಕಾರಿ ರಾಜಕೀಯ ಪ್ರವೃತ್ತಿಗಳು ಬೆಳೆಯದಂತೆ ನೆಲಮಟ್ಟದಲ್ಲಿ ಜನತೆಯನ್ನು ಯುವಕರನ್ನು ಹಲ ಹತ್ತು ರೀತಿಯಲ್ಲಿ ವಿಮುಖರಾಗಿಸುವುದು ಅಂತಹ ಎಲ್ಲ ಸಂಸ್ಥೆಗಳ ಉದ್ದೇಶವಾಗಿತ್ತು. ಈ ಹಿನ್ನೆಲೆಯಲ್ಲಿ ವಿಶ್ವ ಸಾಮಾಜಿಕ ವೇದಿಕೆಯ ಸಂಘಟಕರು ಸರ್ಕಾರೇತರ ಸಂಸ್ಥೆಗಳು, ಅವಕ್ಕೆ ಹಣ ಬಂದಿರುವುದು ಇವುಗಳ ಹಿಂದಿರುವ ಸಾಮ್ರಾಜ್ಯಶಾಹಿ ಸಂಸ್ಥೆಗಳು, ಬಹುರಾಷ್ಟ್ರೀಯಗಳು ಹೀಗಿರುವಾಗ ಈ ವೇದಿಕೆಯ ಕಾರ್ಯಕ್ರಮಗಳನ್ನು ಸ್ವಾಗತಿಸುವುದು ಹೇಗೆ ಎಂಬ ಕಳವಳ ಉಂಟಾಗುವುದು ಸಹಜವಾದದ್ದೇ.

ಮುಂಬಯಿ ಪ್ರತಿರೋಧದಲ್ಲಿ ಭಾಗವಹಿಸಿದ ಸಂಸ್ಥೆಗಳ ಸ್ವರೂಪದ ಬಗ್ಗೆ ಹೆಚ್ಚಿಗೆ ಬರೆಯುವುದು ಇಲ್ಲಿ ಅನಗತ್ಯ. ಅವರಲ್ಲಿ ಕೆಲವರಾದರೂ ಸಂದೇಹಾಸ್ಪದ ಮೂಲಗಳಿಂದ ಹಣ ಪಡೆಯುತ್ತಿದ್ದಾರೆ ಎಂಬ ಪುಕಾರು ಇದ್ದದ್ದೇ. ಆದರೆ ಅವರು ಮುಖ್ಯವಾಗಿ ವಿಶ್ವ ಸಾಮಾಜಿಕ ವೇದಿಕೆ ಕುರಿತು ಮಾಡಿದ ಆರೋಪಗಳೆಂದರೆ ಅದು ಕ್ರಾಂತಿ ವಿರೋಧಿ, ಪ್ರತಿಗಾಮಿ, ಅದರಲ್ಲಿ ಹೋರಾಟವಾಗುವ ಸತ್ವವಿಲ್ಲ, ಅವರು ಪರಿಣಾಮದಲ್ಲಿ ಪ್ರಗತಿಪರರ ಚಳುವಳಿಗೆ ಸೇರಬಹುದಾದ ಜನಸಮುದಾಯವನ್ನು ದಾರಿ ತಪ್ಪಿಸುತ್ತಾರೆ ಎಂಬಿತ್ಯಾದಿ. ಇವರು ಉಪಯೋಗಿಸುವ 'ಮಿಲಿಟೆಂಟ್' ಪದವನ್ನು ಭಾಷಾಂತರಿಸದೆ ಪ್ರಯೋಗಿಸುವುದು ಹೆಚ್ಚು ಸೂಕ್ತವೆನಿಸುತ್ತದೆ. ತೀವ್ರಗಾಮಿಗಳಂತೆ ಮಾತನಾಡಿದರೆ, – ಬಂದೂಕು ಹಿಡಿದರೆ ಚಳುವಳಿಗಳು 'ಮಿಲಿಟೆಂಟೇ' ? ಎಂಬ ಪ್ರಶ್ನೆ ಇಲ್ಲಿ ಉದ್ಭವಿಸುತ್ತದೆ. ಕಳೆದ ಐವತ್ತು ವರ್ಷಗಳಲ್ಲಿ ಈ 'ಮಿಲಿಟೆಂಟ್' ಹೋರಾಟಕ್ಕೆ ಸಾಕಷ್ಟು ಅನುಭವ ದಕ್ಕಿರಬೇಕು. ಈ ಹಿಂದೆ ಸಾವಿರಾರು ಯುವಕರು ಅವರಿಂದ ಬಹಳ ನಿರೀಕ್ಷಿಸಿದ್ದರು. ತಮ್ಮ ಕೈಲಾದ ಬೆಂಬಲ ನೀಡಿದರು. ಆದರೆ ವಾಸ್ತವ ಪರಿಸ್ಥಿತಿಯನ್ನು ಪರಿಗಣಿಸಿದರೆ ಇಂದಿನ ಫ್ಯಾಸಿಸ್ಟ್ ಸ್ವರೂಪದ ಹಿಂಸ್ರಕ ಪ್ರಭುತ್ವಗಳು ಅಂತರರಾಷ್ಟ್ರೀಯವಾಗಿ ಪರಸ್ಪರ

ಸಹಕರಿಸುತ್ತಿರುವಾಗ, ಸಣ್ಣಪುಟ್ಟ ಆಯುಧ ಹಿಡಿದ ಯುವ ಪ್ರತಿಭೆಗಳು ಜೀವ ತೆರುತ್ತಿದ್ದು, ಅದರಿಂದ ಪ್ರಗತಿಪರ ಹೋರಾಟಕ್ಕೆ ವಿಪರೀತ ನಷ್ಟವಾಗುತ್ತಿದೆಯೇ ವಿನಃ ಪ್ರಯೋಜನವಾದದ್ದು ಕಂಡುಬಂದಿಲ್ಲ. ಮತ್ತೊಂದು ಕಡೆ ಸೋವಿಯತ್ ಒಕ್ಕೂಟದ ಪತನಾ ನಂತರ, ಪಶ್ಚಿಮದ ಯಾವ ಪ್ರತಿಗಾಮಿ ಶಕ್ತಿಗಳು ಯಾವ ಸರ್ಕಾರೇತರ ಸಂಸ್ಥೆಗಳಂತಹ ಒಳ ಶತ್ರುಗಳನ್ನು ಸೃಷ್ಟಿಸಿದ್ದರೋ, ಅವರೇ ಇಂದು ಅದೇ ಸರ್ಕಾರೇತರ ಸಂಸ್ಥೆಗಳ ಲಂಚಗುಳಿತನ ಭ್ರಷ್ಟಾಚಾರಗಳನ್ನು ಉದ್ದೇಶಪೂರ್ವಕವಾಗಿ ಹೊರಗೆಡವ ಲಾರಂಭಿಸಿದ್ದು, ಸರ್ಕಾರಗಳೇ ಪ್ರತಿಗಾಮಿ ದಿಕ್ಕಿನಲ್ಲಿ ಪರಸ್ಪರ ಸಹಕರಿಸಲಾರಂಭಿಸಿದಂತಾಗಿ, ಸರ್ಕಾರೇತರ ಸಂಸ್ಥೆಗಳು ತಮ್ಮ ಉಪಯುಕ್ತತೆಯನ್ನು ಕಳೆದುಕೊಳ್ಳ ಲಾರಂಭಿಸಿವೆ. ಈ ಸಂಸ್ಥೆಗಳ ಭವಿಷ್ಯ ಅಷ್ಟೇನೂ ಭದ್ರವಾಗಿರುವಂತೆ ಕಂಡುಬರುತ್ತಿಲ್ಲ. ಮೊದಲೆರಡು ಪೀಳಿಗೆಯ ಸರ್ಕಾರೇತರ ಸಂಸ್ಥೆಗಳ ಕಾರ್ಯಕರ್ತರ ನಾಯಕರ ಸುಖಲೋಲುಪತೆ - ಭ್ರಷ್ಟಜೀವನ ಇಂದು ಜಗಜ್ಜಾಹೀರಾಗಿದೆ. ಆದರೂ ಅವರದೇ ಸಂಸ್ಥೆಗಳಡಿ ನೆರೆದಿರುವ ಸಹಸ್ರಾರು ಸಂಖ್ಯೆಯ ಜನಸಮೂಹ, ದಲಿತರು, ಗಿರಿಜನ, ಬುಡಕಟ್ಟು ಜನಾಂಗ, ಮಹಿಳೆಯರು ಇವರೆಲ್ಲಾ ಪ್ರಗತಿಪರರೊಡನೆ ಪೈಪೋಟಿಯೋ ಎಂಬಂತೆ ಹೆಚ್ಚು ಪ್ರಚೋದನಕಾರೀ ಘೋಷಣೆಗಳನ್ನು ಕಲಿತಿದ್ದು, ತಮ್ಮ ಪ್ರಜ್ಞಾವಲಯದಲ್ಲಿ ಅಷ್ಟಿಷ್ಟು ರೂಢಮೂಲ ಪರಿವರ್ತನೆಯನ್ನು ಪಡೆದಿದ್ದಾರೆ. ಹೀಗಾಗಿ ಮುಂಬಯಿ ಪ್ರತಿರೋಧದ ಹಿಂದೆ, ವಿಶ್ವ ಸಾಮಾಜಿಕ ವೇದಿಕೆಯ ಹಿಂದೆ ಅಣಿ ನೆರೆದಿರುವುದು ಒಂದು ಬೃಹತ್ತಾದ ನೆಲಮಟ್ಟದ ವಿಶ್ವ ಸಮುದಾಯ. ಇವುಗಳ ನಡುವೆ ಚಿಂತನೆಯ ಹಲವು ಮಟ್ಟದ ಸಮಾನತೆ ಸಾಧ್ಯವಿದ್ದು, ಇವರು ಮುಂದೆ ಇಡುವ ಹೆಜ್ಜೆ ಆಸಕ್ತಿ ಉಂಟುಮಾಡುವಂಥದ್ದಾಗಿದೆ. ಬಹುಶಃ ಈ ತಿಳಿವಳಿಕೆಯಿಂದಾಗಿಯೇ ಅನೇಕ ರಾಜಕೀಯ ಪಕ್ಷಗಳ ಹಿರಿಯ ನೇತಾರರೂ, ಪ್ರಭುತ್ವಗಳ, ಸರ್ಕಾರಗಳ ಪ್ರತಿನಿಧಿಗಳೂ ಪರೋಕ್ಷವಾಗಿ ಇಲ್ಲಿ ಬಂದು ವೀಕ್ಷಕರಾಗಿ ಭಾಗವಹಿಸಿದ್ದಾರೆ. ಈ ಬೆಳವಣಿಗೆಯಲ್ಲಿ ನಿರಾಸೆಗಿಂತ ಭರವಸೆಗೆ ಕುತೂಹಲಕ್ಕೆ ಹೆಚ್ಚಿನ ಅವಕಾಶವಿದೆ ಎಂದು ತೋರುತ್ತದೆ. 'ಮತ್ತೊಂದು ವಿಶ್ವ ಸಾಧ್ಯ' ಎಂದರೇನು ಎಂಬುದರ ಬಗ್ಗೆ ಸ್ಪಷ್ಟತೆಯಿಲ್ಲ ಎಂಬ ಮಾತೂ ಇದೆ. ಮೊದಲಿಗೆ, ಇಂದಿನ ವಿಶ್ವ ಸರಿಯಿಲ್ಲ, ಇದನ್ನು ಬದಲಾಯಿಸಬೇಕು ಎಂಬ ಅನಿಸಿಕೆಯೇ ಒಂದು ಕ್ರಾಂತಿಕಾರಿ ತಿಳಿವಳಿಕೆ. ಮತ್ತೊಂದು ವಿಶ್ವ ಸಾಧ್ಯವೆಂಬುದು ಈ ನಿಟ್ಟಿನಲ್ಲಿ ಆತ್ಮವಿಶ್ವಾಸವನ್ನು ನಂಬಿಕೆಯನ್ನು ಸೂಚಿಸುವುದರಿಂದ, ಅದರ ವಿರುದ್ಧ ಪ್ರಾಜ್ಞರೆನಿಸಿ ಕೊಂಡವರ ಆಕ್ಷೇಪ ಸರಿಯಲ್ಲ. ಹೌದು, ಸಮಾವೇಶದಲ್ಲಿ ಕೆಲವರು ಬ್ಯಾನರ್ ಹಿಡಿದಿದ್ದರು, ''ಇನ್ನೂ ಉತ್ತಮ ಪ್ರಜಾಪ್ರಭುತ್ವದ ವಿಶ್ವ ಸಾಧ್ಯ'', ''ಸೋಷಿಯಲಿಸ್ಟ್ ವಿಶ್ವ ಸಾಧ್ಯ'', ''ಕಮ್ಯೂನಿಸ್ಟ್ ವಿಶ್ವ ಸಾಧ್ಯ''... ಹೀಗೆಲ್ಲಾ ಹೇಳಿಕೊಂಡಿದ್ದರೂ, ಇವುಗಳೆಲ್ಲವುಗಳ ಅಂತರಂಗ ಎಂದರೆ ಬದಲಾವಣೆಯನ್ನು ಬಯಸುವ ಆಶಯ ಒಂದೇ ಅಲ್ಲವೇ? ಪ್ರಗತಿಪರ, ಶೋಷಣಾರಹಿತ, ಪ್ರಜಾ ಪ್ರಭುತ್ವಾತ್ಮಕ ಸಮಾಜವೇ ಆ 'ಹೊಸ ವಿಶ್ವದ' ಸ್ವರೂಪವೆಂದು ಹೇಳಿದಂತಾಗುವುದಿಲ್ಲವೇ? ಈ ಘೋಷಣೆಯನ್ನು ಕುರಿತು ಲೇವಡಿ ಮಾಡುವವರು ತಮ್ಮ ಅಸಹನೆಯನ್ನೋ, ಅಸೂಯೆಯನ್ನೋ ಪ್ರಕಟಿಸುತ್ತಾರೆ ಎನ್ನಿಸುತ್ತದೆ. ಹೊಸ ವಿಶ್ವದ ಅಂತಿಮ ಸ್ವರೂಪದ ವಿವರಣೆಯಲ್ಲಿ ಕರಾರುವಕ್ಕಾದ ಸೈದ್ಧಾಂತಿಕ ಸ್ಪಷ್ಟನೆಗೆ ಕಾಯದೆ ಅದರತ್ತ ಮುಂದುವರಿಯುವ ಮೊದಲ ಹೆಜ್ಜೆಗಳ ಬಗ್ಗೆ ಏಕಮತವಿದ್ದರೆ, ಆ ದಿಕ್ಕಿನಲ್ಲಿ ತಡಮಾಡದೆ ಸಾಗಲು ಹೆಜ್ಜೆ ಹಾಕುವುದೇ ಇಂದಿನ ತುರ್ತು ಕರ್ತವ್ಯ. ಮುಂಬಯಿ ಪ್ರತಿರೋಧದವರು ವಿಶ್ವ ಸಾಮಾಜಿಕ ವೇದಿಕೆಯ ಬಗ್ಗೆ ತಾವು ಸಂಪೂರ್ಣ ಹಣಾಹಣಿ ವಿರೋಧವನ್ನೇನೂ ಪ್ರಕಟಿಸಲಿಲ್ಲ; ಅದರ ನಿಷೇಧಾತ್ಮಕ ಮುಖಗಳನ್ನು ವರ್ಣಿಸಿದ್ದಾರಷ್ಟೆ. ಇದು ಸಮಾಧಾನಕರ. ವಿಶ್ವ ಸಾಮಾಜಿಕ ವೇದಿಕೆ-೨೦೦೫ ಮತ್ತೆ ಬ್ರೆಜಿಲ್‌ನಲ್ಲೇ ನಡೆಯಲಿದೆ. ಆ ವೇಳೆಗೆ ಈ ವೇದಿಕೆ ಸ್ಪಷ್ಟ ಗುರಿಯುಳ್ಳ ಚಳುವಳಿಯಾಗಿ ರೂಪುಗೊಳ್ಳುವ ಸೂಚನೆಗಳು ಮುಂಬಯಿಯಲ್ಲಿ ದೊರಕಿವೆ.

ಮಳೆ

ಮಳೆ ಬರುವುದೆಂದು ಕಪ್ಪೆಗಳ ಪೂಜಿಸುವರು
ಮಳೆ ಬರುವುದೆಂದು ಕತ್ತೆಯ ಪೂಜಿಸುವರು
ಮಳೆ ಬರುವುದೆಂದು [illegible] ಪೂಜಿಸುವರು
ಮಳೆ ಬರುವುದೆಂದು ವೃಷಭನ ಮೂರ್ತಿಗೆ
ಮೊಸರ ಮೆತ್ತುವರು
ಮಳೆ ಬರುವುದೆಂದು ಜಪತಪವ ಮಾಡುವರು
ಗಾಳಿ ಹೊತ್ತು ತಂದಲ್ಲದೆ ಇಳೆ [illegible]ದೆಂಬ
ನಿಜವ ಅರಿಯದೆ ಹೋದರಯ್ಯ

[illegible]

ಸರ್ಕಾರೇತರ ಸಂಸ್ಥೆಗಳ ವ್ಯವಹಾರದ ಬಗ್ಗೆ ಗೃಹಮಂತ್ರಾಲಯ ಈಗಷ್ಟೆ ಅನೇಕ ಸಂಗತಿಗಳನ್ನು ಬಯಲುಮಾಡಿದೆ. ಒಂದರ್ಥದಲ್ಲಿ ಈ ಸಂಸ್ಥೆಗಳು ತಮ್ಮ ಸ್ವರೂಪವನ್ನು ಬದಲಾಯಿಸಿಕೊಳ್ಳದೇ ವಿಧಿಯಿಲ್ಲ. ಅಭಿವೃದ್ಧಿಶೀಲ ಮತ್ತು ಹಿಂದುಳಿದ ರಾಷ್ಟ್ರಗಳ ನಡುವೆ ಆರ್ಥಿಕವೂ ಸೇರಿ ಎಲ್ಲಾ ರೀತಿಯ ಸಹಕಾರವೇ ಜಾಗತೀಕರಣಕ್ಕೆ, ಸಾಮ್ರಾಜ್ಯವಾದಕ್ಕೆ ದಿಟ್ಟ ಉತ್ತರವೆಂದು ಮುಂಬಯಿಯ ಎರಡೂ ಸಮಾವೇಶಗಳೂ ಸ್ಪಷ್ಟ ಪಡಿಸಿವೆ. ಈ ದಿಶೆಯಲ್ಲಿ ಬರಲಿರುವ ದಿನಗಳಲ್ಲಿ ಕುತೂಹಲಕಾರಿ ಬೆಳವಣಿಗೆಗಳು ಸಾಧ್ಯ. ಅದಕ್ಕೆಂದೇ ಪ್ರತಿಗಾಮೀ ಶಕ್ತಿಗಳು, ಅವರು ಇಟ್ಟುಕೊಂಡ ವಾರ್ತಾ ಮಾಧ್ಯಮಗಳೂ ಈ ಸಮಾವೇಶಗಳ ಬಗ್ಗೆ ಒಡಕು ಮಾತನಾಡಲು ಪ್ರಾರಂಭಿಸಿರುವುದು. ನಾವು ಅದಾವುದಕ್ಕೂ ಕಿವಿಗೊಡಬೇಕಾಗಿಲ್ಲ. 'ಮಿಲಿಟೆನ್ಸಿ'ಯ ಅಗತ್ಯದ ಬಗೆಗೂ ಮುಂಬಯಿಯಲ್ಲಿ ಬಹಳಷ್ಟು ಚರ್ಚೆಯಾಗಿದೆ. ಬಂದೂಕು ಹಿಡಿದ ಹಿಂಸೆಯ 'ಮಿಲಿಟೆನ್ಸಿ' ಪ್ರಭುತ್ವದ ಹಿಂಸ್ರಕ ಶಕ್ತಿಯ ಮುಂದೆ ನಿಲ್ಲಲಾರದೆಂಬ ಅನುಭವಜನ್ಯ ತಿಳಿವಳಿಕೆಯಿಂದಾಗಿ ಪರಿಸ್ಥಿತಿ ಬದಲಾಯಿಸಿದೆ. ಇದರಲ್ಲಿ ಮುಖ್ಯ ವಿಷಯವೆಂದರೆ ಪರಕೀಯರ ಆಕ್ರಮಣದ ವಿರುದ್ಧ ಬಂದೂಕು ಹಿಡಿಯುವುದು ಸುಲಭ. ಆದರೆ ಸ್ವದೇಶದಲ್ಲೇ ವರ್ಗಶತ್ರುಗಳ ಸರ್ಕಾರದ ವಿರುದ್ಧ ಅದೇ ತಂತ್ರ ಪ್ರಯೋಗಿಸುವ ವಿಷಯವೇ ಬೇರೆ. ಗಾಂಧಿ ತೋರಿದ ಅಹಿಂಸಾಧಾರಕ ಆದರೆ ಜನಸಮುದಾಯದ ಒಗ್ಗಟ್ಟಿನ ಅಸಹಕಾರ ಆಂದೋಳನಗಳು ಹೆಚ್ಚು ಪರಿಣಾಮಕಾರೀ 'ಮಿಲಿಟೆಂಟ್' ಹೋರಾಟಗಳಾಗ ಬಹುದು ಎಂಬುದೇ ಇಂದಿನ ಬಹುಮತದ ಅನಿಸಿಕೆ. ನಕ್ಸಲೀಯತೆಯ ಹಣೆಪಟ್ಟಿಯಿಟ್ಟು ನಿರ್ಭಿಡೆಯಿಂದ ಸರ್ಕಾರಗಳೇ ಪ್ರತಿಭಾವಂತ ಯುವ ಕ್ರಾಂತಿವಾದಿಗಳನ್ನು ಕೊಲೆ ಮಾಡುತ್ತಿರುವ ಸಂದರ್ಭದಲ್ಲಿ ಇಲ್ಲಿ ಸ್ವಲ್ಪ ಹೋರಾಟದ ವೈಭವೀಕರಣ, ರೋಮಾಂಚಕತೆಯನ್ನು ಕೈಬಿಟ್ಟು ವಾಸ್ತವಕ್ಕೆ ಬರಬೇಕಾದೀತು. ಸಾವಿರಾರು ಜನ ಒಟ್ಟಾಗಿ ಬಂಡೆದ್ದಾಗ, ಅವರ ಬಳಿ ಬಂದೂಕು ಇಲ್ಲದಿದ್ದರೂ, ಪ್ರಜಾಪ್ರಭುತ್ವದಲ್ಲಿ ಸರ್ಕಾರಗಳು ಹಿಂದ ಸರಿಯುವುದು ಅನುಭವದ ಸಂಗತಿ. ಹೀಗೆ ಹೋರಾಟದಲ್ಲಿ ವ್ಯಾಪ್ತಿಯ ಸಂಘಟನೆ ಮುಖ್ಯವಾಗಿ, ಪ್ರಜಾಪ್ರಭುತ್ವವೂ ಅದರ ಮುಖ್ಯ ಉದ್ದೇಶವಾಗಿ ಬಿಡುತ್ತದೆ. ಮುಂಬೈ ಸಮಾವೇಶ ಈ ಅಗತ್ಯವನ್ನೂ ಗುರುತಿಸಿದೆ. ಹೆಚ್ಚು ಪರಂಪರಾಗತ ಅನುಭವವುಳ್ಳ ನಮ್ಮ ಜನತೆ ಈ ಮಾರ್ಗಕ್ಕೆ ಮತ್ತೊಮ್ಮೆ ಅವಕಾಶ ನೀಡುವ ಸಮಯ ಬಂದೊದಗಿರಬಹುದು.

ಕೊನೆಯದಾಗಿ ಒಂದು ಮಾತು. ಈ ವೇದಿಕೆಗಳು, ಅವುಗಳು ಹುಟ್ಟುಹಾಕಬಹುದಾದ ಚಳುವಳಿಗಳು, ಹೋರಾಟಗಳು ರಾಜಕೀಯ ಪ್ರಕ್ರಿಯೆಗೆ ಪರ್ಯಾಯವಲ್ಲ. ಅಂತಿಮವಾಗಿ, ರಾಜಕೀಯ ಪ್ರಕ್ರಿಯೆಯಲ್ಲಷ್ಟೇ ಪ್ರಭುತ್ವದ ಮೂಲ ಸ್ವರೂಪವನ್ನು ಬದಲಾಯಿಸುವುದು ಸಾಧ್ಯ. ಆ ಜವಾಬ್ದಾರಿಯ ನಿರ್ವಹಣೆಗೆ ಈ ಚಳುವಳಿಗಳು ಭೂಮಿಕೆ ಯನ್ನು ನಿರ್ಮಿಸುವ ಸಾಧ್ಯತೆ ಇದ್ದರೆ ಅದೇ ಅವುಗಳ ಸಮರ್ಥನೆ. ಈ ಭೂಮಿಕೆಯ ನಿರ್ಮಾಣದ ಹೊಣೆಗಾರಿಕೆ ವಿಶ್ವ ಸಾಮಾಜಿಕ ವೇದಿಕೆ ಹಾಗೂ ಮುಂಬಯಿ ಪ್ರತಿರೋಧ ಎರಡಕ್ಕೂ ಅನ್ವಯಿಸುತ್ತದೆ.

''ಈ ಜಗತ್ತು ಮಾರಾಟಕ್ಕಿಲ್ಲ''
''ಲಾಭಕ್ಕೆ ಮುಂಚೆ ಪ್ರಜೆ''
''ಬಂಡವಾಳಶಾಹಿ ಮಾರ್ಗ ಮಾರ್ಗವಲ್ಲ''

ಕೆ. ಎಸ್. ಪಾರ್ಥಸಾರಥಿ
ನಂ. ಸಿ-೧, ನಾಗಾರ್ಜುನ ಎನ್‌ಕ್ಲೇವ್, ೭೬/ಎ
೧೪ನೇ ಕ್ರಾಸ್, ೧ನೇ ಹಂತ
ಜೆ.ಪಿ.ನಗರ, ಬೆಂಗಳೂರು - ೫೬೦ ೦೭೮

# ವಿಶ್ವ ಸಾಮಾಜಿಕ ವೇದಿಕೆ ಮತ್ತು ಸಾಮ್ರಾಜ್ಯಶಾಹಿ ವಿರೋಧಿ ಚಳುವಳಿ

**ಮನೋಹರ್**

"ಅನ್ಯಾಯವನ್ನು ವಿರೋಧಿಸಿದರೆ ಸಾಲದು; ಅದಕ್ಕೆ ವಿರುದ್ಧವಾಗಿ ಹೋರಾಡಿದಾಗ ಮಾತ್ರ ಪರಿಸ್ಥಿತಿಯಲ್ಲಿ ಬದಲಾವಣೆ ಬರುತ್ತದೆ." ಸುಮಾರು ೨೫೦ ವರ್ಷಗಳ ಹಿಂದೆ ಫ್ರಾನ್ಸ್‌ನ ಜನಪರ ಬರಹಗಾರ ವಿಕ್ಟರ್ ಹ್ಯೂಗೋ ಹೇಳಿದ ಈ ಮಾತು ಪ್ರಸ್ತುತ ಪ್ರಪಂಚ ಸಾಮಾಜಿಕ ವೇದಿಕೆಗೆ ಸರಿಯಾಗಿ ಹೋಲಿಕೆಯಾಗುತ್ತದೆ.

ಒಂದೆಡೆ ಪ್ರಪಂಚಾದ್ಯಂತ ಸಾಮ್ರಾಜ್ಯಶಾಹಿ ವಿರೋಧಿ ಹೋರಾಟಗಳು ದಿನದಿಂದ ದಿನಕ್ಕೆ ತೀವ್ರವಾಗುತ್ತಿವೆ. ೧೯೯೯ರಲ್ಲಿ ಸಿಯಾಟಲ್‌ನಲ್ಲಿ ಆರಂಭವಾದ ಈ ಅಲೆ ಪ್ರಪಂಚ ಧಣಿಗಳು ಎಲ್ಲಿ ಸಮಾವೇಶವಾದರೂ ಪ್ರವಾಹವಾಗಿ ಅಪ್ಪಳಿಸುತ್ತಿದೆ. ಜನತೆಯಲ್ಲಿ ಮೂಡುತ್ತಿರುವ ಈ ಪ್ರಜ್ಞೆ ಒಂದು ಬಲವಾದ ಸಾಮ್ರಾಜ್ಯಶಾಹಿ ವಿರೋಧಿ ಹೋರಾಟವನ್ನು ಆಶಿಸುತ್ತಿದೆ. ಇನ್ನೊಂದೆಡೆ ಯುದ್ಧಾಕಾಂಕ್ಷಿ ಸಾಮ್ರಾಜ್ಯಶಾಹಿಯು ವಿಶ್ವದ ಜನತೆಯ ಮೇಲೆ ಭೀಕರ ದಾಳಿಯನ್ನು ನಡೆಸುತ್ತಿದೆ. ಅದರ ಭಾಗವಾಗಿ ಆಫ್ಘಾನಿಸ್ತಾನ, ಇರಾಕ್ ಜನತೆಯ ಮೇಲೆ ಅದರ ರುದ್ರನರ್ತನವನ್ನು ನೋಡುತ್ತಿದ್ದೇವೆ. ಕಳೆದ ನಾಲ್ಕು ವರ್ಷಗಳಿಂದ ವಿಶ್ವ ಸಾಮಾಜಿಕ ವೇದಿಕೆಯು ಆಚರಣೆಯಲ್ಲಿ ಸ್ಪಷ್ಟವಾದ ಯೋಜನೆ, ಅಜೆಂಡಾ ಇಲ್ಲದೇ ಕೇವಲ ಚರ್ಚೆಗೆ ಸೀಮಿತವಾಗುತ್ತಿದೆ. ಆದರೆ ಮುಂಬೈ ಪ್ರತಿರೋಧ ೨೦೦೪ ಒಂದು ಸ್ಪಷ್ಟವಾದ ಯೋಜನೆ, ಆಲೋಚನೆ ಕಾರ್ಯಾಚರಣೆ ಪ್ರಣಾಳಿಕೆಯಡಿ ಕಾರ್ಯನಿರ್ವಹಿಸುತ್ತಿದ್ದು ಎಲ್ಲೆಡೆ ಬಲವಾದ ಸಾಮ್ರಾಜ್ಯಶಾಹಿ ವಿರೋಧಿ ಹೋರಾಟವನ್ನು ಕಟ್ಟುವಲ್ಲಿ ಒಂದು ಹೆಜ್ಜೆ ಮುಂದಿಟ್ಟಿದೆ.

ಯಾವ ಮಾತಿನ ಹಿಂದೆ ಯಾವ ವರ್ಗ ಹಿತಾಸಕ್ತಿ ಅಡಗಿದೆಯೋ, ಅದನ್ನು ಅರ್ಥಮಾಡಿಕೊಳ್ಳದಷ್ಟು ಕಾಲ ಜನರು ಮತ್ತೆ ಮತ್ತೆ ಮೋಸ ಹೋಗುತ್ತಲೇ ಇರುತ್ತಾರೆ
- ವಿ. ಐ. ಲೆನಿನ್

ಕಳೆದ ವರ್ಷ ಹೈದರಾಬಾದ್‌ನಲ್ಲಿ ಏಷಿಯಾ ಸಮಾವೇಶ ನಡೆಯಿತು. ಈ ರೀತಿಯ ಯಾವುದೇ ಸಭೆಗಳು ಜರುಗಿದಾಗ ತೀರ್ಮಾನಗಳನ್ನು ಕೈಗೊಳ್ಳುವುದು, ಕರೆಯನ್ನು ನೀಡುವುದು ನಡೆಯುತ್ತಿರುತ್ತದೆ. ಆದರೆ ಆ ಸಭೆಯಲ್ಲಿ ಈ ರೀತಿ ಯಾವುದೂ ನಡೆಯಲಿಲ್ಲ. ಜಾಗತೀಕರಣ, ಖಾಸಗೀಕರಣ, ವಿಶ್ವ ಸಾಮ್ರಾಜ್ಯಶಾಹಿ ಸಂಸ್ಥೆಗಳ ವಿರುದ್ಧ 'ತೀವ್ರ'ವಾಗಿ ಮಾತನಾಡಿ ಚರ್ಚೆಯನ್ನು ಮಾತ್ರ ನಡೆಸಿತು. ಯಾವುದೇ ಚರ್ಚೆಯು ಹೋರಾಟಕ್ಕೆ, ಕಾರ್ಯಾಚರಣೆಗೆ ಸಹಕಾರಿಯಾಗಬೇಕು. ಆಗ ಮಾತ್ರವೇ ಆ ಚರ್ಚೆಗೆ ಬೆಲೆ ಸಿಗುತ್ತದೆ.

ಪ್ರಪಂಚ ಸಾಮ್ರಾಜ್ಯಶಾಹಿ ಧಣಿಗಳು ಅದರಲ್ಲೂ ಮುಖ್ಯವಾಗಿ ಅಮೆರಿಕನ್ ಸಾಮ್ರಾಜ್ಯಶಾಹಿಯ ನಾಯಕತ್ವದಲ್ಲಿ ಆಫ್ಘಾನಿಸ್ತಾನ, ಇರಾಕ್ ಮೇಲೆ ಯುದ್ಧ ನಡೆಸುವುದರ ಮೂಲಕ ಪ್ರಪಂಚ ಜನತೆಯ ಮೇಲೆ ದಾಳಿಯನ್ನು ತೀವ್ರಗೊಳಿಸುತ್ತಿವೆ. ಈ ರೀತಿ ಸುಸಜ್ಜಿತ, ಶಕ್ತಿಶಾಲಿ ಸಾಮ್ರಾಜ್ಯಶಾಹಿಯನ್ನು ಪ್ರಪಂಚದ ಜನತೆ ತೀವ್ರವಾಗಿ ವಿರೋಧಿಸಿ ಬೀದಿಗಿಳಿಯುತ್ತಿದ್ದಾರೆ. ಹಾಗಾಗಿ, ಕೇವಲ ಸಭೆ-ಸಮಾರಂಭಗಳು, ಚರ್ಚೆಯಿಂದ ಏನನ್ನು ಸಾಧಿಸಲಾಗುತ್ತದೆ ?

ಯಾವ ಚಳುವಳಿಗಾದ್ರೂ ಒಂದು ಗುರಿ ಇರಬೇಕು. ಆ ಗುರಿ ಸಾಧನೆಗಾಗಿ ಒಂದು ಕಾರ್ಯಾಚರಣೆ ಯೋಜನೆ ಇರಬೇಕು. ಇದಾವುದನ್ನೂ ಇಟ್ಟುಕೊಳ್ಳದ ವೇದಿಕೆಯ ಬಹುಪಾಲನ್ನು ಎನ್.ಜಿ.ಓ. (ಸ್ವಯಂ ಸಹಾಯಕ ಸಂಸ್ಥೆ)ಗಳು ಆಕ್ರಮಿಸಿಕೊಂಡಿವೆ. ಜಾಗತೀಕರಣದ ಪ್ರಕ್ರಿಯೆಯಿಂದ ರೈತರು- ಕಾರ್ಮಿಕರು, ಸಮಾಜದ ಎಲ್ಲಾ ವರ್ಗದ ಜನರ ಬದುಕು ಬಿಕ್ಕಟ್ಟಿನಲ್ಲಿದ್ದು ಚಿಂತಾಜನಕವಾಗಿದೆ. ಜನರ ಸಹನೆ ನಶಿಸುತ್ತಿದೆ. ಜನರ ಈ ಪರಿಸ್ಥಿತಿ ಪ್ರಭುತ್ವ ವಿರೋಧಿ ಹೋರಾಟವಾಗಿ ಬೆಳೆಯದ ಹಾಗೆ ಕೆಲವು ಎನ್‌ಜಿಓಗಳು ತಡೆಯುತ್ತಿವೆ. ಸಮಾಜಸೇವೆ, ಆರೋಗ್ಯ, ಶಿಕ್ಷಣ, ಗ್ರಾಮೀಣಾಭಿವೃದ್ಧಿ ಮುಂತಾದ ಹೆಸರಿನಲ್ಲಿ ಜನರಿಗೂ-ಸರ್ಕಾರಕ್ಕೂ ನಡುವೆ ಮಧ್ಯವರ್ತಿಗಳಾಗಿ ಇವು ಕೆಲಸ ಮಾಡುತ್ತಿವೆ. ಜನರಿಗೆ ತಮ್ಮ ಕಷ್ಟಗಳಿಗೆ ತಾವೇ ಕಾರಣವೆಂದು ಹೇಳುತ್ತಾ ನಿಜವಾದ ಕಾರಣಗಳನ್ನು ಮರೆಮಾಚುತ್ತಿದ್ದಾರೆ. ನಿಜವಾದ ಸಮಸ್ಯೆಗಳನ್ನು ಪಕ್ಕಕ್ಕಿಟ್ಟು ವಿಶ್ವಬ್ಯಾಂಕ್ ಹೇಳುವ ನುಡಿಗಳನ್ನೇ ಅವರೂ ಆಡುತ್ತಾರೆ. ಇವುಗಳಿಗೆ ಬಹುರಾಷ್ಟ್ರೀಯ ಕಂಪೆನಿಗಳು, ಸಾಮ್ರಾಜ್ಯಶಾಹಿ ಸರ್ಕಾರಗಳು, ವಿಶ್ವಬ್ಯಾಂಕ್, ವಿಶ್ವಸಂಸ್ಥೆ ರೀತಿಯ ಸಂಸ್ಥೆಗಳು ನಿಧಿಯನ್ನು ನೀಡುತ್ತವೆ. ಹಾಗಾಗಿ ಎನ್.ಜಿ.ಓ.ಗಳು ಆಕಸ್ಮಿಕವಾಗಿ ಹುಟ್ಟಿಕೊಂಡಿರುವವಲ್ಲ. ಜನ ಹೋರಾಟಗಳು ತೀವ್ರಗೊಳ್ಳದ ಹಾಗೆ, ಸರ್ಕಾರದ ಬಗ್ಗೆ ಭ್ರಮೆಗಳನ್ನು ಮೂಡಿಸುತ್ತಾ, ಜನರ ಸಹನೆಯ ಕಟ್ಟೆ ಒಡೆಯದ ಹಾಗೆ ಕಾಪಾಡುವ ಕೆಲಸವನ್ನು ಮಾಡುತ್ತಿವೆ. ಹಾಗಾಗಿ ಜಾಗತೀಕರಣದ ಭಾಗವಾಗಿ ಸಾಮ್ರಾಜ್ಯಶಾಹಿ ಸಂಸ್ಥೆಗಳ ಯೋಜನೆಯ ಭಾಗವಾಗಿ ಹುಟ್ಟಿಕೊಂಡಿರುವವು. ವಿಶ್ವಬ್ಯಾಂಕ್ ಬಡದೇಶಗಳಿಗೆ ಸಾಲ ನೀಡುತ್ತಾ ಎನ್.ಜಿ.ಓ.ಗಳನ್ನು ಪ್ರೋತ್ಸಾಹಿಸಬೇಕೆಂಬ ಷರತ್ತನ್ನೂ ಹಾಕುತ್ತಿದೆ.

### ಆಚರಣೆಯೇ ಒರೆಗಲ್ಲು

ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸಾಮ್ರಾಜ್ಯಶಾಹಿ ಸಂಸ್ಥೆಗಳಿಂದ ಹಣ ಪಡೆದು ವೇದಿಕೆಯು ಕಾರ್ಯನಿರ್ವಹಿಸುತ್ತಿದೆ. ಕಳೆದ ನಾಲ್ಕು ವರ್ಷಗಳಲ್ಲಿ ಯೂರೋಪ್ ಸಾಮಾಜಿಕ ವೇದಿಕೆ, ಏಷಿಯಾ ಸಾಮಾಜಿಕ ವೇದಿಕೆ, ಆಫ್ರಿಕಾ ಸಾಮಾಜಿಕ ವೇದಿಕೆ ಹೀಗೆ ಎಲ್ಲಾ ಕಡೆ ಕಾರ್ಯಕ್ರಮಗಳನ್ನು ನಡೆಸುತ್ತಾ ಕಾಲ ಕಳೆದಿದೆ. 'ಮತ್ತೊಂದು ಪ್ರಪಂಚ ಸಾಧ್ಯ' ಎಂದು ಹೇಳಿಕೊಳ್ಳುತ್ತಾ ನಡೆಯುತ್ತಿದೆ. ಆ ಮತ್ತೊಂದು ಪ್ರಪಂಚ ಹೇಗಿರುತ್ತದೆ ? ಅದು ಹೇಗೆ ಸಾಧ್ಯವಾಗುತ್ತದೆ ? ಅದಕ್ಕಾಗಿ ನಾವೇನು ಮಾಡಬೇಕು ? ಎಂಬಿತ್ಯಾದಿ ಪ್ರಶ್ನೆಗಳಿಗೆ ಅದರಲ್ಲಿ ಉತ್ತರವಿಲ್ಲ.

ಆದ್ದರಿಂದ ವೇದಿಕೆಯ ನಾಲ್ಕು ವರ್ಷದ ಆಚರಣೆಯಲ್ಲಿ ಅದು ವಿಶ್ವದ ಜನತೆ ಆಶಿಸುತ್ತಿರುವ ದೃಢವಾದ ಸಾಮ್ರಾಜ್ಯಶಾಹಿ ವಿರೋಧಿ ಚಳುವಳಿಯಾಗಲು ಸಾಧ್ಯವಾಗಿಲ್ಲ. ಸಾಮ್ರಾಜ್ಯಶಾಹಿ ವ್ಯವಸ್ಥೆಯನ್ನೇ ನಾಶಮಾಡಬೇಕಾಗಿರುವ ಅನಿವಾರ್ಯತೆಯನ್ನು ಮನಗಾಣದೆ, ಪ್ರಸ್ತುತ ವ್ಯವಸ್ಥೆಯನ್ನು ಸುಧಾರಿಸಬೇಕು ಎಂಬ ಪರಿಧಿಯಲ್ಲೇ ಜನರನ್ನು ಸಂಘಟನೆಗಳನ್ನು ಉಳಿಸಲು ಅದು ಪ್ರಯತ್ನಿಸುತ್ತಿದೆ. ವಿಶ್ವ ಸಾಮಾಜಿಕ ವೇದಿಕೆಯನ್ನು ಸರಿಯಾಗಿ ಅರ್ಥೈಸಿಕೊಳ್ಳದ ಅದರಲ್ಲಿ ಕೆಲಸ ಮಾಡುತ್ತಿರುವ ನಿಜವಾದ ಸಾಮ್ರಾಜ್ಯಶಾಹಿ ವಿರೋಧಿಗಳನ್ನೂ ಒಳಗೊಂಡಂತೆ ಪ್ರಪಂಚದ ಹೋರಾಡುವ ಜನತೆ ಒಂದಾಗಿ ಬಲಾಢ್ಯವಾದ ಸಾಮ್ರಾಜ್ಯಶಾಹಿಯನ್ನು ಹಿಮ್ಮೆಟ್ಟಿಸಬೇಕಾಗಿದೆ.

ಯಾವ ಮಾತಿನ ಹಿಂದೆ ಯಾವ ವರ್ಗ ಹಿತಾಸಕ್ತಿ ಅಡಗಿದೆಯೋ, ಅದನ್ನು ಅರ್ಥಮಾಡಿಕೊಳ್ಳದಷ್ಟು ಕಾಲ ಜನರು ಮತ್ತೆ ಮತ್ತೆ ಮೋಸ ಹೋಗುತ್ತಲೇ ಇರುತ್ತಾರೆ.

ಮನೋಹರ್ (ಆರ್‌ಪಿಎಸ್)
ಯು.ಟಿ. ನಂ. ೧೫೭೦, ಕೇಂದ್ರ ಕಾರಾಗೃಹ ಚರ್ಲಾಪಲ್ಲಿ ರಂಗಾರೆಡ್ಡಿ ಜಿಲ್ಲೆ, ಆಂಧ್ರಪ್ರದೇಶ - ೫೦೧ ೩೦೧




ಕುಶಾಲನಗರದ ಹೋಟೆಲ್ ಕನ್ನಿಕಾ ಇಂಟರ್‌ನ್ಯಾಷನಲ್ ಸಭಾಂಗಣದಲ್ಲಿ, ಕಾವೇರಿ ಜೇಸಿಸ್ ಸಹಯೋಗದೊಂದಿಗೆ ನವಕರ್ನಾಟಕ ಪುಸ್ತಕ ಪ್ರದರ್ಶನ ನಡೆಯಿತು. ಕುಶಾಲನಗರದ ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷರಾದ ಶ್ರೀ ಬಿ. ಆರ್. ನಾರಾಯಣ ಅವರು ಪುಸ್ತಕ ಪ್ರದರ್ಶನ ಉದ್ಘಾಟಿಸಿದರು.

# ಯುಗಾದಿಯ ಉಡುಗೊರೆ



**ಯು**ಗಾದಿಯ ಶುಭಾಶಯಗಳು. ವಸಂತಾಗಮನದ ಸಂಭ್ರಮವೇ ಯುಗಾದಿ. ಬೇವಿಗೆ ಹೊಸ ಚಿಗುರು ಕುಡಿಯೊಡೆಯುವ ಸಡಗರ. ಎಲ್ಲ ಮರಗಳಿಗೂ ಅಷ್ಟೇ. ಬೋಳುಬೋಳಾಗಿ ಕಡ್ಡಿಯಂತೆ ನಿಂತಿದ್ದ ಮರಗಳೆಲ್ಲಾ ಚಿಗುರೆಲೆಯ ಹೊಸ ಉಡುಗೆ ತೊಟ್ಟು ನಲಿಯುತ್ತವೆ. ಸೃಷ್ಟಿಯ ಹೊಸದೊಂದು ಅಧ್ಯಾಯಕ್ಕೆ ನಾಂದಿಯಾಗುತ್ತವೆ. ಇದು ಒಂದು ರಾತ್ರಿಯಲ್ಲಿ ನಡೆದುಹೋಗುವ ಜಾದೂ ಅಲ್ಲ. ನಿಧಾನವಾಗಿ ಒಂದು ವಾರದಷ್ಟು ಸಮಯದಲ್ಲಿ ಅರಳುವ ಪ್ರಕ್ರಿಯೆ. ''ಯುಗಾದಿ'' ಎಂಬ ಹೆಸರಿನ ದಿನಕ್ಕೆ ಖಗೋಳ ವೈಜ್ಞಾನಿಕ ಮಹತ್ವವಿದೆ. ತನ್ನ ಕಕ್ಷೆಯಲ್ಲಿ ಭೂಮಿ ಒಂದು ಮುಖ್ಯ ಹಂತವನ್ನು ದಾಟುತ್ತದೆ. 'ವಿಷುವ' ಎಂದಿದರ ಹೆಸರು. ಚೈತ್ರ ವಿಷುವ ಎಂಬುದು ಸೂಕ್ತ. ರಾತ್ರಿ, ಹಗಲುಗಳ ಅವಧಿ ಈ ದಿನ ಸಮ ಎಂದು ಅನುಭವದಿಂದ ತಿಳಿದ ಪಾಠ. ಹಾಗಾಗಿ Equinox ಎಂದು ಇಂಗ್ಲಿಷ್ ಹೆಸರಿದೆ. ಪ್ರತಿವರ್ಷ ಮಾರ್ಚ್ ೨೧ರಂದು ನಡೆಯುವ ''ಯುಗಾದಿ'' ಈ ಬಾರಿ ೨೦ರಂದು ಘಟಿಸಲಿದೆ. ಭೂಮಿಯ ವರ್ಷದ ಅವಧಿಯಲ್ಲಿ (೩೬೫.೨೫) ಕಾಲು ದಿನ ಸೇರಿದೆಯಲ್ಲವೇ? ನಾಲ್ಕು ವರ್ಷಕ್ಕೊಮ್ಮೆ ಈ ''ಕಾಲು'' ಭಾಗಗಳು ಸೇರಿ ಒಂದು ದಿನವಾಗುವುದರಿಂದ ಫೆಬ್ರವರಿಗೊಂದು ಹೆಚ್ಚಿನ ದಿನ ಕೂಡಿಸುತ್ತೇವಷ್ಟೆ. ವಾಸ್ತವವಾಗಿ ವರ್ಷದ ಅವಧಿ ೩೬೫.೨೪೨೧೯ ದಿನಗಳು. ಹೀಗೆ ಉಂಟಾಗುವ ಸಣ್ಣ ವ್ಯತ್ಯಾಸ ಈ ಬಾರಿ ಯುಗಾದಿಯನ್ನು ಹಿಂದಿನ ದಿನಕ್ಕೆ ತಳ್ಳಿದೆ.

ಯುಗಾದಿ ಎಂದು ''ಆಚರಿಸುವ'' ದಿನ ಇದಲ್ಲ. ಮನೆಯನ್ನು ತಳಿರು ತೋರಣದಿಂದ ಶೃಂಗರಿಸಿ ಬೇವು ಬೆಲ್ಲ ತಿನ್ನುವ ದಿನ ಅಮಾವಾಸ್ಯೆಯ ಮುಂದಿನದು – ಪಾಡ್ಯ. ಚಂದ್ರನ ಚಲನೆ ಇದನ್ನು ನಿರ್ಧರಿಸುವುದರಿಂದ ಇದರ ಹೆಸರು ಚಾಂದ್ರಮಾನ ಯುಗಾದಿ. ಈ ಬಾರಿ ಇದೂ ಕೂಡ ಖಗೋಳೀಯ ಯುಗಾದಿಯ ಮರುದಿನವೇ ಉಂಟಾಗುವುದೆಂಬುದು ಕಾಕತಾಳೀಯವಷ್ಟೇ. ಇಂತಹುದೇ ಒಂದು ಸಂದರ್ಭ ಈ ಆಚರಣೆಯನ್ನು ಹುಟ್ಟುಹಾಕಿದೆ ಎಂದು ಸುಲಭವಾಗಿ ಊಹಿಸಬಹುದಲ್ಲವೆ?

ಸಭಾಸದರಿಗೆ ಈ ಬಾರಿ ಯುಗಾದಿಯ ಉಡುಗೊರೆ ದೊರಕಲಿದೆ. ಐದೂ ಗ್ರಹಗಳನ್ನು ಸಂಜೆಯ ಆಕಾಶದಲ್ಲಿ ನೋಡುವ ಅವಕಾಶವೇ ಈ ಉಡುಗೊರೆ. ನಕ್ಷೆಯಲ್ಲಿ ಐದೂ ಗ್ರಹಗಳಿವೆ ಎಂಬುದನ್ನು ಗಮನಿಸಿ. ನಕ್ಷೆ ಹದಿನೈದನೆಯ ತಾರೀಖಿಗೆ ಅನ್ವಯವಾಗುವುದಾದರೂ ಬುಧಗ್ರಹದ ಸ್ಥಾನದ ಹೊರತಾಗಿ ತಿಂಗಳುದ್ದಕ್ಕೂ ಬಳಸಬಹುದು. ಪಶ್ಚಿಮದಲ್ಲಿ ಥಳಗುಟ್ಟುವ ಶುಕ್ರ ಅದರ ಸನಿಹದಲ್ಲೇ ಮಂಗಳ, ನೆತ್ತಿಯ ಮೇಲೆ ಶನಿ, ಪೂರ್ವದಲ್ಲಿ ಗುರು – ಹೀಗೆ ಐದೂ ಗ್ರಹಗಳನ್ನು ಸಂಜೆಯಲ್ಲೇ ನೋಡಬಹುದಾದ ಸದವಕಾಶ ಯುಗಾದಿಯ ಉಡುಗೊರೆಯಲ್ಲದೆ ಇನ್ನೇನು?

ಶುಭ್ರ ಆಕಾಶದ ಈ ದಿನಗಳಲ್ಲಿ ನೆತ್ತಿಯ ಮೇಲೆ ಕಾಣುವ ಆಕಾಶಗಂಗೆಯನ್ನು (ಚಂದ್ರನಿಲ್ಲದಾಗ) ಸುಲಭವಾಗಿ ಗುರುತಿಸಬಹುದು. ಆಕರ್ಷಕ ಪುಂಜಗಳಾದ ಒರೈಯನ್ (ಮಹಾವ್ಯಾಧ), ಆರಿಗಾ (ವಿಜಯ ಸಾರಥಿ), ಜೆಮಿನಿ (ಮಿಥುನ), ಕ್ಯಾನಿಸ್ ಮೇಜರ್ (ಮಹಾಶ್ವಾನ) – ಇವು ಆಕಾಶಗಂಗೆಯ ಹಾಲುಹಾದಿಯಲ್ಲಿವೆ. ಮಿಥುನದ ಅಂಚಿನಲ್ಲಿ ಕಾಣುವ ಶನಿ, ಮೇಷದಲ್ಲಿರುವ ಮಂಗಳ, ಶುಕ್ರ ಇದರ ಶೋಭೆಯನ್ನು ಹೆಚ್ಚಿಸುತ್ತಿವೆ ಎನ್ನಬಹುದು. ದಕ್ಷಿಣದಲ್ಲಿ ಕನೋಪಸ್ (ಅಗಸ್ತ್ಯ) ವನ್ನೊಳಗೊಂಡ ಕರೀನಾ (ದೇವನೌಕೆ), ವೇಲಾ (ನೌಕಾಪಟ) ಇವು ಆಕಾಶಗಂಗೆಯ ಹರಿವಿನಲ್ಲಿ ಮುಂದುವರೆಯುತ್ತವೆ. ಉತ್ತರದ ಭಾಗ ಪರ್ಸಿಯುಸ್ (ಅರ್ಜುನ) ಮತ್ತು ಕಾಸಿಯೋಪಿಯಾ (ಕುಂತಿ) ಇವುಗಳ ಮೂಲಕ ವಾಯವ್ಯಕ್ಕೆ ಸಾಗುತ್ತದೆ.




ಒಂದನೆಯ ತಾರೀಖು ಶನಿಯ ಪಕ್ಕದಲ್ಲಿ ಕಾಣುವ ಚಂದ್ರ ಮರುದಿನ ಮಿಥುನರಾಶಿ ನಕ್ಷತ್ರ ಚೌಕದ ಇನ್ನೊಂದು ಅಂಚಿಗೆ ಸರಿಯುತ್ತದೆ. ಹೀಗೆ ರಾಶಿಗಳನ್ನು ಗುರುತಿಸುವಲ್ಲಿ ಚಂದ್ರ ಮಾರ್ಗದರ್ಶಿಯಾಗುತ್ತದೆ. ಐದೂ ಗ್ರಹಗಳನ್ನು ಸೇರಿಸುವ ಒಂದು ಕಾಲ್ಪನಿಕ ವೃತ್ತವನ್ನು ಕಲ್ಪಿಸಿಕೊಳ್ಳಿ. ಅದೇ ಖಗೋಳೀಯ ಹೆದ್ದಾರಿ. ಚಂದ್ರ ಮತ್ತು ಗ್ರಹಗಳನ್ನು ಈ ಹೆದ್ದಾರಿಯಲ್ಲಿ ಮಾತ್ರ ಕಾಣಬಹುದು. ಇದು ಹಾದುಹೋಗುವ ನಕ್ಷತ್ರಪುಂಜಗಳಿಗೆ 'ರಾಶಿಗಳು' ಎಂಬ ಹೆಸರೂ ಇದೆ. ಸೂರ್ಯ ಹಾದುಹೋಗುವ ಕ್ರಾಂತಿ ವೃತ್ತವೂ ಈ ಹೆದ್ದಾರಿಯ ಇನ್ನೊಂದು ಹೆಸರಷ್ಟೇ.

ಎರಡರಂದು ಶನಿಯ ಪಕ್ಕ ಕಾಣುವ ನಕ್ಷತ್ರವೇ ಪುನರ್ವಸು. ಮುಂದುವರೆದ ಚಂದ್ರ ೬ರಂದು ಗುರುಗ್ರಹವನ್ನು ದಾಟುತ್ತದೆ. ವಾಸ್ತವವಾಗಿ ಏಳರ ಬೆಳಗಿನ ಜಾವ ಹುಣ್ಣಿಮೆ. ಆದ್ದರಿಂದ ಗುರು, ಚಂದ್ರ ಎರಡೂ ಆರರ ಸಂಜೆಯಿಂದ ೭ರ ಬೆಳಗಿನ ಜಾವದವರೆಗೆ ಹೇಗೆ ದೂರಸರಿಯುತ್ತವೆ ಎಂದು ಗಮನಿಸಬಹುದು. ಫಾಲ್ಗುಣ ನಕ್ಷತ್ರವೂ ಇವೆರಡರ ಸಮೀಪವೇ ಕಾಣುತ್ತದೆ. ಆದ್ದರಿಂದ ತಿಂಗಳಿಗೆ ಫಾಲ್ಗುಣ ಎಂದೇ ಹೆಸರು. ಕ್ಷೀಣವಾದ ಈ ನಕ್ಷತ್ರವನ್ನು ಚಂದ್ರನ ಬೆಳಕಿನಲ್ಲಿ ಗುರುತಿಸಲಾಗದು. ಎರಡು ಮೂರು ದಿನಗಳ ನಂತರ ಮತ್ತೆ ಪ್ರಯತ್ನಿಸಿ, ಸಫಲರಾಗಬಹುದು.

ನಾಲ್ಕರಂದು ಇನ್ನೊಂದು ಮುಖ್ಯ ಘಟನೆಯೂ ನಡೆಯಲಿದೆ. ಅದೇ ಗುರುಗ್ರಹದ ವಿಯುತಿ. ಕಳೆದ ಆಗಸ್ಟ್‌ನಲ್ಲಿ ಮಂಗಳವನ್ನೂ, ಡಿಸೆಂಬರ್‌ನಲ್ಲಿ ಶನಿಯನ್ನೂ ಹಿಂದೆ ಹಾಕಿ ಓಡಿಬಂದಿತ್ತು ಭೂಮಿ. ಈಗ ಗುರುಗ್ರಹದ ಸರದಿ. ಭೂಮಿ – ಗುರು ದೂರ ಈಗ ಕನಿಷ್ಠ ಆದ್ದರಿಂದ ಗುರುಗ್ರಹದ ಪ್ರಕಾಶ ಗರಿಷ್ಠ ವಿಯುತಿ ಎಂದರೆ ಇದೇ ಅರ್ಥ. ಸೂರ್ಯ ಕಂತುವಾಗ ಗುರು ಉದಯಿಸುತ್ತಿರುತ್ತದೆ. ಸಂಜೆ ಸೂರ್ಯಾಸ್ತವಾಗುವಾಗ ನೀವು ದಕ್ಷಿಣಕ್ಕೆ ತಿರುಗಿ ನಿಂತಿದ್ದರೆ, ಬಲದ ದಿಗಂತದ ಅಂಚಿಗೆ ಸೂರ್ಯ, ಎಡದ ಅಂಚಿಗೆ ಗುರುಗ್ರಹ ಕಾಣುತ್ತವೆ. (ಆದರೆ ಗುರುಗ್ರಹವನ್ನು ಕಾಣಲು ನೀವು ಅರ್ಧಗಂಟೆಯಾದರೂ ಕಾಯಬೇಕು; ಸೂರ್ಯ ದಿಗಂತದಿಂದ ಕೆಳಗೆ ಸಾಗಬೇಕಷ್ಟೇ.) ದುರ್ಬೀನು, ದೂರದರ್ಶಕ


**ಡಾ॥ ಬಿ. ಎಸ್. ಶೈಲಜಾ**

ಗಳಿಂದ ಗುರುಗ್ರಹವನ್ನು ನೋಡಿ, ತೋರಿಸಲು ಒಳ್ಳೆಯ ಅವಕಾಶ. ರಾತ್ರಿ ಇಡೀ ನೋಡಲು ಸಿಗುತ್ತದೆ. ಹತ್ತು ಗಂಟೆಗಳಿಗೊಮ್ಮೆ ಅದು ಬುಗುರಿಯಂತೆ ತಿರುಗುವುದರಿಂದ ಕೆಂಪು ಮಚ್ಚೆಯನ್ನೂ ನೋಡಬಹುದು. ನಾಲ್ಕು ಉಪಗ್ರಹಗಳ ಜೂಟಾಟವನ್ನೂ ಕಾಣಬಹುದು.

ನಮ್ಮ ಮಾರ್ಗದರ್ಶಿ ಚಂದ್ರ ಯುಗಾದಿಯ ನಂತರ ಸಂಜೆಯ ಆಕಾಶಕ್ಕೆ ಹಿಂದಿರುಗುತ್ತದೆ. ೨೨ರಂದು ಬಿದಿಗೆಯ ಚಂದ್ರನನ್ನು ಹುಡುಕುವ ಸಾಹಸದಲ್ಲಿ ಸಫಲರಾದರೆ ಅದರ ಪಕ್ಕ ಬುಧಗ್ರಹವನ್ನೂ ಕಾಣುವಿರಿ. ಮುಂದುವರೆದ ಚಂದ್ರ ೨೪-೨೬ರಂದು ಮಂಗಳ, ಶುಕ್ರಗಳ ನಡುವೆ ಹಾದುಹೋಗುವ ಸಂದರ್ಭ ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ ಒದಗಿಸುತ್ತದೆ. ೨೫ರಂದು ಮಂಗಳವನ್ನು ಚಂದ್ರ ಮರೆಮಾಡುತ್ತದೆ. 'ಆಚ್ಛಾದನೆ' ಎಂಬ ಈ ಘಟನೆ ೨೬ರ ಬೆಳಗಿನ ಜಾವ ಆರಂಭವಾಗುತ್ತದೆಯಾದ್ದರಿಂದ ನೋಟ ನಮಗೆ ಲಭ್ಯವಿಲ್ಲ.

೨೮ರಂದು ಶನಿಗ್ರಹವನ್ನು ಹಾದುಹೋಗುವ ಚಂದ್ರ ೩೦ರಂದು ಪುನರ್ವಸುವನ್ನು ಸಮೀಪಿಸುತ್ತದೆ. ಅಂದು ರಾಮನವಮಿಯ ಸಂಗೀತವನ್ನು ಆಹ್ಲಾದಿಸುತ್ತಾ ತಲೆ ಎತ್ತಿ ನೋಡಿ. ಐದು ಗ್ರಹಗಳ ಪೆರೇಡ್ ಅನ್ನು ಗಮನಿಸಿ. ''ರಾಮ''ನ ನಕ್ಷತ್ರ ಪುನರ್ವಸು ಎಂದೇಕೆ ಹೇಳುತ್ತಾರೆ ಎಂಬುದನ್ನೂ ನೀವೇ ತಿಳಿದುಕೊಳ್ಳಿ.

**ಖಗೋಳ ದಿನಚರಿ**

೧ ಶನಿಗ್ರಹದ ಪಕ್ಕದಲ್ಲಿ ಚಂದ್ರ
೪ ಗುರುಗ್ರಹದ ವಿಯುತಿ (ಸೂರ್ಯ ಕಂತುವಾಗ ಗುರುಗ್ರಹದ ಉದಯ)
೭ ಹುಣ್ಣಿಮೆ (ಬೆಳಗಿನ ಜಾವ ೪ ಗಂಟೆ ೪೪ ನಿಮಿಷಕ್ಕೆ)
೧೩ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೨೦ ಚೈತ್ರ ವಿಷುವ (೧೨ ಗಂಟೆ ೧೯ ನಿಮಿಷಕ್ಕೆ)
೨೧ ಅಮಾವಾಸ್ಯೆ (ಬೆಳಗಿನ ಜಾವ ೩ ಗಂಟೆ ೧೧ ನಿಮಿಷಕ್ಕೆ)
೨೨ ಬುಧ-ಚಂದ್ರರ ನಡುವೆ ಕನಿಷ್ಠ ಕೋನ
೨೪ ಶುಕ್ರ-ಚಂದ್ರ ನಡುವೆ ಕನಿಷ್ಠ ಕೋನ
೨೬ ಮಂಗಳ-ಚಂದ್ರ ನಡುವೆ ಕನಿಷ್ಠ ಕೋನ
೨೮ ಶನಿ-ಚಂದ್ರ ನಡುವೆ ಕನಿಷ್ಠ ಕೋನ
೨೯ ಬುಧಗ್ರಹದ ಗರಿಷ್ಠ ಕೋನೋನ್ನತಿ (ಗುರುತಿಸುವುದು ಸುಲಭ) ಶುಕ್ರಗ್ರಹದ ಗರಿಷ್ಠ ಕೋನೋನ್ನತಿ

ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧



## ಇಳೆ-ಮಳೆ

- ೧ -

ಅಲ್ಲೇ.... ಇಲ್ಲೇ... ಆಸುಪಾಸಿನಲ್ಲೇ
ಗಿರುಕಿ ಹೊಡೆಸಿದ್ದು,
ಕಣ್ಣು ಮಿಟುಕಿಸಿ ಪಿಸುದನಿಯಲ್ಲೇ
ಉದ್ರೇಕಿಸಿದ್ದು,
ನಿಶ್ಚಲ ನಿರ್ವಾತದಲ್ಲಿಯೂ ತರಂಗಗಳೆಬ್ಬಿಸಿದ್ದು,
ನಿರಂತರವಾಗಿ-ನಿರಂತರವಾಗಿ
ಅಂತರ ಸೃಜಿಸಿ, ಕಾಡಿಸಿ-ಪೀಡಿಸಿದ್ದು,
ಮುತ್ತನೀಯಲು ಬಂದು ಮೆಲ್ಲನೆ
ಹಾಗೆಯೇ ಜಾರಿ ಹೋಗಿದ್ದು,
ಕಂಡು-ಕಂಡು ರೋಸಿ ಹೋಗಿದ್ದೆ.
ಆತನ ಆಲಿಂಗನದ ತಂಪಿಗೆ ತಪಿಸಿದ್ದೆ.
ಕಣ್ಣೋಟದ ಕಾಮದ ವಾಸನೆ
ಮುಗ್ಧವಾಗಿಸಿ ಮೈಮರೆಸುವ
ಮಹಾಮಂತ್ರವ ಬಯಸಿದ್ದೆ.
ಅವನದೇ ಧ್ಯಾನ! ಸದಾ ಚಿಂತೆ!
ಕತ್ತಲೆಯೊಳು ಬೆತ್ತಲೆಯಾಗಿ ಆಡುವ
ಕನಸ ಕಂಡಿದ್ದೆ.
ಹಗಲಿರಲೂ ಅನಿಮಿಷವಾಗಿ ಪರಿತಪಿಸಿದ್ದೆ.
ಇನಿಯನಿಲ್ಲ; ಬಾರಲೂ ಇಲ್ಲ.

- ೨ -

ಮೆಲ್ಲ ಮೆಲ್ಲನೆ ತರಗೆಲೆಗಳ ಮೇಲೆ
ಕತ್ತಲ ರಾತ್ರಿಯೊಳು ಪಟ-ಪಟ ಸದ್ದು
ಯಾರದೋ ಹೆಜ್ಜೆಗುರುತು; ಸಿಕ್ಕೀತು.
ಬಂದವನು ಆತನೇ!
ಮನದ ತರಂಗಗಳಿಗೆ ಎಲ್ಲೆಯಿಲ್ಲ
ಝುಳಪಿಸಿತು, ಕಂಪಿಸಿತು, ನಡುಗಿತು.
ಪತಂಗವಾಗಿ ನೂರು ಬಣ್ಣವಾಗಿ ಹಾರಿತು!
ಆತನಿಗೆ ನಡೆದು ಬಂದ ದಣಿವಿಲ್ಲ,
ಆತುರದ ಬಿಸಿ ಉಸಿರಿಗೆ ಬಾಯಾರಲಿಲ್ಲ.
ಸೇರಲೆತ್ನಿಸಿದ ಕಣ್ಣು-ತುಟಿಯಂಚಿನ ನಗು
ಮಣ್ಣು-ಮುಗಿಲಿಗೆ ಸಾವಿರ-ಸಾವಿರ ಗರಿ!

- ೩ -

ಕತ್ತಲು ಕಳೆಯಿತು – ಕತ್ತಲಾಯಿತು.
ಕತ್ತಲು ಬಯಲಾಯಿತು – ಬೆತ್ತಲಾಯಿತು.
ದ್ವೈತವೂ ಅದ್ವೈತವಾಯಿತು.
ಆಲಿಂಗನದ ಅನುಭವ ಮತ್ತು ತರಿಸಿತು.
ರಾತ್ರಿಯಿಡಿಯ ನಲ್ಲೆಯಾಟದೊಳು
ಅದೆಷ್ಟು ತೊಯ್ದೆ-ಅದೆಷ್ಟು ಮಿಂದೆ!
ನೆನೆನೆನೆದು ಮುದ್ದೆಯಾದೆ.
ಕತ್ತಲೆಯೊಳಗಿನ ರತಿಯಾಟ; ಹಾಗೆಯೇ
ಕತ್ತಲೆಯ ಕಲೆಗಾರಿಕೆಗೆ ನಿಶ್ಚಿಂತೆಯಾದೆ.

- ೪ -

ಮುಂಜಾನೆಯ ಮೊದಲ ಕಿರಣಕ್ಕೆ
ಕಣ್ಣು ಬಿಟ್ಟೆ!
ಗಿಡಗಂಟಿಗಳೆಷ್ಟು ಉಲ್ಲಾಸ
ಆ ವಿಶಾಲ ಬಯಲಿನಲ್ಲಿ.
ತೊಟ್ಟಿಕ್ಕುತ್ತಿದ್ದವು ಹನಿಗಳು ಆಗತಾನೇ
ಸ್ನಾನವಾಡಿದ್ದ ನನ್ನ ಕೇಶಗಳಿಂದ
ನಾಚಿಕೆಯ ಕೆಂಪು ಅರಳಿದ ಮುಖದಿಂದ
ಪ್ರಶಾಂತ ಆಗಸ-ಶಾಂತಭೂಮಿ ಹಾಗೆಯೇ
ಅಲೆಗಳಿಲ್ಲದ ನನ್ನ ಮನಸ್ಸು.

ಸಾಯಾಬ್ ಅಹಮದ್
ಕನ್ನಡ ಅಧ್ಯಾಪಕ, ಪದವಿಪೂರ್ವ ಕಾಲೇಜು
ಬಾಗೇಪಲ್ಲಿ - ೫೬೧ ೨೦೭, ಕೋಲಾರ ಜಿಲ್ಲೆ



ಡಾ|| ರಹಮತ್ ತರೀಕೆರೆ

# ಪಾಠವಿನ್ನೂ ಬಾಕಿಯಿರುವಾಗಲೇ ತರಗತಿ ಬಿಟ್ಟುಹೋದ ಪ್ರೊಫೆಸರ್

ಕರ್ನಾಟಕದಲ್ಲಿ 'ಪ್ರೊಫೆಸರ್' ಎಂಬ ವಿಶೇಷಣದಲ್ಲಿ ಎಂ. ಡಿ. ನಂಜುಂಡಸ್ವಾಮಿಯವರಷ್ಟು (೧೯೩೬-೨೦೦೪) ಯಾರೂ ಕರೆಸಿಕೊಂಡಿಲ್ಲವೆನಿಸುತ್ತದೆ. ಕಾನೂನು ಕಾಲೇಜುಗಳಲ್ಲಿ ಪಾಠ ಹೇಳಿದ್ದಕ್ಕೆ ಅವರನ್ನು ಪ್ರೊಫೆಸರ್ ಎಂದು ಕರೆಯುತ್ತಿದ್ದರು. ತಮ್ಮಲ್ಲಿದ್ದ ವಿದ್ವತ್ತು, ತೀಕ್ಷ್ಣವಾದ ವಿಶ್ಲೇಷಣಾ ಪ್ರತಿಭೆ, ಸೈದ್ಧಾಂತಿಕ ಖಚಿತತೆ ಮತ್ತು ಬದ್ಧತೆಗಳನ್ನು ಬಳಸಿ, ಅವರು ಪ್ರಸಿದ್ಧ ಲಾಯರಾಗಿ ಇರಬಹುದಿತ್ತು. ಅಥವಾ ಯಾವುದಾದರೂ ವಿಶ್ವವಿದ್ಯಾಲಯದಲ್ಲಿ ಪ್ರೊಫೆಸರರಾಗಿ ಇರಬಹುದಿತ್ತು. ಅದಕ್ಕೆ ಬದಲಾಗಿ ಅವರು ನಾಡಿನ ತುಂಬ ತಿರುಗಾಟ ಮಾಡುವುದು, ಸರಕಾರಕ್ಕೆ ಬೆದರಿಸುವುದು, ಸಾಹಿತಿಗಳ ಚಿಂತನೆಯ ಪೊಳ್ಳುತನವನ್ನು ತೋರುವುದು, ಮುಖಕ್ಕೆ ಹೊಡೆದಂತೆ ನೇರವಾಗಿ ಮಾತಾಡುವುದು, ತರುಣರನ್ನು ಚಳುವಳಿಗೆ ಪ್ರೇರಿಸುವುದು, ನಾಡನ್ನು ಕಟ್ಟುವ ಕನಸು ಕಾಣುವುದು, ಬಹುರಾಷ್ಟ್ರೀಯ ಕಂಪನಿಗಳ ಮೇಲೆ ದಾಳಿಗಳನ್ನು ಆಯೋಜಿಸುವುದು, ಮುಂತಾದ ಕೆಲಸಗಳನ್ನು ಮಾಡುತ್ತಿದ್ದರು. ಇವು ಯಾವುವೂ ನಮ್ಮ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಲ್ಲಿ ಸಾಮಾನ್ಯವಾಗಿ ಕಾಣುವ ಲಕ್ಷಣಗಳೇ ಅಲ್ಲ. ಅವರ ತರಗತಿಗಳಲ್ಲಿ ಕೂರದೆ ಸಾವಿರಾರು ಜನ ಪರೋಕ್ಷವಾಗಿ ಅವರ ಶಿಷ್ಯರಾಗಿದ್ದರು. ನಾನೂ ಅವರಲ್ಲಿ ಒಬ್ಬ.

ನಾನು ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದ ಹೊಸತರಲ್ಲಿ, ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆಯಲ್ಲಿ ಕಾರ್ಗಿಲ್ ಬೀಜದ ಕಂಪನಿಯನ್ನು ರೈತರು ಒಡೆದುಹಾಕಿದರು. ಪಕ್ಕದ ಕೊಪ್ಪಳದ ಬಳಿ ಹಿರೇಬಗನಾಳದಲ್ಲಿ ರೈತರ ಮೇಲೆ ಹಲ್ಲೆ ಆದಾಗ ನಂಜುಂಡಸ್ವಾಮಿಯವರು ಬಂದು ಸಮಾವೇಶ ಮಾಡಿದರು. ಹಡಗಲಿ ತಾಲೂಕಿನಲ್ಲಿ ನಪುಂಸಕ ಬೀಜದಿಂದ ಬೆಳೆದ ಹತ್ತಿಯ ಹೊಲಕ್ಕೆ ಬಂದು ನಂಜುಂಡಸ್ವಾಮಿಯವರು ಗಿಡಗಳನ್ನು ಸುಟ್ಟುಹಾಕಿದರು. ಮಾನವಿಯಲ್ಲಿ ಚುನಾವಣೆಗೆ ನಿಂತು ಸೋತರು. ಹೀಗೆ ನಂಜುಂಡಸ್ವಾಮಿಯವರ ಕಾರ್ಯಕ್ರಮಗಳು ಹೊಸಪೇಟೆಯ ಸುತ್ತಮುತ್ತ ಬಹಳ ನಡೆಯುತ್ತಿದ್ದವು. ಅವರನ್ನು ಬೆಂಬಲಿಸಿ, ವಾಚಕರವಾಣಿ ಪತ್ರ ಬರೆಯುವುದು ಇತ್ಯಾದಿ ರೀತಿಯಲ್ಲಿ ನನ್ನಂಥವರು ಬೆಂಬಲವನ್ನು ಸೂಚಿಸುತ್ತಿದ್ದೆವು.

ರೈತರು ಆತ್ಮಹತ್ಯೆಯನ್ನು ಶುರು ಮಾಡಿಕೊಂಡ ಮೇಲೆ ಅವರಿಗೆ ಆತ್ಮಸ್ಥೈರ್ಯ ತುಂಬುವ ಕಾರ್ಯಕ್ರಮವನ್ನು ರೈತಸಂಘವು ಹೊಸಪೇಟೆಯಲ್ಲಿ ಹಮ್ಮಿಕೊಂಡಿತು. "ಆತ್ಮಹತ್ಯೆ ಮಾಡಿಕೊಳ್ಳಬೇಕಾದುದು ರೈತರಲ್ಲ, ಸರಕಾರ" ಎಂಬ ಘೋಷಣೆಯ ಭಿತ್ತಿಪತ್ರಗಳು ಹೊಸಪೇಟೆ ತುಂಬ ಕಾಣಸಿಕೊಂಡವು. ಆ ಪೋಸ್ಟರ್ ವಿಶಿಷ್ಟವಾಗಿತ್ತು. ಬಡ ರೈತರೆಲ್ಲ ಸೇರಿ ಒಬ್ಬ ರಾಜಕಾರಣಿಯನ್ನು ನೇಣಿಗೆ ಹಾಕಿರುವ ಒಂದು ಚಿತ್ರ. ಮೂಲೆಯಲ್ಲಿ ನಿಂತು ನೋಡುತ್ತಿರುವ ಗಾಂಧೀಜಿ. ನಂಜುಂಡಸ್ವಾಮಿಯವರು ಹೊಸಪೇಟೆಯ ರೈತಸಮಾವೇಶದ ಸಿದ್ಧತೆಗಾಗಿ ಒಂದು ವಾರ ಮುಂಚೆ ಬಂದು ಅತಿಥಿಗೃಹದಲ್ಲಿ ಬೀಡುಬಿಟ್ಟಿದ್ದರು. ಬಾಬಾಬುಡನ್‌ಗಿರಿಯ ಮೇಲೆ ನಾನು ಬರೆದ ಲೇಖನವನ್ನು ಓದಿದ್ದ ಅವರು ನನ್ನನ್ನು ನೋಡಲು ಬಯಸಿದರು. (ಇದಕ್ಕೆ ರೈತಸಂಘದ ಉಪಾಧ್ಯಕ್ಷರೂ ನನಗೆ ಆಪ್ತರೂ ಆದ ಶೇಷಾರೆಡ್ಡಿಯವರು ಕಾರಣವಾಗಿರಬಹುದು). ಫೋನು ಮಾಡಿ "ನಿಮ್ಮ ಲೇಖನ ಓದ್ತಾ ಇದ್ದೆ. ಚರ್ಚೆ ಮಾಡೋಣ. ಸಂಜೆವರೆಗೆ ಬಿಡುವಾಗಿದ್ದೇನೆ. ಇವತ್ತು ಮಧ್ಯಾಹ್ನ ಊಟಕ್ಕೆ ನನ್ನ ಜತೆ ಬರ್ತೀರಾ"? ಎಂದು ಕೇಳಿದರು. ನಾನೆಂದೆ: "ಸಾರ್, ಬರ್ತೇನೆ. ನೀವು ನಮ್ಮ ಪತ್ರಿಕೆಗೆ ಒಂದು ಸಂದರ್ಶನ ಕೊಡಲು ಸಾಧ್ಯವೇ ?" "ಓಹೋ ಅದಕ್ಕೇನು? ಎಲ್ಲ ಸಿದ್ಧಮಾಡಿಕೊಂಡೇ ಬನ್ನಿ" ಎಂದರು.

ನಾನು ಹೋದಾಗ ಅವರು ರೈತಸಂಘದ ಹಸಿರುಸೇನೆಯ ಕಾರ್ಯಕರ್ತರ ಜತೆ ಎಷ್ಟು ಎತ್ತರ ವೇದಿಕೆ ಹಾಕಿಸಬೇಕು, ಪತ್ರಕರ್ತರನ್ನು ಎಲ್ಲಿ ಕೂರಿಸಬೇಕು ಎಂದೆಲ್ಲ ಪ್ಲಾನ್ ಮಾಡಿಸುತ್ತಿದ್ದರು. ಅವರು ಸಿಗರೇಟು ಸೇದುತ್ತ ದಿವಾನಖಾನೆಯಲ್ಲಿ ಕಾಲುಮೇಲೆ ಕಾಲುಹಾಕಿಕೊಂಡು ಮಾತಾಡುತ್ತಿದ್ದ ದೃಶ್ಯವು ಅವರ ನಾಯಕತ್ವವನ್ನೂ ದರ್ಪದ ಯಜಮಾನಿಕೆಯನ್ನೂ ಸೂಚಿಸುತ್ತಿತ್ತು. ಈ ದೈಹಿಕ ಭಾಷೆ ರೈತಸಂಘದಲ್ಲಿ ಇನ್ನೊಬ್ಬ ನಾಯಕ ಎಂದು ಹೇಳಲು ಯಾರೂ ಇಲ್ಲದಂತೆ ಆಲದ ಮರದಂತೆ ತಾವೇ ಆವರಿಸಿಕೊಂಡು ನಂಜುಂಡಸ್ವಾಮಿಯವರು ಬೆಳೆದಿರುವುದಕ್ಕೆ ಸಂಕೇತವಾಗಿತ್ತು. ಅಷ್ಟರಲ್ಲಿ ಅವರ ಮೊಬೈಲಿಗೆ ಒಂದು ಕರೆ ಬಂತು.

ಅದು ರೈತಸಂಘದ ಪದಾಧಿಕಾರಿಯದು. ಹಿಂದಿನ ದಿನವೇ ಬರಬೇಕಾಗಿದ್ದ ಆತ ಇನ್ನೂ ಬರದಿದ್ದಕ್ಕೆ ಸ್ವಾಮಿಯವರು ಸಿಟ್ಟಾಗಿದ್ದರು. ''ನೋಡಿ... ಇವರೆ, ನೀವು ಸಂಘದ ಜವಾಬ್ದಾರಿ ಸ್ಥಾನದಲ್ಲಿದ್ದು, ನಮಗಿಂತ ಮುಂಚೆ ಬಂದು ಕಾರ್ಯಕ್ರಮ ಸಂಘಟಿಸಬೇಕಾದವರು. ಅಧ್ಯಕ್ಷನಾಗಿ ನಾನು ನಿಮ್ಮನ್ನು ಎಲ್ಲಿದ್ದೀರಿ ಎಂದು ಹುಡುಕಬೇಕಾಗಿದೆ. ಇನ್ನೂ ಇಲ್ಲಿದ್ದೇನೆ ಅಲ್ಲಿದ್ದೇನೆ ಅಂತ ಫೋನು ಮಾಡುತ್ತಿದ್ದೀರಿ. ಇವತ್ತು ಸಂಜೆಯೊಳಗೆ ವಸೂಲಿಯಾದ ಹಣದೊಂದಿಗೆ ಬಾರದಿದ್ದರೆ, ನಿಮ್ಮನ್ನು ಅಲ್ಲಿಂದಲೇ ಊರಿಗೆ ವಾಪಾಸು ಕಳಿಸಬೇಕಾಗುತ್ತೆ'' ಎಂದರು. ನನಗೆ ಅನಿಸಿತು. ಹೀಗೆ ಕಠೋರವಾಗಿ ತೀಕ್ಷ್ಣವಾಗಿ ಮಾತಾಡುವ ನಂಜುಂಡಸ್ವಾಮಿಯವರ ಸ್ವಭಾವವೇ ಕಡಿದಾಳು ಶಾಮಣ್ಣನವರಂತಹ ಸಂಗಾತಿಗಳೂ ದೂರವಾಗಲು ಕಾರಣವಾಗಿರಬಹುದು ಅನಿಸಿತು. ಇದು ನಂಜುಂಡಸ್ವಾಮಿಯವರ ಬದಲಿಸಲಾಗದ ಗುಣವಿರಬೇಕು. ಇಷ್ಟೊಂದು ದರ್ಪದ ವ್ಯಕ್ತಿಯು ತಮ್ಮ ಸುತ್ತಲಿನ ಹಲವಾರು ತರುಣರ ಮೇಲೆ, ಲೇಖಕರ ಮೇಲೆ, ತಮ್ಮ ಸಮಾಜವಾದಿ ಚಿಂತನೆಗಳ ಮೂಲಕ ಹೇಗೆ ಪ್ರಭಾವ ಬೀರಲು ಸಾಧ್ಯವಾಯಿತು ಎಂದು ನಾನು ಸೋಜಿಗಪಡುತ್ತಿದ್ದೆ.

ಕಾರ್ಯಕರ್ತರೆಲ್ಲ ಹೋದಬಳಿಕ ಊಟಕ್ಕೆ ಕುಳಿತೆವು. ಮಾತಿಗಾರಂಭಿಸಿದರು. ''ಈ ಬಾಬಾಬುಡನ್‌ಗಿರಿಯಲ್ಲಿ ನೀವೆಲ್ಲ ಸೇರಿ ಚಳುವಳಿ ಮಾಡ್ತಾ ಇದ್ದೀರಲ್ಲ, ಯುದ್ಧತಂತ್ರ ಬದಲಿಸಲು ಸಾಧ್ಯವೆ ?'' ಎಂದರು. ''ಹೇಗೆ ?'' ಎಂದೆ. ''ಅವರು ಅದು ನಮಗೆ ಬೇಕು ಅಂತ ಬೊಬ್ಬೆ ಹಾಕ್ತಾ ಇದ್ದಾರಲ್ಲ, ತಗೊಳ್ಳಿ ಅಂತ ಕೊಟ್ಟುಬಿಟ್ರೆ ಹೇಗೆ ?'' ಎಂದು ಕೇಳಿದರು. ನಾನು ಅವಾಕ್ಕಾದೆ. ''ಸಾರ್, ಕೊಟ್ಟರೆ ಜಗಳ ಮುಗಿಯುತ್ತೆ ಅಂತ ಅನಿಸುತ್ತಾ? ಜನಸಮುದಾಯದ ಆ ಪರಂಪರೆಯನ್ನು ತಮ್ಮ ರಾಜಕಾರಣಕ್ಕೆ ಅವರು ಬಳಸುತ್ತಿದ್ದಾರೆ. ಅದು ತಪ್ಪು ಎಂದು ಹೇಳಿ, ಸೈದ್ಧಾಂತಿಕ ಹೋರಾಟ ಮಾಡಬಹುದು. ಇಷ್ಟಕ್ಕೂ ಅದನ್ನು ಅವರಿಗೆ ಕೊಡಲು ನಾವು ಯಾರು ? ಈ ಯುದ್ಧತಂತ್ರದಿಂದ ನಾವು ಕೋಮುವಾದದ ವಿರುದ್ಧ ಚಳುವಳಿ ಮಾಡಬಹುದೇ ?'' ಎಂದು ಕೇಳಿದೆ. ''ಶತ್ರುಗಳು ನಿರೀಕ್ಷೆ ಮಾಡದ ರೀತಿಯಲ್ಲಿ ಪ್ರತಿಕ್ರಿಯಿಸಬೇಕು. ಅವರು ನಿರೀಕ್ಷೆ ಮಾಡೋ ತರಹ ಪ್ರತಿಕ್ರಿಯಿಸ್ತಾ ಅವರಿಗೆ ಲಾಭ ಕೊಡ್ತಾ ಇದ್ದೀವಿ'', ಎಂದು ಹೇಳಿದರು. ಊಟವಾದ ಬಳಿಕ ಸಿಗರೇಟು ಸೇದುತ್ತಾ, ನಾನು ಕೇಳಿದ ಪ್ರಶ್ನೆಗಳಿಗೆ ಮೂರು ಗಂಟೆ ಮಾತಾಡಿದರು. ಕರ್ನಾಟಕದ ಹಾಗೂ ಜಗತ್ತಿನ ಜ್ವಲಂತ ಸಮಸ್ಯೆಗಳಿಗೆ ಉತ್ತರಿಸುತ್ತಾ ಹೋದರು. ಕೆಣಕುವಂತಹ ಪ್ರಶ್ನೆ ಕೇಳಿದಾಗಲೂ ಸಹನೆ ಕಳೆದುಕೊಳ್ಳಲಿಲ್ಲ. ತೀಕ್ಷ್ಣವಾಗಿ ಖಚಿತವಾಗಿ ಮಾತಾಡಿದರು. ಅದರ ಕೆಲವು ಭಾಗಗಳನ್ನು ಇಲ್ಲಿ ಕೊಟ್ಟಿದೆ.

**ರಹಮತ್ ತರೀಕೆರೆ :** ನೀವು ದೊಡ್ಡ ಫ್ಯೂಡಲ್ ಕುಟುಂಬದಿಂದ ಬಂದವರು ಅಂತ ಕೇಳಿದ್ದೇನೆ.

**ಎಂ. ಡಿ. ನಂಜುಂಡಸ್ವಾಮಿ :** ನಮ್ಮ ತಂದೆಯವರು ಮಹಾಂತದೇವರು ಅಂತ. ಮೊದಲನೇ ಪೀಳಿಗೆ ವಕೀಲರು. ೨೬ ವರ್ಷ ಶಾಸಕರಾಗಿದ್ದರು. ಮೈಸೂರು ಜಿಲ್ಲೆಯಲ್ಲಿ. ಮತ್ತೆ 'ಫ್ಯೂಡಲ್' ಅಂತ ಶಬ್ದ ಉಪಯೋಗಿಸಿದಿರಲ್ಲ, ಅದು ಕೇವಲ ಆಸ್ತಿಗೆ ಸಂಬಂಧಪಟ್ಟಂತೆ ಅನ್ವಯಿಸುತ್ತೆ. ನಮ್ಮ ತಾತನಿಗೆ ಸಾವಿರ ಎಕರೆ ಮೇಲಿತ್ತು ಭೂಮಿ. ಆ ಕಾರಣ ನಾನು ಹುಟ್ತಾನೇ ಒಬ್ಬ ಶಾಸಕನ ಮಗ ಮತ್ತು ಫ್ಯೂಡಲ್ ಲಾರ್ಡನ ಮೊಮ್ಮಗ. (ನಗು) ಆಸ್ತಿ ದೃಷ್ಟಿಯಿಂದ ಫ್ಯೂಡಲ್ ಅಂತ ಕರೀಬಹುದೇ ಹೊರತು, ತಾತನ ವಿಚಾರಗಳು ತಂದೆಯ ವಿಚಾರಗಳು ಈ ಆಧಾರದ ಮೇಲೆ ಫ್ಯೂಡಲ್ ಅಂತ ಕರೆಯಕ್ಕೆ ಸಾಧ್ಯಾನೇ ಇಲ್ಲ. ಕಾರಣ, ನಮ್ಮ ಆ ಭಾಗದ ಜನ ಮೂಲತಃ ಉತ್ತರ ಕರ್ನಾಟಕದಿಂದ ಬಂದವರು. ಕಲ್ಯಾಣಕ್ರಾಂತಿ ಆದನಂತರ ಅಲ್ಲಿ ಗೊಂದಲಗಳಿದ್ದಾಗ ಬಂದವರು ಅಂತ ದಾಖಲೆಗಳಿವೆ. ಎಷ್ಟು ವರ್ಷ ಹಿಂದೆ ಬಂದವರೋ ಗೊತ್ತಿಲ್ಲ. ಆಗ ಭೂಮಿ ಕಷ್ಟದ ಆಸ್ತಿ ಆಗಿರಲಿಲ್ಲ. ಆ ಒಂದು ದೃಷ್ಟಿಯಿಂದ ಫ್ಯೂಡಲ್ ಅಂತ ಕಾಣಸಬಹುದು. ಅಷ್ಟೇ ಹೊರತು, ಅವರು ಯಾವ ರೀತಿ ಜೀವನ ನಡೆಸಿದರು, ಏನು ವಿಚಾರ ಇಟ್ಟುಕೊಂಡಿದ್ರು, ಇದನ್ನೆಲ್ಲ ನೋಡಿದರೆ, ಇನ್ನೂ ಶರಣ ಚಳುವಳಿಯ ಅಂಶಗಳು ಅವರಲ್ಲಿದ್ದವು ಅಂತ ಅನಿಸುತ್ತೆ....

**ರ :** ಶರಣ ಚಳುವಳಿಯ ಅಂಶಗಳು ಅಂದರೆ ?

**ನಂ :** ಅಂದರೆ, ಹಳ್ಳಿ ಒಳಗಿನ ಸಂಬಂಧಗಳು, ಮತ್ತೆ ಜಾತಿಪದ್ಧತಿ ಬಗ್ಗೆ ಇದ್ದಂತಹ ಅವರ ಧೋರಣೆಗಳು, ಮತ್ತೆ ಈ ವ್ಯವಸ್ಥೆ ಬಗ್ಗೆ ಇದ್ದಂತಹ ಸಿಟ್ಟುಗಳು, ಹಳ್ಳಿ ಒಳಗೇನೆ ನಡೆಯೋವಂಥ ಕುತಂತ್ರಗಳನ್ನ ನಾಶ ಮಾಡೋವಂಥ ಘಟನೆಗಳು ಇವೆಲ್ಲಾನು.

**ರ :** ಇವೆಲ್ಲ ನೈತಿಕ ಉದಾರವಾದಿ ಗುಣಗಳೋ ಅಥವಾ ಚಳುವಳಿಯಿಂದ ಬಂದಂತಹವಾಗಿದ್ದವೋ ?

**ನಂ :** ಒಂದು ಚಳುವಳಿಯ ಭಾಗವಾದ ಮೇಲೆ, ವ್ಯಕ್ತಿಯ ಗುಣಗಳು ಚಳುವಳಿಗೆ ವರ್ಗಾವಣೆಯಾಗೋದು, ಚಳುವಳಿಯ ಗುಣಗಳು ವ್ಯಕ್ತಿಗೆ ವರ್ಗಾವಣೆಯಾಗೋದು ನಿರಂತರವಾಗಿ ನಡೀತಾ ಇರ್ತದೆ. ಅದರ ಆಧಾರದ ಮೇಲೆ ಚಳುವಳಿ ಯಶಸ್ಸು ಗಳಿಸೋದು ಅಥವಾ ಸೋಲೋದು ಅವಲಂಬಿತವಾಗಿರುತ್ತೆ. ಆ ಕಾರಣಾನೇ ಒಂದು ಚಾರಿತ್ರ್ಯದ ದೃಢತೆ ಚಳುವಳಿಯಲ್ಲಿರೋ ವ್ಯಕ್ತಿಗಳಲ್ಲೂ ಇರೋದು ಬಹಳ ಮುಖ್ಯ. ಅದನ್ನ ಕಳಕೊಂಡಂಥ ವರು ಹೆಚ್ಚಿಗೆ ಸಂಖ್ಯೆ ಆದಾಗ ಆ ಚಳುವಳಿ ನಾಶವಾಗಿಹೋಗುತ್ತೆ.

**ರ :** ೧೯೬೦ರ ದಶಕದ ಮೈಸೂರು ಕರ್ನಾಟಕದ ಸಾಂಸ್ಕೃತಿಕ ರಾಜಕಾರಣದ ಚಟುವಟಿಕೆಗಳಲ್ಲಿ ನಿಮ್ಮ ಹೆಸರ ಜತೆ ತೇಜಸ್ವಿ, ಲಂಕೇಶ್, ಅನಂತಮೂರ್ತಿ, ಅಡಿಗರು, ಕಡಿದಾಳು ಶಾಮಣ್ಣ – ಹೀಗೆ ಅನೇಕ ಹೆಸರುಗಳ ಪ್ರಸ್ತಾಪವಾಗುತ್ತವೆ. ನೀವು ರೈತಾಪಿ ಚಿಂತನೆಗೆ ಹೊರಳಲು ಏನು ಕಾರಣ ?

**ನಂ :** ನನಗೂ ತೇಜಸ್ವಿಗೂ ಪರಿಚಯ ಸುಮಾರು ೧೯೬೦ನೇ ಇಸ್ವಿಯಿಂದ. ಅಷ್ಟೊತ್ತಿಗಾಗಲೇ ನಾನು ಎಲ್‌ಎಲ್‌ಎಂ ಮುಗಿಸಿದ್ದೆ, ಕರ್ನಾಟಕ ಯೂನಿವರ್ಸಿಟಿಯಿಂದ. ಮುಗಿಸಿ ಜರ್ಮನಿಗೆ ಹೋಗಿಬಿಟ್ಟೆ ೪ ವರ್ಷ. ಅಲ್ಲಿಂದ ವಾಪಾಸು ಬರೋವಾಗಲೇನೆ 'ರೈತಸಂಘಟನೆ ಮಾಡಬೇಕು, ವ್ಯವಸಾಯನೇ ಮಾಡಬೇಕು' ಅಂತಲೇ ತೀರ್ಮಾನ ಮಾಡಿಕೊಂಡು ಬಂದಿದ್ದು. ಅಷ್ಟರಲ್ಲಿ ತೇಜಸ್ವಿಯವರು ವ್ಯವಸಾಯ ಶುರುಮಾಡಿದ್ದರು. ಮತ್ತೆ ಸುಂದರೇಶ್, ನಮ್ಮ ರೈತಸಂಘದ ಸಂಸ್ಥಾಪಕ ಕಾರ್ಯದರ್ಶಿಯಾಗಿದ್ದರಲ್ಲ ಅವರೂ ವ್ಯವಸಾಯ ಶುರುಮಾಡಿದ್ದರು. ೧೯೬೫ರಲ್ಲಿ ನಾನು ವ್ಯವಸಾಯ ಶುರುಮಾಡಿದೆ.

**ರ :** ನೀವು ಮೂಲತಃ ಕಾನೂನಿನ ವಿದ್ಯಾರ್ಥಿ. ಈ ರೈತಪರ ಚಿಂತನೆಗೆ ಜರ್ಮನಿಯಲ್ಲಿ ಎಂಥ ಪ್ರೇರಣೆ ಸಿಕ್ತು ?

**ನಂ :** ಕಾನೂನಲ್ಲಿ ನಾನು ಇಂಟರ್‌ನ್ಯಾಶನಲ್ ಲಾ ಅಂಡ್ ಇಂಟರ್‌ನ್ಯಾಶನಲ್ ರಿಲೇಶನ್ಸ್ ಅಧ್ಯಯನ ಮಾಡಿದೋನು. ಅದರಲ್ಲಿ ಸಾಮ್ರಾಜ್ಯಶಾಹಿ ಮಾಡ್ತಾ ಇರೋ ಜಾಗತಿಕ ಶೋಷಣೆ, ಇವೆಲ್ಲ ಸ್ಪಷ್ಟವಾಗಿ ಗೊತ್ತಾಗಲಿಕ್ಕೆ ಶುರುವಾಯಿತು. ಆಮೇಲೆ ಸ್ವಾತಂತ್ರ್ಯ ಬಂದ ಮೇಲೂ ಯಾವ ರೀತಿ ಕಲೋನಿಯಲಿಜಂ ಮುಂದುವರಿಸೋದರಲ್ಲಿ ಬಿಳಿ ರಾಷ್ಟ್ರಗಳು ಯಶಸ್ವಿಯಾಗಿದಾವೆ ಅನ್ನೋದು ಗೊತ್ತಾಯಿತು.

**ರ :** ಜರ್ಮನಿ ಕೂಡ ಒಂದು ಬಿಳೀ ರಾಷ್ಟ್ರವೆ. ಅಲ್ಲಿನ ಕಾನೂನು ಪಠ್ಯಕ್ರಮದಲ್ಲಿ ಇವೆಲ್ಲ ಇದ್ದವಾ ?

**ನಂ :** ಯು ಸೀ, ಇಂಟರ್‌ನ್ಯಾಶನಲ್ ಲಾದಲ್ಲಿ ಜರ್ಮನಿ ಪಠ್ಯಕ್ರಮ ಅಂತ ಏನಿಲ್ಲ. ಎಲ್ಲಾ ದೇಶದಲ್ಲೂ ಒಂದೇ ಪಠ್ಯಕ್ರಮ ಇರಬೇಕಾಗುತ್ತೆ. ಜತೆಗೆ ನನ್ನ ಸುತ್ತ ಇದ್ದ ವಾತಾವರಣ ಕೂಡ ಇದಕ್ಕೆ ಕಾರಣವಾಯಿತು. ನಾನು ಬ್ರಾಹ್ಮಣೇತರ ಚಳುವಳಿ ನಡೀತಿದ್ದಂತಹ ವಾತಾವರಣದಲ್ಲಿ ಹುಟ್ಟಿದೆ. ಆನಂತರ ಸ್ವಾತಂತ್ರ್ಯ ಬಂದ ಮೇಲೆ, ಕಿಸಾನ್ ಮಜದೂರ್ ಪ್ರಜಾ ಪಾರ್ಟಿ ಸದಸ್ಯರು ನಮ್ಮ ತಂದೆ. ಆನಂತರ ಅದು ಪ್ರಜಾ ಸೋಶಲಿಸ್ಟ್ ಪಾರ್ಟಿ ಆಯಿತು. ಆಗಲೂ ನಮ್ಮ ತಂದೆ ಆ ಪಾರ್ಟಿ ಸದಸ್ಯರು. ಹಾಗಾಗಿ ಸಮಾಜವಾದಿ ವಾತಾವರಣದಲ್ಲೆ ಬೆಳೆದೆ.

**ರ :** ವಿದ್ಯಾಭ್ಯಾಸಕ್ಕೆ ಸಾಮಾನ್ಯವಾಗಿ ಇಂಗ್ಲೆಂಡಿಗೆ ಹೋಗ್ತಾರೆ. ಆದರೆ ನೀವು ಜರ್ಮನಿ ಆರಿಸಿಕೊಂಡಿರಿ !

**ನಂ :** ಇಲ್ಲ, ವಿದ್ಯಾಭ್ಯಾಸಕ್ಕೆ ಅಂತ ಹೋಗಿದ್ದು, ಜರ್ಮನಿ, ಫ್ರಾನ್ಸ್ ಮತ್ತು ಹಾಲೆಂಡ್‌ಗೆ. ಬ್ರಿಟಿಷರು ಮಾಡಿದಂಥ ಕೆಲಸಗಳೆಲ್ಲ ಗೊತ್ತಿದ್ದರಿಂದ ನನಗೆ ಇಂಗ್ಲೆಂಡ್ ಹೋಗಲಿಕ್ಕೆ ಮನಸ್ಸೇ ಇರಲಿಲ್ಲ. ಇನ್ನುವರೆಗೂ ನಾನು ಹೋಗಿಲ್ಲ. ಇಂಗ್ಲೆಂಡೂ ನನ್ನನ್ನು ಕರೆಸ್ಕೊಂಡಿಲ್ಲ. (ನಗು)

**ರ :** ನಿಮ್ಮ ಅನೇಕ ಚಿಂತನೆಗಳಿಗೆ ಲೋಹಿಯಾ ಪ್ರೇರಣೆಯಿದೆ. ಅವರ ಚಿಂತನೆಗಳ ಸಂಪರ್ಕ ನಿಮಗೆ ಯಾವಾಗ ಬಂದಿತು ?

**ನಂ :** ತಮಾಷೆ ಹೇಳತೀನಿ. ನಾನು ಯುರೋಪಲ್ಲಿ ೪ ವರ್ಷ ಸ್ವತಃ ಚಿಂತನೆ ಮಾಡಿದೆ. ಅಲ್ಲಿಯವರೆಗೂ ನಾನು ಲೋಹಿಯಾನ ಓದಿರಲಿಲ್ಲ. ಬೇರೆ ಲಿಟರೇಚರ್ ನರೇಂದ್ರದೇವ ಅವರದೂ ಇವರದೂ ಮನೆಗೆ ಬರ್ತಾ ಇತ್ತು. ಆದರೆ ನಾನೇನು ಚಿಂತನೆಗಳನ್ನ ನಡೆಸಿದ್ದೆ, ದೇಶದ ರಾಜಕೀಯ ಬಗ್ಗೆ ಇರಲಿ, ಅಂತರರಾಷ್ಟ್ರೀಯ ರಾಜಕೀಯದ ಬಗ್ಗೆ ಇರಲಿ,

ಇಂಡಿಯಾಕ್ಕೆ ಬಂದ ನಂತರ ಎಲ್ಲಾ ರಾಜಕೀಯ ಪಕ್ಷಗಳನ್ನು ನೋಡಿ ಇನ್ನೂ ಆಯ್ಕೆ ಮಾಡೋ ಸ್ಥಿತಿನಲ್ಲಿ ಇರೋವಾಗಲೇನೆ, ಲೋಹಿಯಾರ 'ಮಾರ್ಕ್ಸ್, ಗಾಂಧಿ ಅಂಡ್ ಸೋಶಿಯಲಿಜಂ' ಪುಸ್ತಕ ನನ್ನ ಕೈಗೆ ಸಿಕ್ತು. ಅದನ್ನು ಓದೋಕೆ ಶುರುಮಾಡಿದಾಗ, ಏನು ನಾನೇ ಬರದಂಗೆ ಕಾಣಿಸ್ತಾ ಇತ್ತು! ನಾನು ಆಲೋಚನೆ ಮಾಡಿದ ವಿಚಾರಗಳೆಲ್ಲಾ ಅಲ್ಲೇ ಇತ್ತು. ಆನಂತರ ಆಯ್ಕೆ ಮಾಡೋ ಸಮಸ್ಯೇನೆ ಬರ್ಲಿಲ್ಲ. ನೇರ ಸಮಾಜವಾದಿ ಪಕ್ಷ ಸೇರಿದ್ದು, ಸಮಾಜವಾದಿ ಯುವಜನ ಸಭಾ ರಾಜ್ಯ ಕಾರ್ಯದರ್ಶಿಯಾಗಿ ಕೆಲಸ ಮಾಡೋದಿಕ್ಕೆ ಒಪ್ಪಿಗೆ ಕೊಟ್ಟಿದ್ದು, ಎಲ್ಲಾ ನಡೀತಾ ಬಂತು.

ರ : ಲೋಹಿಯಾ ಚಿಂತನೆಯಲ್ಲಿ ನಿಮಗೆ ಸೆಳೆದ ಮುಖ್ಯ ಸಂಗತಿ ಯಾವುದು ?

ನಂ : ಅತ್ಯಂತ ಹೆಚ್ಚು ಆಕರ್ಷಕವಾಗಿದ್ದು ಅವರು ಉಪಯೋಗಿಸೋ ಭಾಷೆ ಮತ್ತು ಶೈಲಿ. ಆ ಕಾರಣಕ್ಕೆ ಆಕರ್ಷಕ ಆಯಿತೋ ಏನೋ !

ರ : ಈಗಿನ ಭಾರತದ ಮತ್ತು ಅಂತರರಾಷ್ಟ್ರೀಯ ಸನ್ನಿವೇಶದಲ್ಲಿ ಲೋಹಿಯಾ ಚಿಂತನೆ ಯಾವ ತರಹ ಪ್ರಸ್ತುತ ಅಂತ ಭಾವಿಸ್ತೀರಿ ?

ನಂ : ಹೇಳ್ತೀನಿ, ಈಗ ೪-೫ ದಿವಸದಲ್ಲಿ ಅವರದ್ದೊಂದು ಲೇಖನ ಸಿಕ್ತು. 'ಎಕನಾಮಿಕ್ಸ್ ಆಫ್ಟರ್ ಮಾರ್ಕ್ಸ್' ಅಂತ. ನಮ್ಮ ಸ್ನೇಹಿತರು ಅದನ್ನೇ ಪ್ರತ್ಯೇಕವಾಗಿ ಪ್ರಕಟಣೆ ಮಾಡಿದ್ದಾರೆ. ಲೋಹಿಯಾ ಬರೆದಿರೋದು, ದಿನನಿತ್ಯ ಓದಬಹುದು ತಾವು. ಒಂದು ಹೊಸದು ಕಾಣ್ತಾ ಇರುತ್ತೆ ಅಲ್ಲಿ. ಇವತ್ತು ಏನು ಜಾಗತೀಕರಣ ಆಗ್ತಾ ಇದೆ, ಅಮೆರಿಕನ್ ಕ್ಯಾಪಿಟಲಿಜಂ ತಾನು ಉಳಿಯಬೇಕಾದರೆ ಏನನ್ನ ಮಾಡ್ಲೇಬೇಕಾಗಿದೆ, ಅದನ್ನು ಲೋಹಿಯಾ ೪೨ನೇ ಇಸವಿನಲ್ಲಿ ಬರೆದಿದ್ದಾರೆ. ಅವರು ಆಗ ಏನ್ ಬರೆದರೋ ಅದನ್ನ ಅಮೆರಿಕ ಈಗ ಮಾಡ್ತಾ ಇದೆ.

ರ : ಆದರೆ ಭಾರತದಲ್ಲಿ ಲೋಹಿಯಾ ಚಿಂತನೆಯನ್ನು ಅನುಸರಿಸುವ ಸಮಾಜವಾದಿ ರಾಜಕಾರಣ ಯಾಕೆ ಒಂದು ಪರ್ಯಾಯ ಶಕ್ತಿಯಾಗಿ ಬೆಳೆಯಲು ಸಾಧ್ಯವಾಗಲಿಲ್ಲ ?

ನಂ : (ಕೊಂಚ ದೀರ್ಘಾಲೋಚನೆ ಮಾಡಿ) ಸೀ, ನಡತೆ ಮತ್ತು ಗುಣ, ಲೋಹಿಯಾ ಸಿದ್ಧಾಂತದ ಒಂದು ಭಾಗ. ಇವನ್ನು ಲೋಹಿಯಾ ಮೀನ್ಸ್ ಅಂಡ್ ಎಂಡ್ಸ್‌ಗೆ ಲಿಂಕ್ ಮಾಡಿ ಸಿದ್ಧಾಂತ ನಿರೂಪಿಸ್ತಾರೆ. ಅವರ ಜೊತೆ ಕೆಲಸ ಮಾಡ್ತಾ ಇದ್ದವರಲ್ಲಿ ಈ ಅಂಶಗಳನ್ನು ಮೈಗೂಡಿಸಿ ಕೊಳ್ಳೋದರಲ್ಲಿ ಸೋತೋರೇ ಜಾಸ್ತಿ, ಜಾರ್ಜ್ ಫರ್ನಾಂಡಿಸ್ ಅವರಿಂದ ಹಿಡಿದು ನಮ್ಮ ಕರ್ನಾಟಕದ ಇವತ್ತಿನ ಅನೇಕ ಸಮಾಜವಾದಿ ರಾಜಕಾರಣಿಗಳವರೆಗೆ. ಲೋಹಿಯಾ ಮೀನ್ಸ್ ಅಂಡ್ ಎಂಡ್ಸ್ ಸಂಬಂಧವನ್ನು ಟೈಂ ಬಗ್ಗೆನೂ ಲಿಂಕ್ ಮಾಡ್ತಾ ಇದ್ದರು. ಟೈಂ ಈಸ್ ನಾಟ್ ಜಸ್ಟ್ ಎ ಮೊಮೆಂಟ್. ಇಟ್ ಈಜ್ ಆಲ್ಸೋ ಎಟರ್ನಿಟಿ. ಎವ್ವೆರಿ ಮೊಮೆಂಟ್ ಈಜ್ ಎಟರ್ನಿಟಿ ಅಂದಾಗ, ನೀವು ಇವತ್ತು ಸುಳ್ಳು ಹೇಳಿ ನಾಳೆ ಸತ್ಯ ಸ್ಥಾಪನೆ ಮಾಡ್ತೀನಿ ಅನ್ನೋಕೆ ಆಗೋಲ್ಲ.

ರ : ಲೋಹಿಯಾ ಇಂಡಿಯಾದ ಕಮ್ಯುನಿಸ್ಟರ ಮೇಲೆ ಕ್ರಿಟಿಕಲ್ ಆಗಿದ್ದರು. ಇದನ್ನು ನೀವು ಹೇಗೆ ವಿಶ್ಲೇಷಿಸ್ತೀರಿ ?

ನಂ : ಅಕಾರ್ಡಿಂಗ್ ಟು ಲೋಹಿಯಾ, ದಿ ಗ್ರೇಟೆಸ್ಟ್ ಮಿಸ್ಟೇಕ್ ಮಾರ್ಕ್ಸ್ ಡಿಡ್ ವಾಜ್ ಆಕ್ಸೆಪ್ಟಿಂಗ್ ದಿ ಕ್ಯಾಪಿಟಲಿಸ್ಟ್ ಟೆಕ್ನಿಕ್ಸ್ ಆಫ್ ಪ್ರೊಡಕ್ಷನ್ ಅಂಡ್ ದಿ ಕ್ಯಾಪಿಲಿಸ್ಟ್ ಮೋಡ್ ಆಫ್ ಪ್ರೊಡಕ್ಷನ್ ಆಜ್ ಆ್ಯನ್ ಐಡಿಯಲ್ ಮೋಡ್ ಆಫ್ ಪ್ರೊಡಕ್ಷನ್. ಲೋಹಿಯಾ ಅವರು ಹೇಳೋದು, ಇದನ್ನ ಒಪ್ಪೋಕೆ ಮಾರ್ಕ್ಸ್‌ನ ಮನಸ್ಸು ಯಾಕೆ ತಯಾರಾಯ್ತು ಅಂದ್ರೆ, ಬಿಕಾಸ್ ಹಿ ವಾಸ್ ಆಲ್ಸೋ ಯುರೋಪಿಯನ್. ಐ ವುಡ್ ಸೇ ದಟ್ ವಾಜ್ ದಿ ಬಿಗ್ಗೆಸ್ಟ್ ವೀಕ್‌ನೆಸ್. ಇವತ್ತು ಜಾಗತೀಕರಣದ ವಿರುದ್ಧ ಯುರೋಪಲ್ಲಿ ಏನು ಜನಾಂದೋಲನಗಳು ನಡೀತಾ ಇವೆ, ಅಲ್ಲೂನು ಇದನ್ನು ಕಾಣಬಹುದು ಅಂತ. ಹೈದ್ರಾಬಾದ್‌ನಲ್ಲಿ ಮೊನ್ನೆ ಆಯಿತಲ್ಲ ಏಶಿಯನ್ ಸೋಶಿಯಲ್ ಫೋರಂ, ಅದಕ್ಕೆ ನಾನು ಹೋಗಲಿಲ್ಲ. ಹೋದ ವರ್ಷ ವರ್ಲ್ಡ್ ಸೋಶಿಯಲ್ ಫೋರಂ ಆಯ್ತು ಬ್ರೆಜಿಲ್‌ನಲ್ಲಿ. ಅಲ್ಲೂ ಭಾಷಣ ಮಾಡಬೇಕಿತ್ತು. ನಾನು ಹೋಗಲಿಲ್ಲ. ಅದಕ್ಕೆ ಕಾರಣ ಏನಂತಂದರೆ, ವರ್ಲ್ಡ್ ಸೋಶಿಯಲ್ ಫೋರಮ್‌ಗೆ ಯಾರು ಸಂಚಾಲಕರು ಅಂತ ಇದ್ದಾರೆ, ಆ ಸಂಚಾಲಕರು ಕ್ಯೂಬಾದ ಅಧ್ಯಕ್ಷ ಫೀಡೆಲ್ ಕ್ಯಾಸ್ಟ್ರೋಗೆ ಬ್ರೆಜಿಲ್ ಸಮಾವೇಶಕ್ಕೆ ಆಹ್ವಾನ ಕೊಡೋದಕ್ಕೆ ವಿರೋಧ ಮಾಡಿದರು. ಅವರು ಹೇಳಿದ್ದು ಕ್ಯಾಸ್ಟ್ರೋಗೆ ಕರೆದರೆ ಜಾಗತೀಕರಣ ವಿರೋಧಿ ಚಳುವಳಿಯಲ್ಲಿ ಒಡಕು ಬರುತ್ತೆ. ನಾನಂದೆ – 'ಕರೀದೇ ಇದ್ದರೂ ಒಡಕು ಬರುತ್ತೆ. ಆ ಕಾರಣಕ್ಕೆ ನಾನು ಬರಲ್ಲ'. ಫೀಡೆಲ್ ಕ್ಯಾಸ್ಟ್ರೋ ಬಂದು ಉದ್ಘಾಟನೆ ಮಾಡೋದು ಅಂತ ಸಂಚಾಲನಾ ಸಮಿತಿ ತೀರ್ಮಾನ ಮಾಡಿದರೆ, ನಾನು ಬರ್ತೀನಿ ಅಂತ ಹೇಳಿದೀನಿ.

ರ : ಈ ಒಂದು ನಿರ್ದಿಷ್ಟ ಅಂಶದ ಮೇಲೆ ನೀವು ಯಾಕೆ ಒತ್ತಾಯ ಮಾಡ್ತಾ ಇದೀರಿ ?

ನಂ: ಸೀ, ಬಿಕಾಸ್ ಆ ಆರ್ಗನೈಸರ್ಸ್ ಏನಿದಾರೆ, ಯುರೋಪಿನ ಕೆಲವು ಸಂಘ-ಸಂಸ್ಥೆಗಳ ಪದಾಧಿಕಾರಿಗಳು, ವರ್ಲ್ಡ್ ಸೋಶಿಯಲ್ ಫೋರಂನ ಸಂಚಾಲಕರು, ಅವರು ಅಮೆರಿಕನ್ ಕ್ಯಾಪಿಟಲಿಜಂ ಬಗ್ಗೆ ಒಂದು ಸಾಫ್ಟ್‌ಲೈನ್ ತಗೋತಾರೆ. ಈವನ್ ದೆ ಗೋ ಟು ದಿ ಎಕ್ಸ್‌ಟೆಂಟ್ ದಟ್ ಆ್ಯಂಟಿ ಗ್ಲೋಬಲೈಜೇಶನ್ ಈಜ್ ನಾಟ್ ಆ್ಯಂಟಿ ಅಮೇರಿಕ. ವಿ ಆರ್ ನಾಟ್ ಆ್ಯಂಟಿ ಜಾರ್ಜ್ ಬುಷ್ ಅಂತಾರೆ. ಇಂತಾವೆಲ್ಲ ಮಾತಾಡೋರ ಜೊತೆಗೆ ಏನೂಂತ ಚಳುವಳಿ ಮಾಡ್ತೀರಿ ?

ರ : ಮಾರ್ಕ್ಸ್‌ವಾದವು ಯೂರೋಪಿನ ಒಂದು ಚಾರಿತ್ರಿಕ ಸಂದರ್ಭದಲ್ಲಿ ಹುಟ್ಟಿಕೊಂಡಿತು. ಅದರಲ್ಲಿ ಕಾಲ ದೇಶ ಸನ್ನಿವೇಶಕ್ಕೆ ಅನುಸಾರವಾದ ಕೆಲವು ತತ್ವಗಳಿವೆ. ಆ ತತ್ವಚಿಂತನೆಯನ್ನು ನಮ್ಮ ಚಾರಿತ್ರಿಕ ಸಂದರ್ಭಕ್ಕೆ ಹೇಗೆ ಪರಿವರ್ತಿಸಿ ಬಳಸ್ತೇವೆ ಹಾಗೂ ಅದನ್ನಿಟ್ಟುಕೊಂಡು ನಮ್ಮ ವರ್ತಮಾನದ ಪರಿಸರವನ್ನು ಮುಖಾಮುಖಿ ಮಾಡುತ್ತೇವೆ ಅನ್ನುವುದು ಮುಖ್ಯ. ಲೋಹಿಯಾ ಸಮಾಜವಾದವು ಮಾರ್ಕ್ಸ್‌ವಾದವನ್ನು ವಿಮರ್ಶೆ ಮಾಡ್ತಾ ಎತ್ತುವ ಮುಖ್ಯ ಪ್ರಶ್ನೆ ಯಾವುದು ?

ನಂ : ಇವತ್ತಿಗೂನೂ ಭಾರತದ ಕಮ್ಯುನಿಸ್ಟ್ ಚಳುವಳಿ ಕೇಂದ್ರೀಕರಣವನ್ನು ವಿರೋಧ ಮಾಡಿಲ್ಲ. ಸೆಂಟ್ರಲೈಜೇಶನ್ ಇನ್ ಎವೆರಿಥಿಂಗ್, ಅದನ್ನು ವಿರೋಧ ಮಾಡಿಲ್ಲ. ಕ್ಯಾಪಿಟಲಿಸ್ಟ್ ಮೋಡ್ ಆಫ್ ಪ್ರೊಡಕ್ಷನ್ ಅನ್ನು ವಿರೋಧ ಮಾಡಿಲ್ಲ. ಸೋಸಿಯಲೈಜೇಶನ್ ಆಫ್ ಇಂಡಸ್ಟ್ರೀಸ್ ಬಗ್ಗೆ ಹೋರಾಟ ಮಾಡಿಲ್ಲ.

ರ : ಇಂಡಿಯನ್ ಕಮ್ಯೂನಿಸಂ ಅನ್ನ ನೀವು ಒಂದು ಬಗೆಯ ಬೀಸುಗ್ರಹಿಕೆಯಲ್ಲಿ ನೋಡತಾ ಇದೀರಾ ಅಂತ ಅನುಮಾನ. ಭಾರತದಲ್ಲಿ ಅನೇಕ ಸೈದ್ಧಾಂತಿಕ ನೆಲೆಯ ಕಮ್ಯೂನಿಸ್ಟ್ ಚಳುವಳಿಗಳಿದಾವೆ.

ನಂ : ಅವಕ್ಕೂ ಇದು ಅನ್ವಯಿಸುತ್ತೆ. ಈವನ್ ಫಾರ್ ದಿ ಪೀಪಲ್ಸ್ ವಾರ್ ಗ್ರೂಪ್. ಆಂಧ್ರಪ್ರದೇಶದಲ್ಲಿ ೧೯೮೨ರಿಂದ ಈಚೆಗೆ ನಾನು ಅವರೇ ಕರೆದ ಬಹಳ ಸಭೆಗೆ ಹೋಗಿದೀನಿ. ಅವರು ಇಂಟರ್‌ನಲ್ ಕಾಂಟ್ರಡಿಕ್ಷನ್ ಅಂತ ಮಾತಾಡ್ತಾರೆ. ವಾಟ್ ಈಜ್ ದಿ ಮೋಸ್ಟ್ ಸೀರಿಯಸ್ ಕಾಂಟ್ರಡಿಕ್ಷನ್ ನೌ ? ಹೂ ಈಜ್ ದಿ ಮೋಸ್ಟ್ ಸೀರಿಯಸ್ ಎನಿಮಿ ನೌ ? ನಾನು ಕೇಳಿದೆ. ನೀವು ನಮ್ಮ ಪೊಲೀಸ್ ಸ್ಟೇಶನ್ಸ್‌ಗೆ ಬಾಂಬ್ ಹಾಕ್ತೀರಿ. ನಮ್ಮ ತಹಶೀಲ್ದಾರ್ ಕಛೇರಿಗೆ ಬಾಂಬ್ ಹಾಕ್ತೀರಿ. ವೈ ನಾಟ್ ಯು ಎಕ್ಸ್‌ಪ್ಲೋಡ್ ಮಲ್ಟಿನ್ಯಾಶನಲ್ ಕಾರ್ಪೊರೇಶನ್ಸ್ ? ಎಲ್ಲೋ ಒಂದು ಕೋಕಾ-ಕೋಲಾ ಬಾಟಲಿಂಗ್ ಯೂನಿಟ್ಟನ್ನ ಈಚೆಗೆ ಧ್ವಂಸ ಮಾಡಿದರೆ ಹೊರತು, ದೊಡ್ಡ ದೊಡ್ಡದನ್ನ ಎಕ್ಸ್‌ಪ್ಲೋಡ್ ಮಾಡಿ ಆಮೇಲೆ ಈ ಚಿಲ್ಲರೆ ಇಂಟರ್ನಲ್ ಕಾಂಟ್ರಡಿಕ್ಷನ್ ನಾವು ವಿಚಾರಿಸ್ಕೊಬಹುದು. ಅದನ್ನು ಮಾಡಾಕೆ ತಯಾರಿಲ್ಲ.

ರ : ಕಮ್ಯುನಿಸಂ ಕುರಿತ ಲೋಹಿಯಾ ಅವರ ನಿಲುವುಗಳು, ಅವರ ಕಾಲದ ಭಾರತದ ಕಮ್ಯುನಿಸ್ಟರ ನಿಲುವುಗಳನ್ನು ತೀವ್ರವಾಗಿ ವಿರೋಧಿಸುತ್ತ ರೂಪಿಸಿಕೊಂಡಂತಹವು. ವಾಸ್ತವವಾಗಿ ಅವನ್ನು ಕಮ್ಯುನಿಸಂ ವಿರೋಧಿಯಾದವು ಎಂದು ಕರೆಯಬಾರದು ಎಂಬ ವ್ಯಾಖ್ಯಾನಗಳಿವೆ.

ನಂ : ನೋನೋ. ಲೋಹಿಯಾನ ಸರಿಯಾಗಿ ಅರ್ಥಮಾಡಿಕೊಳ್ಳದೇನೆ ಮಾಡಿರುವ ವ್ಯಾಖ್ಯಾನವಿದು. ಅವರು 'ಎಕನಾಮಿಕ್ಸ್ ಆಫ್ಟರ್ ಮಾರ್ಕ್ಸ್' ಅನ್ನೋ ಪ್ರಬಂಧ ಬರೆದಾಗ ಅವರ ಮನಸಲ್ಲಿ ಡಾಂಗೆ, ನಂಬೂದರಿಪಾದ್ ಇವರು ಯಾರೂ ಇರಲಿಲ್ಲ.

ರ : ಕರ್ನಾಟಕದ ಲೋಹಿಯಾವಾದಿ ರಾಜಕಾರಣಿಗಳು ಸಾಹಿತ್ಯ ಪ್ರೇಮಿಗಳು. ಕುವೆಂಪು ಕೂಡ ಒಂದು ಬಗೆಯ ಸಮಾಜವಾದಿ ದರ್ಶನವನ್ನು ತಮ್ಮ ಕೃತಿಗಳಲ್ಲಿ ಪ್ರಕಟಿಸುತ್ತಿದ್ದವರು. ಲೋಹಿಯಾ ಹಾಗೂ ಕುವೆಂಪು ಇವರಿಬ್ಬರಲ್ಲಿ ಯಾವ ಬಗೆಯ ಸಾಮ್ಯ ಕಾಣ್ತೀರಿ ?

ನಂ : ಅಷ್ಟೊಂದು ವಿವರವಾಗಿ ನಾವು ಹೋಲಿಕೆ ಮಾಡೋಕೆ ಸಾಧ್ಯ ಇಲ್ಲದರೂನೂ, ಸ್ಥೂಲವಾಗಿ ನೋಡಿದಾಗ ಹೋಲಿಕೆಗಳು ಜಾಸ್ತಿ ಇವೆ. ಅದರಲ್ಲೂ ಮಾತೃಭಾಷೆ ಬಗ್ಗೆ ಇರಬಹುದು, ಜಾತಿಪದ್ಧತಿ ಬಗ್ಗೆ ಇರಬಹುದು, ರೈತನ ಬಗ್ಗೆ ಅಥವಾ ಆಸ್ತಿ ವ್ಯವಸ್ಥೆ ಬಗ್ಗೆ ಇರಬಹುದು, ವೈದಿಕಶಾಹಿ ಬಗ್ಗೆ ಇರಬಹುದು. ಕುವೆಂಪು ಲೋಹಿಯಾ ಅವರಷ್ಟು ವಿವರವಾಗಿ ಈ ಸಮಸ್ಯೆಗಳ ಬಗ್ಗೆ ಬರೆಯದಿದ್ದರೂನೂ ಇಬ್ಬರಲ್ಲೂ ಬಹಳ ಹೋಲಿಕೆಗಳು ಇದ್ದವು.

ರ : ನೀವು ತೇಜಸ್ವಿ, ಲಂಕೇಶ್, ಅನಂತಮೂರ್ತಿ, ಸುಂದರೇಶ್, ಕಡಿದಾಳು ಶಾಮಣ್ಣ, ಗೋಪಾಲಗೌಡರು, ಕೋಣಂದೂರು ಲಿಂಗಪ್ಪ-ಹೀಗೆ ನಿಮ್ಮ ಗುಂಪನ್ನು ನೆನೆಸಿಕೊಂಡರೆ ಮುಖ್ಯವಾಗಿ ಅದೊಂದು ಬುದ್ಧಿಜೀವಿಗಳ ಗುಂಪಾಗಿತ್ತು. ಬಹುಶಃ ಅಡಿಗರೂ ಮೊದಲು ಅಲ್ಲಿದ್ದರು ಅಂತ ಕಾಣುತ್ತೆ. ನಿಮ್ಮನ್ನು ಒಂದು ಕೇಂದ್ರಕ್ಕೆ ತಂದಿದ್ದು ನಿಮ್ಮಲ್ಲಿ ಇದ್ದ ಸಾಹಿತ್ಯಾಸಕ್ತಿಯೋ ಅಥವಾ ರಾಜಕೀಯ ವಿಚಾರಧಾರೆಯೋ ?

ನಂ : ವಿಚಾರವೇ ನಮ್ಮನ್ನು ಕೂಡಿಸಿದ್ದು. ಆದರೆ ನಿಜವಾಗಿ ವಿಚಾರ ಆಧಾರದ ಮೇಲೆ ಕೂಡಿದಂಥ ಹೆಸರುಗಳನ್ನು ನೀವು ಪ್ರತ್ಯೇಕಿಸಬಹುದು. ಪ್ರಾಮಾಣಿಕವಾಗಿ ವಿಚಾರದ ಮೇಲೆ ಕೂಡದೇ ಇದ್ದಂತಹ ಅಥವಾ ಕೂಡಿದ್ದಂಗೆ ತೋರಿಸಿಕೊಂಡ ವ್ಯಕ್ತಿಗಳನ್ನು ಪ್ರತ್ಯೇಕಿಸಬಹುದು. ನೀವು ಹೇಳಿದಿರಿ ಅಡಿಗ, ಅನಂತಮೂರ್ತಿ ಅಂತ. ಪ್ರಜಾಪ್ರಭುತ್ವವನ್ನೇ ವಿರೋಧ ಮಾಡಿದಂತಹ ಅಡಿಗರ ಹಲವಾರು ಲೇಖನಗಳು ಇವೆ. ನಂತರ ಜನಸಂಘದ ಅಭ್ಯರ್ಥಿಯಾದಾಗ, ಅದಕ್ಕೂ ಮುಂಚೆ ಅವರು ಬರೆದಂಥ ಲೇಖನಗಳು ಅಡಿಗರ ನಿಜವಾದ ವ್ಯಕ್ತಿತ್ವ ತೋರಿಸುತ್ತವೆ. ಮತ್ತೆ ಅನಂತಮೂರ್ತಿ ಕಾಲಕಾಲಕ್ಕೆ ಹೊಂದಿಕೊಳ್ಳೋವಂಥ ಹೇಳಿಕೆಗಳನ್ನು ಕೊಟ್ಟಿದ್ದನ್ನು ನೋಡಿದರೆ, ಅವರ ವ್ಯಕ್ತಿತ್ವಾನೂ ಏನೂ ಅಂತ ಗೊತ್ತಾಗುತ್ತೆ

ರ : ಅದಕ್ಕೆ ಕಾರಣಗಳು ಆ ಕಾಲದ ರಾಜಕೀಯ ಸಾಮಾಜಿಕ ಪರಿಸ್ಥಿತಿಗಳಲ್ಲೇ ಇದ್ದವೋ ಅಥವಾ ರಾಜಕೀಯ ಚಿಂತನೆಯಾಗಿ ಲೋಹಿಯಾವಾದದಲ್ಲೂ ಇದ್ದವೊ ?

ನಂ : ಲೋಹಿಯಾವಾದದಲ್ಲೇ ಇದ್ದವು ಅಂತ ನಾನು ನಂಬಲ್ಲ. ಸೀ, ಎಲ್ಲರೂ ಬಿಟ್ಟು ಹೋದ ಮೇಲೆ ನಮ್ಮ ರೈತ ಚಳುವಳಿ ಪ್ರಾರಂಭವಾಯಿತು. ರೈತ ಚಳುವಳಿಗೂನೂ ಸಮಾಜವಾದಿ ಚಳುವಳಿಗೂನೂ ವ್ಯತ್ಯಾಸ ಇದೆ ಅಂತ ನಾನು ಹೇಳೋಲ್ಲ. ವೈಯಕ್ತಿಕವಾಗಿ ಹೇಳೋದಾದರೆ, ಸಮಾಜವಾದಿ ಯುವಜನಾ ಸಭಾ ಆಂದೋಲನದ ಎರಡನೇ ಅಧ್ಯಾಯ, ಈ ನಮ್ಮ ರೈತ ಚಳುವಳಿ ಅಂತ ಕರೆಯೋನು ನಾನು. ಈ ಚಳುವಳಿ ಬಹಳ ಪ್ರಬಲವಾಗಿ ಸಂಘಟನೆ ಆಯಿತು. ಆಗತಾ ಇದೆ. ಇನ್ನೂ ಪ್ರಬಲವಾಗಿ ಆಗುತ್ತೆ.

ರ : ಸಾಹಿತ್ಯದಲ್ಲಿ ನಿಮ್ಮ ಆಯ್ಕೆ ಕೇಳತೀನಿ. ನಿಮ್ಮ ಪ್ರಿಯವಾದ ಲೇಖಕ ಯಾರು ?

ನಂ : ಯೋಚನೆ ಮಾಡದೇನೆ ಹೇಳಬಹುದು ಕುವೆಂಪು ಅಂತ. ಕುವೆಂಪು ಮಟ್ಟಕ್ಕೆ ಏರುವಂಥ ಲೇಖಕ ಇನ್ನೂ ಹುಟ್ಟಿಲ್ಲ ಅಂತ ನನಗನಸುತ್ತೆ.

ರ : ಒಬ್ಬ ಚಳುವಳಿಗಾರರಾಗಿ ನಿಮಗೆ ಕುವೆಂಪು ಯಾಕೆ ಮುಖ್ಯ ಅನಿಸ್ತಾರೆ ?

ನಂ : ಅವರ ಸಾಮಾಜಿಕ ಕಳಕಳಿ, ಅವರ ವೈಚಾರಿಕ ವೈಶಾಲ್ಯತೆ, ಮತ್ತೆ ಸಾಹಿತ್ಯಕ್ಕೂ ಒಂದು ಉದ್ದೇಶ ಅಂತ ಇರುತ್ತಲ್ಲ, ಆ ಉದ್ದೇಶಗಳ ಸ್ಪಷ್ಟತೆ. ಅದು ಒಬ್ಬ ಸಾಹಿತಿಯ ಸಾಮಾಜಿಕ ಪಾತ್ರ ಅಂತ ಏನಂತೀವಿ ಅದನ್ನೆಲ್ಲ ಸಂಪೂರ್ಣ ಭರ್ತಿ ಮಾಡೋವಂಥ ವ್ಯಕ್ತಿತ್ವ ಅವರದು.

ರ : ತೇಜಸ್ವಿ ಅವರನ್ನು ಓದ್ತಾ ಇರೋ ನನಗೆ ಜಾಗತೀಕರಣವನ್ನು ಅವರು ಆಧುನಿಕತೆ ಅಂತ ಅರ್ಥಮಾಡಿಕೊಳ್ತಿದ್ದಾರಾ ಅಂತ ಸಂಶಯ.

ನಂ : ಅದೇ ಬರೋದು ತಾಪತ್ರಯ. ಜಾಗತೀಕರಣಕ್ಕೆ ಕಾರಣ ಆಗಿರೋವಂತಹ ಒಪ್ಪಂದ ಪತ್ರದಲ್ಲಿ ಇರೋ ಎಲ್ಲಾ ಅಂಶಗಳನ್ನು ಸಂಪೂರ್ಣವಾಗಿ ಅಧ್ಯಯನ ಮಾಡಿದರೇನೇ ಜಾಗತೀಕರಣದ ಬಗ್ಗೆ ಸ್ಪಷ್ಟತೆ ಬರೋದು. ಆ ಕೆಲಸಾನ ನಮ್ಮ ದೇಶದಲ್ಲಿ ಮಾಡಿರೋರು ಬಹಳಾ ಕಡಿಮೆ. ಡಬ್ಲೂಟಿಓ ಟ್ರೀಟಿ ಸುಮಾರು ೫೬೦ ಪುಟ ಇದೆ. ಅದು ಇಂಗ್ಲಿಷಿನಲ್ಲಿ ಕಬ್ಬಿಣದ ಕಡಲೆ ಭಾಷೆ. ವೈದಿಕ ಭಾಷೆ ತರಹ ಅನ್ನಬಹುದು. ಅದನ್ನು ಸಂಪೂರ್ಣ ಅರ್ಥಮಾಡಿಕೊಂಡು ಅಭಿಪ್ರಾಯ ವ್ಯಕ್ತಪಡಿಸಿರೋರು ಬಹಳ ಕಡಿಮೆ. ಸರಕಾರಿ ಮಟ್ಟದಲ್ಲೂ ನಾವು ಸಂಬಳಕೊಟ್ಟು ಇಟ್ಟುಕೊಂಡಿರೊ ಅರ್ಥಶಾಸ್ತ್ರಜ್ಞರೂ ಈ ಕೆಲಸ ಮಾಡಿಲ್ಲ. ಹಾಗಾಗಿ ತಪ್ಪುಗಳಾಗ್ತವೆ. ನನಗೆ ಅನಿಸೋದು ತೇಜಸ್ವೀನೂ ಓದಿಲ್ಲ ಅಂತ. ಓದಿದ್ದರೆ ಅವರು ಆ ಅಭಿಪ್ರಾಯ ಹೇಳ್ತಿರಲಿಲ್ಲ.

ರ : ಒಬ್ಬ ಚಳುವಳಿಗಾರನಾಗಿ ಕನ್ನಡ ಒಟ್ಟಾರೆ ಲೇಖಕ ಬುದ್ಧಿ ಜೀವಿಗಳು ನಮ್ಮ ಸಮಾಜದ ಜತೆ ಹಾಗೂ ವ್ಯವಸ್ಥೆಯ ಜತೆ ಇರಿಸಿಕೊಂಡಿರೋ ಸಂಬಂಧಗಳನ್ನು ಹ್ಯಾಗೆ ವಿಶ್ಲೇಷಣೆ ಮಾಡ್ತೀರಿ ?

ನಂ : ಕರ್ನಾಟಕ ಲೇಖಕರುಗಳಲ್ಲಿ ಒಂದು ಅನ್‌ಡಿಸೈರೆಬಲ್ ಟ್ರೆಂಡ್ ಅಂತೀವಲ್ಲ, ಅಪೇಕ್ಷಣೀಯವಲ್ಲದಂಥ ಒಂದು ನಡತೆ, ಅದು ಕಾಣಿಸಿಕೊಳ್ಳೋದಿಕ್ಕೆ ಶುರುವಾಗಿದೆ. ಚಳುವಳಿಗಳಿಗೂ ಅವರಿಗೂ ನಡುವೆ ಕಂದರ ಪ್ರಾರಂಭವಾಗಿದೆ. ಇದು ಕೆಲವು ಚಳುವಳಿಗಳು ಕ್ಷೀಣ ಆಗಲಿಕ್ಕೂ ಕಾರಣ ಆಗಿದೆ. ಇದಕ್ಕೆ ಮುಖ್ಯ ಕಾರಣ, ವ್ಯವಸ್ಥೆ ಜೊತೆ ಹೊಂದಾಣಿಕೆ. ಉದಾಹರಣೆಗೆ, ದಲಿತ ಚಳುವಳಿ ನಾಶವಾಗೋದಕ್ಕೆ ಕಾರಣ ವ್ಯವಸ್ಥೆ ಜೊತೆ ಹೊಂದಾಣಿಕೆ. ಪವರ್ ಪಾಲಿಟಿಕ್ಸ್ ಬಗ್ಗೆ, ರಾಜಕೀಯ ಪಕ್ಷಗಳ ಬಗ್ಗೆ ಸ್ಪಷ್ಟವಾದಂಥ ಒಂದು ನಿಲವು ತಾಳದೇ ಇರೋದು, ನಮ್ಮ ಬುದ್ಧಿಜೀವಿಗಳು ಮಾಡ್ತಾ ಇರೋದು, ಬೇರೆ ದೇಶದ ಬುದ್ಧಿಜೀವಿಗಳಿಗೆ ಹೋಲಿಸಿದರೆ, ಜನಾಂದೋಳನಗಳಲ್ಲಿ ಭಾಗವಹಿಸದೇ ಇರೋದು. ಒಂದು ಸಾರಿ ಡಾ॥ ಎಚ್. ನರಸಿಂಹಯ್ಯನವರು ಬಹಳ ದೊಡ್ಡ ಭಾಷಣ ಮಾಡಿದರು ಜಾಗತೀಕರಣದ ವಿರುದ್ಧ. ಎಚ್. ನರಸಿಂಹಯ್ಯ ಗಾಂಧಿವಾದಿ ಅಂತಲೇ ಬರೀತಾರೆ ಇವತ್ತಿಗೂ. ಆನಂತರ ನಾನು ಮಾತಾಡೋದಿತ್ತು. ಅವರ ಎದುರಿಗೇನೇ ಹೇಳಿದೆ. 'ಯಾಕೆ ನಮ್ಮ ದೇಶದ ಬುದ್ಧಿಜೀವಿಗಳಿಗೂ, ಬೇರೆ ದೇಶದ ಬುದ್ಧಿಜೀವಿಗಳೀಗೂ ವ್ಯತ್ಯಾಸ ಬರುತ್ತೆ? ಬರ್ಟ್ರಂಡ್ ರಸೆಲ್ ಸಾಯೋಕೆ ಮುಂಚೆ ಇಂಗ್ಲೆಂಡಿನ ರಸ್ತೆಗಳಲ್ಲಿ ಚಳುವಳಿ ಮಾಡಿದರು, ವಿಯಟ್ನಾಂ ವಾರ್ ವಿರುದ್ಧ. ನಮ್ಮ ದೇಶದ ಬುದ್ಧಿಜೀವಿಗಳಿಗೆ ಏನಾಗಿದೆ'? ನರಸಿಂಹಯ್ಯನವರು ಇಷ್ಟೊಂದು ಮಾತಾಡ್ತಾರೆ. ಅವರು ಜಾಗತೀಕರಣದ ವಿರುದ್ಧ ನಡೀತಾ ಇರೋ ಚಳುವಳಿಗಳಲ್ಲಿ ಭಾಗವಹಿಸಬೇಕು. ಅದಾದ ಮೇಲೆ ಅವರು ಮತ್ತೆ ಮಾತಾಡಿದರು. 'ಇಲ್ಲನನ್ನಿಂದ ಭಾಗವಹಿಸೋಕೆ ಆಗಲ್ಲ' ಸೀ, ಈ ಧೋರಣೆಯಿದ್ದಾಗ ಕಂದರ ತನ್ನಿಂದ ತಾನೇ ಸೃಷ್ಟಿಯಾಗುತ್ತೆ. ಆ ತಪ್ಪು ಮಾಡಬಾರದು ಅಂತ ನಮ್ಮ ಬುದ್ಧಿಜೀವಿಗಳಿಗೆ ವಿನಂತಿ ಮಾಡ್ಕೋಬಹುದೇನೊ ಈ ಸಂದರ್ಭದಲ್ಲಿ.



ಇನ್ನೂ ಈಗ ಮತಪೆಟ್ಟಿಗೆ ಕಾಣಿಸಿಕೊಳ್ಳುತ್ತಿದೆಯೇ?

ರ : ರಾಜಕೀಯ ಪ್ರಜ್ಞೆ ಬೆಳೆಸಿಕೊಳ್ಳೋದು ಬೇರೆ, ಪವರ್ ಪಾಲಿಟಿಕ್ಸಿನಲ್ಲಿ ನೇರವಾಗಿ ಧುಮುಕುವುದು ಬೇರೆ. ನೀವು ಚುನಾವಣೆಗೆ ನಿಂತಿದ್ರಿ. ಗೆದ್ರಿ, ಸೋತಿರಿ. ಚಳುವಳಿಗಳು ಜನಾಭಿಪ್ರಾಯ ರೂಪಿಸುವ ಕೆಲಸವನ್ನು ಮಾಡ್ತಾ ಪ್ರಭುತ್ವಗಳನ್ನು ನಿಯಂತ್ರಿಸಬಲ್ಲ ಜನಾಂದೋಲನಗಳಾಗಿ ಇರುವುದು ಈ ಹೊತ್ತಲ್ಲಿ ಅಗತ್ಯ ಅನಿಸೋದಿಲ್ಲವಾ ?

ನಂ : ನೋ. ನಾಟ್ ನೆಸೆಸರಿಲಿ. ಯಾವುದೇ ಒಂದು ಆಂದೋಲನ ಆದರೂನೂ ಜನಾಭಿಪ್ರಾಯ ರೂಪಿಸೋವಂಥ ಒಂದು ಚಳುವಳಿ ನಡೀತಾನೆ ಇರಬೇಕು. ಅದರ ಜೊತೆಗೆ ಅಧಿಕಾರ ಗ್ರಹಣಾನೂ ಒಂದು ಮುಖ್ಯ ಭಾಗ. ಅಧಿಕಾರ ಗ್ರಹಣ ಇಲ್ಲದೆ ಯಾವುದೇ ಚಳುವಳಿ ತನ್ನ ಆಶೋತ್ತರಗಳನ್ನು ಸಂಪೂರ್ಣವಾಗಿ ಈಡೇರಿಸಿಕೊಳ್ಳೋದು ಅಸಾಧ್ಯ. ಆದರೆ ಅಧಿಕಾರ ಗ್ರಹಣ ಯಾವ ರೀತಿ ಮಾಡಬೇಕು – ಇದು ಮುಖ್ಯ ಪ್ರಶ್ನೆ. ಕಾಲಕಾಲಕ್ಕೆ ನೀವು ಯಾವುದೇ ಪಕ್ಷದ ಸರಕಾರ ಇದ್ದರೂನೂ ಹೊಂದಾಣಿಕೆ ಮಾಡಿಕೊಳ್ಳೋದು, ಆ ಸರಕಾರದಲ್ಲಿ ಕೆಲವು ಹುದ್ದೆಗಳಿಗೆ ಪ್ರಯತ್ನ ಮಾಡೋದು, ಇದನ್ನು ಎಷ್ಟು ಕಾಲ ಮಾಡ್ತೀರಿ ?

ರ : ಚಳುವಳಿಗಳು ಹಾಲಿ ರಾಜಕೀಯ ಸಮೀಕರಣದಲ್ಲಿ ತಾವೇ ಪರ್ಯಾಯ ರಾಜಕೀಯ ಶಕ್ತಿಯಾಗುವುದು ಹೇಗೆ ಎಂಬ ಚಿಂತನೆ ಮಾಡುವುದು ಮುಖ್ಯ ಅಂತಾದರೆ, ಈಗಿರುವ ಚುನಾವಣಾ ರಾಜಕೀಯದ ಮಾದರಿಯನ್ನು ಒಪ್ಪಿಕೊಂಡೆ ಈ ರಾಜಕೀಯ ಪರ್ಯಾಯವನ್ನು ಮಾಡಬೇಕು ಅಂತ ಆಯಿತಲ್ಲವಾ ?

ನಂ : ಹೌದು, ಮೂಲಭೂತ ಪ್ರಶ್ನೆ ಪಾರ್ಲಿಮೆಂಟರಿ ಡೆಮಾಕ್ರಸಿಯ ಬಗ್ಗೆ ನಿಮಗೆ ವಿಶ್ವಾಸ ಇದೆಯೋ ಇಲ್ಲವೋ ಅನ್ನೋದು. ಸಂಸದೀಯ ಪ್ರಜಾಪ್ರಭುತ್ವಾನ ಅತ್ಯುತ್ತಮ ಮಾರ್ಗ ಅಂತ ಒಪ್ಪಿದ ಮೇಲೆ, ಅದನ್ನ ಗುಣಾತ್ಮಕವಾಗಿ ಹ್ಯಾಗೆ ಬದಲಾವಣೆ ಮಾಡಬೇಕು ? ಬದಲಾಗಿ ಈ ಸಂಸದೀಯ ಪ್ರಜಾಪ್ರಭುತ್ವಾನ ಹಾಳಗೆಡವತ್ತಾ ಇರೋ ರಾಜಕೀಯ ಪಕ್ಷಗಳ ಜತೆ ಹೊಂದಾಣಿಕೆ ಮಾಡ್ಕೊಂಡು ಈ ಚಳುವಳಿಗಳು ಹಾಳಾಗ್ತಾ ಇವೆಯೋ ಇಲ್ಲವೋ ? ರೈತ ಚಳುವಳಿ ಮಾಡ್ತಾ ಇರೋ ಕೆಲಸಾನೆ ಇದು. ಪ್ರಜಾ ಪ್ರಭುತ್ವದಲ್ಲಿ ಮತದಾರ ಯಾವ ರೀತಿ ಗುಣಮುಖಿವಾಗಿ ಪರಿವರ್ತನೆ ಆಗಬೇಕು ? ಇದನ್ನ ಪ್ರತಿ ಸಭೆಯಲ್ಲಿ ಪ್ರತಿನಿತ್ಯ ನಾವು ಮಾತಾಡ್ತಾ ಇದೀವಿ ಜನರ ಜೊತೆ.

ರ : ರಾಜಕೀಯ ಪರ್ಯಾಯವನ್ನು ಸೃಷ್ಟಿ ಮಾಡೋ ಈ ಕೆಲಸವನ್ನು ಯಾವುದೋ ಒಂದು ಚಳುವಳಿ ಕೈಯಿಂದ ಮಾತ್ರ ಮಾಡೋಕಾಗುತ್ತಾ ಅಥವಾ ಎಲ್ಲ ಜನಪರ ಚಳುವಳಿಗಳು ಸೇರಿ ಈ ಕೆಲಸ ಮಾಡುವಂಥದ್ದಾ ?

ನಂ : ಇಲ್ಲ, ಸಮಾನ ದೃಷ್ಟಿಕೋನ ಇರೋವಂಥ ಜನಾಂದೋಲನಗಳ ಜೊತೆ ಕೈ ಜೋಡಿಸುವ ಮೂಲಕ ಈ ಕೆಲಸ ಸುಲಭ ಆಗುತ್ತೆ. ನಾವು ತಯಾರಿದೀವಿ ಕೈ ಜೋಡಿಸೋದಿಕ್ಕೆ. ಆ ಗುಣಗಳು ಇರೋವಂಥ ಆಂದೋಲನಗಳು ನಮ್ಮ ಮುಂದೆ ಕಾಣಸ್ತಾ ಇಲ್ಲ ಕರ್ನಾಟಕದಲ್ಲಿ.

ರ : ಸಮಾನ ಮನಸ್ಕ ಆಂದೋಲನಗಳನ್ನ ಒಂದು ಕೇಂದ್ರಕ್ಕೆ ತರೋಕೆ ಬೇಕಾದ ನಾಯಕತ್ವ ಇರೋ ವ್ಯಕ್ತಿಗಳ ಅಗತ್ಯಾನೂ ಇರುತ್ತೆ. ಅನೇಕ ಸಲ ನಿಮ್ಮ ಹಠಮಾರಿತನದಿಂದ ಇಂತಹ ಕೆಲಸಗಳು ಸಾಧ್ಯವಾಗ್ತಾ ಇಲ್ಲ ಅಂತ ಕೇಳಿದೇನೆ.

ನಂ : ಹೌದು ನಾನು ಹಠಮಾರಿ, ಆದರೆ ಚಟಮಾರಿ ಅಲ್ಲ. ಚಟಮಾರಿ ಅಲ್ಲದ ಕಾರಣಕ್ಕೇ ನಾನು ಹಠಮಾರಿ ತರಹ ಕಾಣಸ್ತೀನಿ. ಒಬ್ಬ ಚಳುವಳಿಗಾರನಲ್ಲಿ ಇರಬೇಕಾದ ಅತ್ಯಂತ ಮುಖ್ಯವಾದ ಗುಣ ಹಠ. ಚಟ ಅಲ್ಲ. ರೈತಚಳುವಳಿಯಿಂದ ಚಟವಾದಿಗಳು ಆಚೆ ಹೋಗಿದ್ದಾರೆ. ಆಚೆ ಹೋದವರು ನನ್ನನ್ನು ಹಠವಾದಿ ಅಂತಾರೆ, ಸರ್ವಾಧಿಕಾರಿ ಅಂತಾರೆ. ಹೌದು ನಾನು ಸರ್ವಾಧಿಕಾರಿ. ಯಾವುದರ ಬಗ್ಗೆ ? ಶಿಸ್ತಿನ ಬಗ್ಗೆ, ಚಾರಿತ್ರ್ಯದ ಬಗ್ಗೆ.

ರ : ನಿಮ್ಮ ಪ್ರಕಾರ ಜನಪರ ಚಳುವಳಿಗಳು ಒಂದು ರಾಜಕೀಯ ಪರ್ಯಾಯದತ್ತ ಹೋಗಬೇಕಾದರೆ ಮಾಡಬೇಕಾದ ಮೊದಲ ಕೆಲಸ ಯಾವುದು ?

ನಂ : ಮೊದಲು ವೈಚಾರಿಕ ಸ್ಪಷ್ಟತೆ, ವೈಚಾರಿಕ ಹೊಂದಾಣಿಕೆ ಆಗಬೇಕು. ಅನಂತರ ಅದರ ಆಧಾರದ ಮೇಲೆ ಕಾರ್ಯಕ್ರಮಗಳನ್ನ ರೂಪಿಸಬೇಕು. ಎರಡುಮೂರು ವರ್ಷ ಸತತ ಕೆಲಸ ಮಾಡಿದರೆ, ನಾವು ಕರ್ನಾಟಕದ ಪ್ರಜಾಪ್ರಭುತ್ವಾನ ಗುಣಾತ್ಮಕವಾಗಿ ಹೀಗೆ ಬದಲಾವಣೆ ಮಾಡಬಹುದು. ಅಷ್ಟು ಪ್ರಭಾವ ಬೀರಬಲ್ಲಂತಹ ಬುದ್ಧಿಜೀವಿಗಳ ದೊಡ್ಡ ಸಂಖ್ಯೆ ಕರ್ನಾಟಕದಲ್ಲಿದೆ. ಆದರೆ ಈ ಕೆಲಸಾನ ಅವರು ಕೈಗೆ ತಗೊಂಡಿಲ್ಲ. ಇವತ್ತಿಗೂ ಎಲ್ಲರೂ ಈ ಒಂದು ವೈಚಾರಿಕ ಸ್ಪಷ್ಟತೆಯಿಂದ ಕೈ ಜೋಡಿಸಿದರೆ,

ಆರೋಗ್ಯಕರವಾದಂತಹ ಪರ್ಯಾಯ ವ್ಯವಸ್ಥೆಯನ್ನ ಕರ್ನಾಟಕಕ್ಕೆ ಕೊಡಬಹುದು. ಆ ವಿಶ್ವಾಸ ನನಗಿದೆ.

ರ : ರೈತಸಂಘವು ರಾಜಕಾರಣದಲ್ಲಿ ಇರಿಸಿಕೊಂಡಿರುವ ಎಚ್ಚರದ ಪ್ರಜ್ಞೆ ಜನಪರವಾಗಿದೆ, ಪ್ರಖರವಾಗಿದೆ, ಸರಿ. ಆದರೆ ನಮ್ಮ ಹಳ್ಳಿಗಾಡಿನ ಜಾತಿ ಸಮಾಜದಲ್ಲಿ, ಭೂರಹಿತ ಕೂಲಿಕಾರ್ಮಿಕರು ಇರೋ ಸಮಾಜದಲ್ಲಿ, ಅದರ ಪಾತ್ರದ ಬಗ್ಗೆ ಈ ಜನಪರತೆ ಇದೆಯಾ ? ರೈತಸಂಘ ಈಗಲೂ ಊಳಿಗಮಾನ್ಯ ಪದ್ಧತಿಯನ್ನು ಒಪ್ಪಿಕೊಂಡಿರೋ ಭೂಮಾಲೀಕರಿಂದ ತುಂಬಿದೆ ಅಲ್ಲವಾ ?

ನಂ : ಹಾಗೇನಿಲ್ಲ, ತಾವು ಗಮನಿಸಿಲ್ಲ ಅಂತ ಕಾಣುತ್ತೆ. ನಮ್ಮ ಸಂಘಟನೆ ಯಾವ್ಯಾವ ಗ್ರಾಮದಲ್ಲಿದೆ, ಅಲ್ಲೆಲ್ಲೂ ಕೋಮುಗಲಭೆ ಆಗಿಲ್ಲ. ಕಾರಣ, ಸಣ್ಣಪುಟ್ಟ ಸಮಸ್ಯೆಗಳು ಹಿಂದಿನಿಂದ ಏನು ಉಳಿದುಕೊಂಡು ಬಂದಿವೆ, ಊಳಿಗಮಾನ್ಯ ಪದ್ಧತಿ ಅಂದರಲ್ಲ, ಅದಕ್ಕಿಂತ ದೊಡ್ಡ ದೊಡ್ಡ ಸಮಸ್ಯೆಗಳ ಕಡೆ ಅವರ ಗಮನ ಬಿದ್ದಿದ್ದರಿಂದ ಈ ಸಾಂಪ್ರದಾಯಿಕ ವೈಷಮ್ಯಗಳು ಅಸಮಾನತೆ ತಾರತಮ್ಯ ಇತ್ಯಾದಿ ಹಳ್ಳಿಗಳಲ್ಲಿ ಕಾಣಸ್ತವೆ, ಅವು ಕ್ರಮೇಣ ಅದೃಶ್ಯ ಆಗ್ತಾಯಿವೆ. ಹಾಗಾಗಿ ನಮ್ಮ ಸಂಘ ಎಲ್ಲೆಲ್ಲಿದೆಯೋ ಅಲ್ಲಿ ಕೋಮುಗಲಭೆ ಮಾತ್ರವಲ್ಲ, ಜಾತಿಗಲಭೆಗಳೂ ಆಗಿಲ್ಲ. ಚಳುವಳಿನಲ್ಲಿ ಕಂಡುಬರುವಂಥ ಈ ನಿಲುವು ನಿಧಾನಗತಿಲೇ ಆಗಬಹುದು, ಅಂತೂ ಆಗ್ತಾ ಇದೆ.

ರ : ನನ್ನ ಪ್ರಶ್ನೆಯ ಉದ್ದೇಶ ಭೂ ಹಂಚಿಕೆ ಬಗ್ಗೆ ಸಂಘದ ನಿಲುವು ಏನು ಅಂತ ತಿಳಿಯೋದಾಗಿದೆ.

ನಂ : ನಮ್ಮ ದೃಷ್ಟಿಕೋನದ ಪ್ರಕಾರ ಭೂಮಿತಿ ಎಷ್ಟಿರಬೇಕೆಂದರೆ, ಒಂದು ಕುಟುಂಬಕ್ಕೆ ಹೊರಗಿನಿಂದ ಕೂಲಿ ಇಲ್ಲದೆ ಕೆಲಸ ಮಾಡುವಷ್ಟು ಹಿಡುವಳಿ ಇರಬೇಕು. ಇದು ಒಂದು ಕುಟುಂಬದ ಹಿಡುವಳಿಗೆ ನಾವು ಕೊಟ್ಟಿರೋಂಥ ವಿಶ್ಲೇಷಣೆ. ಆ್ಯಜ್ ಮಚ್ ಲ್ಯಾಂಡ್ ಆ್ಯಜ್ ಎ ಫ್ಯಾಮಿಲಿ ನೀಡ್ಸ್, ವಿತೌಟ್ ಹೈರಿಂಗ್ ಎಕ್ಸಟರ್‌ನಲ್ ಲೇಬರ್. ಇದು ಸಮಾಜವಾದದ ಕೊನೆ ಹಂತ. ನಿಮಗೆ ಒಂದು ಉದಾಹರಣೆ ಹೇಳಬೇಕು, ಭೂಮಿ ಬಗ್ಗೆ ನಮ್ಮ ನಿಲುವು ಏನು ಅಂತ. ನಾವು ಚಿಕ್ಕಮಗಳೂರಿನಲ್ಲಿ ಬೆಂಬಲ ಕಳಕೊಂಡೆವು. ಕಾರಣ, ಕಾಫಿ ತೋಟಗಳಿಗೂ ಭೂಸುಧಾರಣೆ ಅನ್ವಯಿಸಬೇಕು ಅಂತ ನಾವು ಘೋಷಣೆ ಹಾಕಿದ್ದು. ಆ ದಿವಸದಿಂದ ಕಾಫಿ ತೋಟದ ಏರಿಯಾದ ರೈತರೆಲ್ಲ ನಮ್ಮನ್ನು ಬಿಟ್ಟು ಹೋಗ್ ಬಿಟ್ಟರು. ಇವತ್ತಿಗೂ ಅದೇ ನಿಲುವು ನಮ್ಮದು. ಲ್ಯಾಂಡ್ ರಿಫಾರ್ಮ್ಸ್ ಶುಡ್ ಬಿ ಅಪ್ಲೈಡ್ ಟು ಈವನ್ ಪ್ಲಾಂಟೇಷನ್ಸ್. ಇನ್ನೂ ಭೂಸುಧಾರಣೆ ಆಗಬೇಕು. ಈಗ ಆಗಿರೋದು ಅಂಥ ಸಮರ್ಪಕವಾದ ಭೂಸುಧಾರಣೆ ಏನಲ್ಲ. ಲ್ಯಾಂಡ್ ಟು ದ ಟಿಲ್ಲರ್ ಅಂತ ಏನಂತೀವಿ, ಆ ಸುಧಾರಣೆ ಇನ್ನೂ ಆಗಿಲ್ಲ. ಕಾಗೋಡು ಸತ್ಯಾಗ್ರಹ, ಅದು ಗೇಣಿದಾರರ ಚಳುವಳಿ. ಅಷ್ಟೇ ಹೊರತು, ಉಳುವವನ ಚಳುವಳಿ ಅಲ್ಲ.

ರ : ನೀವು ಇಂಟರ್‌ನ್ಯಾಶನಲ್ ರಿಲೇಶನ್ಸ್ ಅಧ್ಯಯನ ಮಾಡದೋರು. ಪಾಠ ಹೇಳದೋರು, ಅಂತರರಾಷ್ಟ್ರೀಯ ವೇದಿಕೆಗಳಲ್ಲಿ ರೈತ ಚಳುವಳಿಗಾರನಾಗಿ ಕೆಲಸ ಮಾಡದೋರು, ಗ್ಲೋಬಲೈಜೇಶನನ್ನ ಹೇಗೆ ವಿಶ್ಲೇಷಣೆ ಮಾಡ್ತೀರಿ ?

ನಂ : ನಮ್ಮಲ್ಲಿ ಬಹುಪಾಲು ಅರ್ಥಶಾಸ್ತ್ರಜ್ಞರು ಪ್ರಾಮಾಣಿಕರಲ್ಲ, ಅವಕಾಶವಾದಿಗಳು. ಜೊತೆಗೆ ಆತ್ಮವಿಶ್ವಾಸ ಇಲ್ಲದವರು. ಜಾಗತೀಕರಣ ಇಟ್ ಹ್ಯಾಸ್ ಬಿಕಮ್ ಎ ರಿಯಾಲಿಟಿ. ವಿ ಕಾಂಟ್ ಗೋ ಎಗೆನೆಸ್ಟ್ ಇಟ್ ಅನ್ನೋ ತೀರ್ಮಾನಕ್ಕೆ ಬಂದ್ಬಿಟ್ಟಿರೋರು. ಇನ್ನು ಕೆಲವು ಎಕನಾಮಿಸ್ಟ್‌ಗಳು ಕೆಟ್ಟಭಾಷೆ ಉಪಯೋಗಿಸಿದ್ದಾರೆ. 'ಇಫ್ ಯು ಕಾಂಟ್ ರೆಸಿಸ್ಟ್, ಲೇ ಡೌನ್ ಅಂಡ್ ಎಂಜಾಯ್ ಇಟ್' ಅಂತ. ಇದಕ್ಕಿಂತ ಹೇಸಿಗೆ ನಿಲುವು ಏನಾದರೂ ಇದೆಯಾ ? ಇಂಥ ಅರ್ಥಶಾಸ್ತ್ರಜ್ಞರು ನಮ್ಮ ಸುತ್ತಮುತ್ತ ಇದ್ದಾರೆ ಸ್ವಾಮಿ. ಇದು ಗೊಂದಲಕ್ಕೆ ಅವಕಾಶ ಮಾಡಿಕೊಟ್ಟಿದೆ. ಆದರೆ ನನಗೆ ಇನ್ನೂ ವಿಶ್ವಾಸ ಇದೆ. ಇಫ್ ಇಂಡಿಯಾ ಟೇಕ್ಸ್ ದಿ ಲೀಡರ್‌ಶಿಪ್ ಆಫ್ ಥರ್ಡ್ ವರ್ಲ್ಡ್ ಕಂಟ್ರೀಸ್, ವಿ ಕ್ಯಾನ್ ಡಿಸ್ಮ್ಯಾಯ್ ದಿಸ್ ಕೈಂಡ್ ಆಫ್ ಗ್ಲೋಬಲೈಜೇಶನ್. ಇದಕ್ಕೆ ಇನ್ನೂ ಸ್ವಲ್ಪ ಕಾಲ ಬೇಕಾಗುತ್ತೇನೋ. ಫೈನಲೀ ಕ್ಯಾಪಿಟಲಿಜಂ ಅಲಾಂಗ್ ವಿಥ್ ಡಬ್ಲ್ಯೂಟಿಒ ಹ್ಯಾಸ್ ಟು ಕೊಲ್ಯಾಪ್ಸ್. ಆದರೆ ಈ ಕುಸಿತ ಬೇಗ ಆಗೋದಕ್ಕೋಸ್ಕರವಾಗಿ ನಾವು ಮಾಡ್ತಾ ಇರೋ ಚಳುವಳಿಯಿದು. ತಡ ಆದರೆ, ಅವು ಕೊಲ್ಯಾಪ್ಸ್ ಆಗೋಕ್ ಮುಂಚೆ ಸಾಕಷ್ಟು ಹಾನಿ ಮಾಡಿಬಿಡುತ್ವೆ.

ರ : ಈಗ ಅಫಘಾನಿಸ್ತಾನದ ಮೇಲೆ ಅಮೆರಿಕ ಭಯೋತ್ಪಾದನೆ ನಿವಾರಣೆ ಹೆಸರಲ್ಲಿ ದಾಳಿ ಮಾಡಿತು. ಇದಕ್ಕೂ ಗ್ಲೋಬಲೈಜೇಶನ್ನಿಗೂ ಇರೋ ಸಂಬಂಧ ಎಂಥದ್ದು ?

ನಂ : ನಾವು ಜಾಗತೀಕರಣವನ್ನ ಕಲೋನಿಯಲಿಜಂನ ಮುಂದುವರಿಕೆ ಅಂತ ಕರೀತಾ ಇರೋದು. ಇಟ್ ಈಜ್ ಎ ಪ್ರೊಸೆಸ್ ಆಫ್ ಎ ರಿಕಲೋನೈಜೇಶನ್. ಆಫ್ಟರ್ ದಿ ಫಸ್ಟ್ ಫೇಜ್ ಆಫ್ ಕಾಲೊನೈಜೇಶನ್, ಇದನ್ನ ಗ್ಲೋಬಲೈಜೇಶನ್ ಅಂತ ಅರ್ಥೈಸಿರೋದು. ಈಗ ಇರಾಕ್ ಮೇಲೆ ಯುದ್ಧ ಮಾಡಬೇಕು ಅನ್ನೋದನ್ನ ನಾವು ಅಮೆರಿಕದ ಪೆಟ್ರೊಟೆರರಿಸಂ

ಅಂತ ಮಾತ್ರ ನೋಡೋದು. ಅಂಡ್ ದಿ ಬಿಗ್ಗೆಸ್ಟ್ ಟೆರರಿಸ್ಟ್ ಈಜ್ ಜಾರ್ಜ್ ಬುಷ್. ಅಂಡ್ ದಟೀಸ್ ದಿ ಟ್ರೂತ್. ಇವತ್ತು ಪ್ರಪಂಚದಲ್ಲಿ ಅತ್ಯಂತ ದೊಡ್ಡ ಭಯೋತ್ಪಾದಕ ಅಂದರೆ ಅಮೆರಿಕಾನೆ. ಇನ್ನು ಮಿಕ್ಕವರಾರೂ ಭಯೋತ್ಪಾದಕರಲ್ಲವೇ ಅಲ್ಲ. ಅವರೆಲ್ಲ ಬೇರೆಬೇರೆ ರೂಪದಲ್ಲಿ ಅಮೆರಿಕದ ಭಯೋತ್ಪಾದನೆಯನ್ನ ವಿರೋಧ ಮಾಡ್ತಾ ಇರೋರು.

ರ : ಈ ಜಾಗತೀಕರಣದ ಹೊತ್ತಲ್ಲೇ ಭಾರತದಲ್ಲಿ ಮತೀಯವಾದವು ತುಂಬ ಬಿರುಸಾಗಿ ಬೆಳೀತಿದೆ.

ನಂ : ದೇರ್ ಈಜ್ ನೋ ಡಿಫರೆನ್ಸ್ ಬಿಟ್ವೀನ್ ವಾಟ್ ಹ್ಯಾಪೆನ್ಡ್ ಇನ್ ಗುಜರಾತ್ ಅಂಡ್ ಅಫಘಾನಿಸ್ತಾನ್. ಭಾರತದ ಮೇಲ್ವರ್ಗಗಳು ಮತ್ತು ಅಂತರರಾಷ್ಟ್ರೀಯ ಮೇಲ್ವರ್ಗಗಳು ಕೈಜೋಡಿಸಿರೋದು ಅಷ್ಟೆ. ಜಾಗತೀಕರಣದಿಂದ ಈ ಎರಡು ವರ್ಗಗಳಿಗೆ ಮಾತ್ರ ಲಾಭ. ಸೋ ಅದಕ್ಕೆ ಅವರೇನೇನು ತಂತ್ರಗಳನ್ನ ಉಪಯೋಗಿಸಬೇಕೊ ಆ ತಂತ್ರಗಳನ್ನೆಲ್ಲ ಉಪಯೋಗಿಸ್ತಿದಾರೆ. ಈವನ್ ಬಾಬ್ರಿ ಮಸೀದಿ ಡಿಮಾಲಿಶನ್ ಡಿಸೆಂಬರ್ ೬ನೇ ತಾರೀಖು ಅಂತ ನಿಗದಿ ಆಗಿದ್ದೂನೂ ವಾಷಿಂಗ್‌ಟನ್‌ನಲ್ಲಿ. ಡಿಸೆಂಬರ್ ೬ರ ಕಾಲಕ್ಕೆ ಮುಖ್ಯವಾದ ಸಭೆ ಜಿನೇವಾದಲ್ಲಿ ನಡೀತಾ ಇತ್ತು. ದೇಶದ ಗಮನ ಆ ಕಡೆ ಹೋಗಬಾರದು, ಗಮನ ಬೇರೆ ಕಡೆ ಬರಬೇಕು ಅನ್ನೋ ದೃಷ್ಟಿಯಿಂದಾನೇ ಡಿಸೆಂಬರ್ ೬ ನಿಗದಿ ಮಾಡಿದ್ದು. ಅಂತರ ರಾಷ್ಟ್ರೀಯವಾಗಿ ನಡೆಯೋವಂತಹ ಕುತಂತ್ರಗಳು ಇವೆಲ್ಲ. ಭಾರತದ ಮೇಲ್ವರ್ಗ ಹಾಗೂ ಈ ಅಂತರರಾಷ್ಟ್ರೀಯ ಮೇಲ್ವರ್ಗಗಳ ನಡುವೆ ನಿಕಟವಾದ ಸಂಪರ್ಕ ಉಂಟು. ಯಾವ್ಯಾವ ದೇಶದಲ್ಲಿ ಯಾವ್ಯಾವ ಸ್ಟ್ರಾಟೆಜಿ ಉಪಯೋಗಿಸಬೇಕು ? ಉದಾಹರಣೆಗೆ ಆಫ್ರಿಕಾ ದೇಶದಲ್ಲಿ ಯಾವ ಸ್ಟ್ರಾಟೆಜಿ ಉಪಯೋಗಿಸಬೇಕು ? ಅಲ್ಲಿ ಹೆಂಗೆ ಜನಾಂಗೀಯ ಕಲಹಗಳನ್ನು ಸೃಷ್ಟಿ ಮಾಡಬೇಕು ? ಇದನ್ನೂನು ಅಮೆರಿಕಾದ ತಜ್ಞರು ರೂಪಿಸೋವಂಥ ಕಾರ್ಯಕ್ರಮ. ಅದೇ ರೀತಿ ಭಾರತದಂಥ ದೇಶದಲ್ಲಿ ಯಾವ ರೀತಿ ಕೋಮುವಾದದ ಬೆಂಕಿ ಹಚ್ಚಬೇಕು ? ಇದರ ಒಂದು ತಂತ್ರವನ್ನು ರೂಪಿಸೋರು ಅವರೇ. ಇದಕ್ಕೆ ತಯಾರಿ ಇರೋವಂಥ ಒಂದು ವರ್ಗ ಇದೆ ಭಾರತದಲ್ಲಿ. ಭಾರತದ ಜಾತಿಪದ್ಧತಿಯಿಂದ ಉದ್ಭವವಾಗಿರೋಂಥ ಆಲೋಚನೆಗಳು ಏನು ಇವೆ, ಅವನ್ನು ಸದ್ವಿನಿಯೋಗಪಡಿಸಿಕೊಳ್ಳೋವಂಥ ಮುಂದುವರಿದ ದೇಶಗಳನ್ನ ನಾನು ಅಂತರರಾಷ್ಟ್ರೀಯ ಬ್ರಾಹ್ಮಣರು ಅಂತ ಕರೆಯೋದು.

ರ : ಅರಿಶಿನದ ಮೇಲೆ ಅಮೆರಿಕದ ಕಂಪನಿಗಳು ಪೇಟೆಂಟ್ ಮಾಡಿಸಿದವು ಅನ್ನೋ ಮಾತನ್ನ ಕೇಳತೀವಿ. ಜನರು ನಮ್ಮದೇನನ್ನೂ ಯಾರೋ ಕದೀತಾ ಇದ್ದಾರೆ ಅನ್ನೋ ಸರಳ ಆತಂಕ ವ್ಯಕ್ತಪಡಿಸೋದನ್ನ ಕಾಣತೀವಿ. ವಾಸ್ತವವಾಗಿ ಪೇಟೆಂಟ್ ವಿಷಯದಲ್ಲಿ ನಮ್ಮ ರೈತರಿಗೆ ಯಾವ ತರಹ ಅನ್ಯಾಯವಾಗ್ತಾ ಇದೆ ?

ನಂ : ನಿಮ್ಮಲ್ಲಿರೋವಂಥ ನೈಸರ್ಗಿಕ ಸಂಪತ್ತನ್ನು ನೀವೇ ಬಳಸಲಿಕ್ಕೆ ಆಗದಂಥ ವ್ಯವಸ್ಥೆ ತರೋದು ಪೇಟೆಂಟ್‌ನ ಉದ್ದೇಶ. ಉದಾ : ಬೇವು. ಅಮೆರಿಕಾದಲ್ಲಿ ಒಂದು ಕಂಪನಿ ನೀಮ್ ಪೇಟೆಂಟ್ ಯಾವ ರೀತಿ ಮಾಡಿದೆ ಅಂದರೆ, ಆ ಬೇವಿನ ಬೀಜದಿಂದ ಯಾವ್ಯಾವ ಪ್ರಾಸೆಸ್‌ನಿಂದ ಏನೇನು ಮಾಡಬಹುದು, ೪೦ ಡಿಗ್ರೀಸ್‌ನಲ್ಲಿ ಏನು ಮಾಡಬಹುದು, ಎಲ್ಲಾ ಪ್ರಾಸೆಸನ್ನೂ ಪೇಟೆಂಟ್ ಮಾಡಿಬಿಟ್ಟಿದೆ. ಒರಿಜಿನಲ್ ಡಾಕ್ಯುಮೆಂಟ್ ನನ್ನ ಕಡೆ ಇದೆ. ಅದರ ಆ ಪೇಟೆಂಟ್ ಚೌಕಟ್ಟಿಗೆ ನೀವು ಒಪ್ಪಿಗೆ ಕೊಟ್ಟರೆ, ನಿಮ್ಮಲ್ಲಿ ಎಷ್ಟೇ ಬೇವಿನಬೀಜ ಇರಲಿ, ಅದನ್ನ ತಗೊಂಡು ನೀವು ಪ್ರಾಸೆಸ್ ಮಾಡಕ್ಕೇ ಆಗಲ್ಲ. ಮಾಡಿದರೆ ದಂಡ ಕೊಡಬೇಕು. ಟ್ರೇಡ್ ರಿಲೇಡೆಡ್ ಇಂಟಲೆಕ್ಚುವಲ್ ಪ್ರಾಪರ್ಟಿ ರೈಟ್ಸ್ ಅಗ್ರಿಮೆಂಟ್ ರುಜು ಹಾಕೋಕೆ ನಮ್ಮ ಸರಕಾರದವರು ಇನ್ನೂ ಚರ್ಚೆ ಮಾಡ್ತಾ ಇದ್ದಾರೆ. ರುಜು ಹಾಕ್ತು ಅಂತಂದ್ರೆ, ರುಜು ಹಾಕಿದ ದೇಶದಲ್ಲಿ ಏನಾದರೂ ರಿಪಿಟೇಶನ್ಸ್ ಆಫ್ ದಿ ಸೇಮ್ ಪ್ರೊಸೆಸ್ ನಡೆದರೆ, ದಂಡ ಕೊಡಬೇಕು. ದಂಡ ಬಹಳ ದೊಡ್ಡ ಪ್ರಮಾಣದ್ದಾದ್ದರಿಂದ, ನಿಮ್ಮ ಸಂಪನ್ಮೂಲವನ್ನ ನೀವೇ ಬಳಸೋಕೆ ಆಗದೇ ಇರೋ ಸ್ಥಿತಿಗೆ ತಲುಪುತ್ತೀರಿ. ಈಗ ಬಿತ್ತನೆ ಬೀಜಗಳು ಪೇಟೆಂಟ್ ಆಗಿವೆ. ಜೆನಿಟಿಕಲಿ ಮಾಡಿಫೈಯ್ಡ್ ಅಂತ ಏನು ಹೇಳ್ತೀವಿ, ಈ ಕುಲಾಂತರಿಗಳಿಂದ ಬೇರೆ ತಳಿಗಳಿಗೂ ಪರಾಗ ಮಾಲಿನ್ಯದಿಂದ ಸೋಂಕು ತಗಲುತ್ತೆ. ಮೊನ್ನೆ ಒಂದು ಕೇಸಾಯಿತು ಕೆನಡಾ ದೇಶದಲ್ಲಿ. ಒಬ್ಬ ಆರ್ಗ್ಯಾನಿಕ್ ಫಾರ್ಮರ್. ಅವನು ಈ ಕಂಪನಿಯ ಬೀಜ ಉಪಯೋಗಿಸಲಿಲ್ಲ, ಆದರೆ ಪಕ್ಕದ ಜಮೀನಿನವನು ಆ ಬೀಜ ಉಪಯೋಗಿಸಿದ್ದಾನೆ. ಅದು ಪರಾಗ ಮಾಲಿನ್ಯ ಆಗಿ ಇಲ್ಲಿರೋ ಗುಣಗಳು ಅವನ ಬೆಳೆಗೆ ಬಂದ್‌ಬಿಟ್ಟಿವೆ. ಮಾನ್ಸಾಂಟೋ ಕಂಪನಿ ಅವನ ಮೇಲೆ ಕೇಸ್ ಹಾಕ್ತು, ನೀನು ಕದ್ದಿದ್ದೀಯಾ ನಮ್ಮ ಬೀಜ ಅಂತ. ಕೋರ್ಟ್‌ನಲ್ಲಿ ಮಾನ್ಸಾಂಟೋ ಕಂಪನಿ ಪರ ತೀರ್ಮಾನ ಆಯಿತು. ಆ ರೈತ ಜುಲ್ಮಾನೆ ಕಟ್ಟಬೇಕಾಯಿತು. ಈಚೆಗೆ ನಡೆದಿದ್ದು ಇದು. ಸೋ, ಅಲ್ಲಿಗೇನಾಗುತ್ತೆ ? ನಾವು ನಮ್ಮ ಸ್ವಂತ ತಳಿಗಳನ್ನೇ ಉಪಯೋಗಿಸೋಕೆ ಆಗದೇ ಇರೋ ಸ್ಥಿತಿಗೆ ಬಂದ್‌ಬಿಡ್ತೀವಿ. ನಿಮ್ಮ ಸ್ವಂತ ತಳೀನ ನೀವೇ ಉಪಯೋಗಿಸೋಕಾಗದೇ ಇರೋದು, ಇದಕ್ಕಿಂತ ಅಪಾಯ ಬೇಕೆ ? ಇನ್ನೊಂದು ಅಪಾಯ ಇದೆ. ಸೀ, ಬಿತ್ತನೆಬೀಜ ಮಾರೋವಾಗ ಟೆಕ್ನಾಲಜಿ ಫೀ ಅಂತ ಛಾರ್ಜ್ ಮಾಡ್ತಾರೆ. ಪೆ ರಾಯಲ್ಟಿ ಅಂತ ಛಾರ್ಜ್ ಮಾಡೋಲ್ಲ. ಈಗ ಮಾನ್ಸಾಂಟೋ ಕಂಪನಿ ಬಿಟಿ ಹತ್ತಿ, ೪೫೦ ಗ್ರಾಂಗೆ ೧೬೦೦ ರೂಪಾಯಿ. ಯಾಕೆ ೧೬೦೦ ಅಂದರೆ, ಟೆಕ್ನಾಲಜೀ ಫೀ ಅಂತ ಸೇರಿಸಿದ್ದಾರೆ. ಇಟ್ಸ್ ಆಲ್‌ಮೋಸ್ಟ್ ರಾಯಲ್ಟಿ ಟು ದ ಪೇಟೆಂಟ್. ಹಂಗಾಗಿ ಕೃಷಿ ದುಬಾರಿಯಾಗೋದೊಂದು. ಇನ್ನೊಂದು ಕಡೆ ನಿಮ್ಮ ಬಿತ್ತನೆ ಬೀಜ ಬಳಸೋಕಾಗದೇ ಇರೋದು ಮತ್ತೊಂದು.

ರ : ರೈತಸಂಘವು ಕರ್ನಾಟಕದ ಅನೇಕ ಬಹುರಾಷ್ಟ್ರೀಯ ಬೀಜಕಂಪನಿಗಳ ಮೇಲೆ ಆಕ್ರಮಣ ಮಾಡಿದೆ. ಬಹುರಾಷ್ಟ್ರೀಯ ಕಂಪನಿಗಳನ್ನ ಸಂಘ ತನ್ನ ಮುಖ್ಯ ಎದುರಾಳಿಯನ್ನಾಗಿ ಮಾಡಿಕೊಳ್ಳೋಕೆ ತರ್ಕ ಏನು ?

ನಂ : ಒಂದು ದೇಶದ ಬಿತ್ತನೆ ಬೀಜದ ಮೇಲೆ ಮತ್ತೊಂದು ದೇಶದ ಕಂಪನಿ ಸಂಪೂರ್ಣ ಹತೋಟಿ ಸಾಧಿಸಿದರೆ, ಆ ದೇಶದ ಸ್ವಾತಂತ್ರ್ಯ ಉಳೀತು ಅಂತೀರಿ ? ಅಂಡ್ ಸೀಡ್ ಈಸ್ ದ ಫಸ್ಟ್ ಲಿಂಕ್ ಇನ್ ದಿ ಫುಡ್ ಚೈನ್. ಒಂದು ದೇಶದ ಆಹಾರ ವ್ಯವಸ್ಥೇನ ನಿಯಂತ್ರಣ ಮಾಡೋವಂಥ ಒಂದು ಸ್ಥಾನಕ್ಕೆ ಬಹುರಾಷ್ಟ್ರೀಯ ಕಂಪನಿಗಳು ಬಂದು ಕೂತರೆ, ಫುಡ್ ಸಾವರನ್‌ಟಿ ಅಂತ ಏನಂತೀವಿ, ಆಹಾರ ಸಾರ್ವಭೌಮತ್ವ, ಅದು ಹೋಯಿತು. ಅದು ಹೋಯ್ತು ಅಂದರೆ ದೇಶದ ಸಾವರನ್‌ಟಿ ಹೋಯಿತು ಅಂತ. ಅದು ಅಪಾಯ ಇರೋದು.

ರ : ನಮ್ಮ ಬೀಜಪದ್ಧತಿಯನ್ನು ನಮ್ಮ ಭಾಷೆಯನ್ನು ನಮ್ಮ ಸಂಸ್ಕೃತಿಯನ್ನ ಯಾರೋ ಹೊರಗಿನವರು ಬಂದು ಹಾಳುಮಾಡ್ತಾ ಇದಾರೆ ಅನ್ನೋ ಆತಂಕ, ಯಾವಾಗಲೂ ನಮ್ಮನ್ನ ರಕ್ಷಣಾತ್ಮಕ ಮನಃಸ್ಥಿತಿಯಲ್ಲೇ ಇಡುತ್ತೆ. ಇದು ಒಂದು ಬಗೆಯಲ್ಲಿ ನಮ್ಮ ಸಂಪ್ರದಾಯಗಳ ಬಗ್ಗೆ ಸ್ವವಿಮರ್ಶೆಯಿಲ್ಲದ ಸ್ಥಿತಿಗೆ ಹಾಗೂ ಆಧುನಿಕತೆಯನ್ನು ಕುರುಡಾಗಿ ವಿರೋಧಿಸುವ ಸ್ಥಿತಿಗೆ ಕರೆದುಕೊಂಡು ಹೋಗೋ ಸಾಧ್ಯತೆ ಇದೆ.

ನಂ : ಆಧುನಿಕತೆ ಅನ್ನೋದರ ಬಗ್ಗೆ ಸ್ಪಷ್ಟ ಕಲ್ಪನೆ ಬರಬೇಕು. ಈಗ ಏನು ಆಧುನಿಕತೆ ಅಂತೀವಿ, ಅದು ನಿಜವಾಗಲೂ ಆಧುನಿಕವೇ ? ಉದಾಹರಣೆಗೆ, ಆಧುನಿಕ ಕೃಷಿ ಪದ್ಧತಿ. ಮೊದಲನೆ ಹಸಿರುಕ್ರಾಂತಿ ಅಂತ ಏನು ಕರೀತೀವಿ ಇದನ್ನ ಸುಮಾರು ೫೦ ವರ್ಷ ಬಳಿಸಿದೀವಿ. ಇದು ನಿಜವಾಗಲೂನೂ ಆಧುನಿಕ ಪದ್ಧತೀನೊ ? ಇದು ನಿಸರ್ಗಕ್ಕೆ ವಿರೋಧವಾದಂಥ ಅತ್ಯಂತ ಅವೈಜ್ಞಾನಿಕವಾದ ಪದ್ಧತಿ ಅನ್ನೋದು ಈಗ ಸ್ಪಷ್ಟ ಆಗ್ತಾ ಇದೆ. ನಾವು ರಾಸಾಯನಿಕಗಳ ಆಧಾರದ ಮೇಲೆ ಹಸಿರುಕ್ರಾಂತಿ ಅನ್ನೋ ಹೆಸರಲ್ಲಿ ಕೃಷಿ ಮಾಡಿದೆವು. ಅದರಿಂದ ಏನೇನು ಕೆಟ್ಟ ಪರಿಣಾಮಗಳು ಆದವು ? ಎಷ್ಟು ಪ್ರಮಾಣದಲ್ಲಿ ನಾವು ಮಣ್ಣಿನ ಫಲವತ್ತತೆಯನ್ನ ಹಾಳುಮಾಡಿದೆವು ? ಮಣ್ಣಲ್ಲಿರೋ ಅಮೂಲ್ಯವಾಗಿರ ತಕ್ಕಂತಹ ಕ್ರಿಮಿಗಳನ್ನ ಹಾಳುಮಾಡಿದೆವು, ಪಕ್ಷಿಗಳನ್ನ ನಾಶಮಾಡಿದೆವು, ದುಂಬಿಗಳನ್ನ ಹಾಳುಮಾಡಿದೆವು. ಚಿಟ್ಟೆಗಳನ್ನ ಹಾಳುಮಾಡಿದೆವು. ಜೇನು ಹಾಳುಮಾಡಿದೆವು. ಕೃಷಿಗೆ ಅತ್ಯಂತ ಅವಶ್ಯಕವಾದಂಥ ಕೀಟವೈವಿಧ್ಯತೆ, ಇನ್‌ಸೆಕ್ಟ್ ಡೈವರ್ಸಿಟಿ, ಎಲ್ಲಾ ಹಾಳು ಮಾಡಿದೀವಿ. ಬಯೊ ಡೈವರ್ಸಿಟಿ ಹಾಳುಮಾಡಿದೀವಿ. ಸಾಯಿಲ್ ಫರ್ಟಿಲಿಟಿ ಹಾಳುಮಾಡಿದೀವಿ. ಇದೆಲ್ಲ ಮನವರಿಕೆಯಾಗಿ, ಮತ್ತೆ ಇದ್ಯಾವುದೂ ಹಾಳಾಗದೇ ಇರೋವಂಥ ಪದ್ಧತಿ ಯಾವುದು ಅಂತ ಹೊಸಹೆಸರಲ್ಲಿ ಎಲ್ಲ ದೇಶಗಳು ಪ್ರಾರಂಭ ಮಾಡಿವೆ. ಸಸ್ಟೈನಬಲ್ ಅಗ್ರಿಕಲ್ಚರ್ ಅಂದರೆ ಬೇರೆ ಏನೂ ಅಲ್ಲ. ನಮ್ಮ ದೇಶದಲ್ಲಿ ನಮ್ಮ ಪೂರ್ವಜರು ನಡೆಸಿಕೊಂಡು ಬಂದಂತಹ ಕೃಷೀನೆ !

– ಸಂದರ್ಶನ ಮುಗಿದಿರಲಿಲ್ಲ. ಆದರೆ ಅವರನ್ನು ಕಾಣಲು ಪತ್ರಕರ್ತರ ಗುಂಪು ಬಂದು ಕಾಯುತ್ತಿತ್ತು. ರೈತರು ಕಾಯುತ್ತಿದ್ದರು. ಕುವೆಂಪು ಹುಟ್ಟಿ ನೂರು ವರುಷವಾಗಿರುವ ಹೊತ್ತಲ್ಲಿ ತೀರಿಕೊಂಡಿರುವ ಸ್ವಾಮಿ, ಕುವೆಂಪು ಅವರಿಂದ ಪ್ರೇರಣೆ ಪಡೆದಿದ್ದರು. ಸಮಾಜವಾದಿ ನಾಯಕರಲ್ಲಿ ಇರುವ ಸಾಹಿತ್ಯದ ಆ ಅಭಿರುಚಿ ಹಾಗೂ ಕನ್ನಡ ಭಾಷೆಯ ಬಗ್ಗೆ ಕಾಳಜಿ ಅವರಲ್ಲಿತ್ತು. ತಮ್ಮ ನಿರ್ಭೀತ ಹೇಳಿಕೆ ಹಾಗೂ ಹರಿತವಾದ ವಿಶ್ಲೇಷಣೆಗಳಿಂದ ಜನಾಭಿಪ್ರಾಯವನ್ನು ರೂಪಿಸುತ್ತಿದ್ದ ಅವರ ಸಾವಿನಿಂದ, ನಾಡಿನ ಬಹುರಾಷ್ಟ್ರೀಯ ಕಂಪನಿಗಳಿಗೆ, ಸರಕಾರಿ ಅಧಿಕಾರಿಗಳಿಗೆ ರೈತರನ್ನು ಧಮಕಿಸಿ ಬದುಕಬೇಕು ಎಂದು ಬಯಸುವವರಿಗೆ ಹಾಲು ಕುಡಿದಷ್ಟು ಸಂತೋಷವಾಗಿರಬಹುದು. ಆದರೆ ಸಾವಿರಾರು ರೈತರು, ಅಧ್ಯಾಪಕರು, ಬುದ್ಧಿಜೀವಿಗಳು ಅಪಾರ ದುಃಖದಲ್ಲಿದ್ದಾರೆ. ಜಾಗತೀಕರಣದ ವಿರುದ್ಧ ಸಾಹಿತಿಗಳು ಮಾಡುತ್ತಿದ್ದ ಚರ್ಚೆಯಲ್ಲಿ ಅವರು ಭಾಗವಹಿಸಿದ ವಿಧಾನವು ಅವರಿಗಿದ್ದ ಸೈದ್ಧಾಂತಿಕ ಸ್ಪಷ್ಟತೆಯ ಸಂಕೇತವಾಗಿತ್ತು. ಬಹಳ ವಿಚಿತ್ರ, ಅವರು ನನಗೆ ಬರೆದ ಕೊನೆಯ ಪತ್ರವು ಜಾಗತೀಕರಣದ ವಿರುದ್ಧ ಮುಂಬೈನಲ್ಲಿ ಪರ್ಯಾಯ ವೇದಿಕೆಯಾದ 'ಮುಂಬೈ ಪ್ರತಿರೋಧ'ವನ್ನು ಕುರಿತಾದುದಾಗಿತ್ತು. ಯಾಕೋ ಏನೋ ಪಾಠ ಇನ್ನೂ ಕಲಿಸುವುದಿದ್ದಾಗಲೇ ತರಗತಿ ಬಿಟ್ಟು ಹೊರಟುಹೋದ ಗುರುವಿನಂತೆ ಅವರು ಕಾಣುತ್ತಾರೆ.

**ಡಾ|| ರಹಮತ್ ತರೀಕೆರೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬, ಬಳ್ಳಾರಿ ಜಿಲ್ಲೆ

# ಒತ್ತಡ ಹೇರುವ ಅಮೆರಿಕ ತಂತ್ರ - ರಷ್ಯಾದ ಪ್ರತಿರೋಧ

**ಸೋ**ವಿಯೆತ್ ಒಕ್ಕೂಟದ ಪತನ ಅಗಾಧ ಪ್ರಮಾಣದ ಒಂದು ರಾಷ್ಟ್ರೀಯ ದುರಂತ. ಅದು ಅನಿವಾರ್ಯವಾದ್ದೇನಾಗಿರಲಿಲ್ಲ. ಅದರಿಂದ ಲಾಭವಾದ್ದು ದೇಶದ ಸಂಪತ್ತು ಲಪಟಾಯಿಸಿ ಶ್ರೀಮಂತರಾದವರಿಗೆ ಮಾತ್ರ, ನಷ್ಟವಾದದ್ದು ಜನಸಾಮಾನ್ಯರಿಗೆ. ರಷ್ಯಾದ ರಾಷ್ಟ್ರಪತಿ ವ್ಲಾದಿಮಿರ್ ಪುತಿನ್‌ರ ಬಾಯಿಂದ ಹೊರಬಿದ್ದ ಮಾತುಗಳು ಇವು. ಒಂದು ದಶಕಕ್ಕೂ ಹೆಚ್ಚು ಕಾಲವಾದ ಮೇಲೆ ರಷ್ಯಾದ ನಾಯಕರಲ್ಲಿ ನಿಜವಾಗಿ ಈ ಅರಿವು ಮೂಡಿದ್ದರೆ ಅದು ಸಮಾಧಾನದ ಸಂಗತಿ. ತಡವಾಗಿದ್ದರೂ, ಆತ್ಮಾವಲೋಕನ ಮಾಡಿಕೊಂಡು ರಷ್ಯಾದ ಇಂದಿನ ನಾಯಕರುಗಳು ಆಗಿರುವ ಪ್ರಮಾದವನ್ನು ಸರಿಪಡಿಸುತ್ತಾ ರಾಷ್ಟ್ರದ ಘನತೆ, ಗೌರವ ಎತ್ತಿಹಿಡಿಯುವ ದಿಶೆಯಲ್ಲಿ ಹೆಜ್ಜೆ ಇರಿಸಿದರೆ ಸ್ವಾಗತಾರ್ಹ. ರಷ್ಯಾದಲ್ಲಿ ರಾಷ್ಟ್ರಪತಿ ಚುನಾವಣೆಯ ಸಂದರ್ಭದಲ್ಲಿ ಇಂಥ ಒಂದು ಹೇಳಿಕೆ ಬಂದಿದೆಯಾದರೂ, ಅದನ್ನು ತಳ್ಳಿಹಾಕುವಂತಿಲ್ಲ. ಪುತಿನ್‌ರ ಈ ಉದ್ಗಾರಕ್ಕೆ ಹಿನ್ನೆಲೆಯೂ ಇದೆ.

ಅಮೆರಿಕದ ನಾಯಕರು ಒಡ್ಡಿದ ಆಮಿಷಗಳಿಗೆ ಬಲಿಯಾದ ಗೊರ್ಬಚೆವ್, ಯೆಲ್ತ್ಸಿನ್‌ರಂಥ ನಾಯಕರು ಮುಕ್ತ ಮಾರುಕಟ್ಟೆ ಆರ್ಥಿಕತೆಯ ಬಿಸಿಲ್ಗುದುರೆ ಏರಿ ಏಳು ದಶಕಗಳಿಂದ ಪ್ರಬಲವಾಗಿದ್ದ ಸೋವಿಯೆತ್ ಒಕ್ಕೂಟವನ್ನು ನುಚ್ಚುನೂರು ಮಾಡಿದರು, ಕಳೆದ ಶತಮಾನದ ಕೊನೆಯ ದಶಕದಲ್ಲಿ. ಅಂದು ಸೋವಿಯೆತ್ ಒಕ್ಕೂಟದ ಹಠಾತ್ ವಿಸರ್ಜನೆ ಇಡೀ ಪ್ರಪಂಚದ ಜನತೆಯನ್ನು ದಿಗ್ಭ್ರಮೆಗೊಳಿಸಿತು. ಹರ್ಷಗೊಂಡವರು ಅಮೆರಿಕದ ನಾಯಕರು, ಬಹುರಾಷ್ಟ್ರೀಯ ಕಂಪೆನಿಗಳವರು. ಹತ್ತುವರ್ಷಗಳಲ್ಲಿ ರಷ್ಯಾದಲ್ಲಿ ಸಂಭವಿಸಿದ ಘಟನೆಗಳಾದರೂ ಎಂಥದ್ದು? ಅರಾಜಕತೆ, ಸಾರ್ವಜನಿಕ ಆಸ್ತಿಪಾಸ್ತಿಗಳ ಲೂಟಿ, ಮಾಫಿಯಾ ತಂಡಗಳ ತಾಂಡವ, ಹೊಸ ಶ್ರೀಮಂತ ಬಂಡವಾಳಗಾರರ ಉದಯ. ಜನಸಾಮಾನ್ಯರ ಪಾಲಿಗೆ ಬಂದದ್ದು ಬಡತನದ ಬವಣೆ. ಅಮೆರಿಕದ ಮಟ್ಟಿಗೆ ಒಂದೇ ಏಟಿಗೆ ಎರಡು ಲಾಭ. ಒಂದು ಅದಕ್ಕೆ ಸವಾಲಾಗಿದ್ದ ಬಲಾಢ್ಯ ರಾಷ್ಟ್ರದ ನಿರ್ಗಮನ, ಹೊಸ ಮಾರುಕಟ್ಟೆಯ ಲಭ್ಯ, ರಷ್ಯಾದ ಅಪಾರ ನೈಸರ್ಗಿಕ ಸಂಪತ್ತಿನತ್ತ ಕೈಚಾಚಲು ಅವಕಾಶ. ಅಮೆರಿಕದೊಂದಿಗೆ ಮೈತ್ರಿಯಿಂದ ಏನೋ ಸಾಧನೆಯಾಗುವುದು ಎಂದು ಭ್ರಮೆ ಇರಿಸಿಕೊಂಡಿದ್ದ ರಷ್ಯನರಿಗೆ ನಿಧಾನವಾಗಿ ನಿಜಸ್ಥಿತಿ ಅರಿವಾಗ ತೊಡಗಿದೆ. ಅಮೆರಿಕದಿಂದ ಡಾಲರ್ ಹೊಳೆ ಹರಿದು ಬಂದು ಉದ್ಧಾರವಾಗುವುದೆಂದು ನಿರೀಕ್ಷಿಸಿಕೊಂಡಿದ್ದವರಿಗೆ ಈಗ ನಿರಾಸೆಯಾಗತೊಡಗಿದೆ. ಅಮೆರಿಕನ್ ಸಾಮ್ರಾಜ್ಯಶಾಹಿಗಳ ದೃಷ್ಟಿ ಯಾವತ್ತೂ ರಷ್ಯಾವನ್ನು ಅಭಿವೃದ್ಧಿಗೊಳಿಸುವುದಾಗಿರಲಿಲ್ಲ, ಅವರಿಗೆ ಬೇಕಾಗಿದ್ದದು ಅಪಾರವಾದ ನೈಸರ್ಗಿಕ ಸಂಪತ್ತಿನ, ಮುಖ್ಯವಾಗಿ ರಷ್ಯಾದ ತೈಲ ಉತ್ಪನ್ನಗಳ ನಿಯಂತ್ರಣ, ಲೂಟಿ. ಇದು ಎಲ್ಲ ಇತರ ದೇಶಗಳ ಮಟ್ಟಿಗೂ ನಿಜ. ಅನ್ಯದೇಶಗಳ ಸಂಪನ್ಮೂಲಗಳನ್ನು ದೋಚಲು ಅಮೆರಿಕದ ಕದಂಬಬಾಹು ಯಾವಾಗಲೂ ಸಿದ್ಧ. ಅದರ ಅಭಿಲಾಷೆಗಳಿಗೆ ಅಡ್ಡಿಯಾದಲ್ಲಿ ಕಣ್ಣು ಕೆಂಪಾಗುತ್ತದೆ, ಬೆದರಿಕೆಯ ಅಸ್ತ್ರಪ್ರಯೋಗವಾಗುತ್ತದೆ.




ರಷ್ಯಾದ ವಿಷಯದಲ್ಲಿ ಈಗ ಹಾಗೇ ಆಗತೊಡಗಿದೆ. ಬೋರಿಸ್ ಯೆಲ್ತ್ಸಿನ್‌ನ ನಂತರ ಅಧಿಕಾರ ವಹಿಸಿಕೊಂಡ ವ್ಲಾದಿಮಿರ್ ಪುತಿನ್ ತನ್ನ ಅಧಿಕಾರಾವಧಿಯಲ್ಲಿ ತಕ್ಕಮಟ್ಟಿಗೆ ಆಡಳಿತ ವ್ಯವಸ್ಥೆಯನ್ನು ನಿಯಂತ್ರಣಕ್ಕೆ ತರುವುದರಲ್ಲಿ ಯಶಸ್ವಿಯಾಗಿದ್ದಾರೆ. ಈಚಿನ ವರ್ಷಗಳಲ್ಲಿ ಆರ್ಥಿಕ ಪರಿಸ್ಥಿತಿಯು ಸಹ ತಹಬಂದಿಗೆ ಬರತೊಡಗಿದೆ. ತನ್ನ ರಾಜಕೀಯ ಭವಿಷ್ಯವನ್ನು ಗಟ್ಟಿಮಾಡಿಕೊಂಡಿರುವ ಪುತಿನ್ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಸ್ವಲ್ಪಮಟ್ಟಿಗಾದರೂ ದೃಢನಿಲುವನ್ನು ತಳೆಯುವ ಒಲವು ತೋರಿದ್ದಾರೆ. ಇರಾಕಿನ ಯುದ್ಧದ ಸಂದರ್ಭದಲ್ಲಿ ವ್ಯಕ್ತಗೊಂಡ ಧೋರಣೆ ಅದಕ್ಕೊಂದು ನಿದರ್ಶನ. ಮುಖ್ಯವಾಗಿ, ರಷ್ಯಾದ ಅಧ್ಯಕ್ಷರು ರಾಷ್ಟ್ರದ ನೈಸರ್ಗಿಕ ಸಂಪತ್ತನ್ನು ಕಾಪಾಡಿಕೊಳ್ಳುವುದಕ್ಕೆ, ಸ್ವಾರ್ಥಕ್ಕಾಗಿ ಸಂಪತ್ತನ್ನು ಲೂಟಿ ಮಾಡುತ್ತಿರುವ ಉದ್ಯಮಿಗಳನ್ನು ನಿಯಂತ್ರಿಸುವುದಕ್ಕೆ, ಮಾಜಿ ಸೋವಿಯೆತ್ ರಾಷ್ಟ್ರದ ಗಣರಾಜ್ಯಗಳಾಗಿದ್ದ ನೆರೆಯ ರಾಷ್ಟ್ರಗಳ ಒಕ್ಕೂಟವನ್ನು ಬಲಗೊಳಿಸುವುದಕ್ಕೆ ಕೈಗೊಳ್ಳುತ್ತಿರುವ ಕ್ರಮಗಳು ಅಮೆರಿಕ ಆಡಳಿತಗಾರರಲ್ಲಿ ಆಕ್ರೋಶವುಂಟುಮಾಡಿದೆ. ಇತ್ತೀಚೆಗೆ ಮಾಸ್ಕೋಗೆ ಭೇಟಿ ನೀಡಿದ್ದ ಅಮೆರಿಕದ ವಿದೇಶಾಂಗ ಕಾರ್ಯದರ್ಶಿ ಕಾಲಿನ್ ಪೊವೆಲ್ ಬಹಿರಂಗವಾಗಿಯೇ ತಮ್ಮ ಅತೃಪ್ತಿಯನ್ನು ವ್ಯಕ್ತಗೊಳಿಸಿದ್ದಾರೆ. ರಷ್ಯಾದ ಪ್ರಮುಖ ದಿನ ಪತ್ರಿಕೆ 'ಇಜ್ವೆಸ್ತಿಯಾ'ಗೆ ನೀಡಿದ ಸಂದರ್ಶನದಲ್ಲಿ ಅಧ್ಯಕ್ಷ ಪುತಿನ್‌ರ ನೀತಿಗಳನ್ನು ಕಟುವಾಗಿ ಟೀಕಿಸಿದ್ದಾರೆ. ಮಾಮೂಲಿನಂತೆ ಮಾನವ ಹಕ್ಕುಗಳ ಉಲ್ಲಂಘನೆ, ವಿಸ್ತರಣಾವಾದಿ ಧೋರಣೆ, ಪ್ರಜಾಪ್ರಭುತ್ವದ ಶಿಥಿಲತೆಯ ಆಪಾದನೆಗಳನ್ನು ಮಾಡಿದ್ದಾರೆ.

ರಷ್ಯಾದ ತೈಲ ದೊರೆ, ಅತ್ಯಂತ ಪ್ರಬಲ ಉದ್ಯಮಿ ಮಿಖಾಯಿಲ್ ಖೊಂಡೋರ್ಕೊವ್‌ಸ್ಕಿಯನ್ನು ಬಂಧಿಸಿರುವುದು ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್‌ಗೆ ಇರಸು ಮುರುಸಾಗಿದೆ. ಆತನನ್ನು ಬಿಡುಗಡೆ ಮಾಡುವಂತೆ ಒತ್ತಾಯಿಸಿ ಎರಡು ಸಲ ಬುಷ್ ಪುತಿನ್‌ರನ್ನು ದೂರವಾಣಿ ಮೂಲಕ ಸಂಪರ್ಕಿಸಿದ್ದರು. ಅಷ್ಟಲ್ಲದೆ ತಮ್ಮ ಭಂಟ ಕಾಲಿನ್ ಪವೆಲ್‌ಗೂ ಮಾಸ್ಕೋದಲ್ಲಿ ರಷ್ಯಾದ ನಾಯಕರೊಂದಿಗೆ ವಿಷಯವನ್ನು ಪ್ರಸ್ತಾಪಿಸಲು ಸೂಚಿಸಿದ್ದರು. ಆದರೆ ಪುತಿನ್ ಆ ಒತ್ತಾಯಕ್ಕೆ ಮಣಿಯಲಿಲ್ಲ. ರಷ್ಯಾದ ಕಾನೂನುರೀತ್ಯ ಖೊಂಡೋರ್ಕೊವ್‌ಸ್ಕಿಯ ವಿಚಾರಣೆ ನಡೆಯುವುದೆಂದೂ, ಅದು ರಷ್ಯಾದ ಆಂತರಿಕ ವ್ಯವಹಾರವೆಂದೂ ಪುತಿನ್ ತಿಳಿಸಿದರು. ಈ ಉದ್ಯಮಿಯ ಬಂಧನ ರಷ್ಯಾದ ತೈಲ ಸಂಪತ್ತನ್ನು ತನ್ನದಾಗಿಸಿಕೊಳ್ಳುವ ಅಮೆರಿಕದ ಹಂಚಿಕೆಯನ್ನು ವಿಫಲಗೊಳಿಸಿತು. ಆತ ತನ್ನ ಬೃಹತ್ ತೈಲ ಕಂಪೆನಿಯಲ್ಲಿನ ಶೇ. ೪೦ರಷ್ಟು ಷೇರುಗಳನ್ನು ಅಮೆರಿಕದ ಎಕ್ಸಾನ್‌ಮೋಬೀಲು ಅಥವಾ ಷೆವ್‌ರಾನ್ ಟೆಕ್ಸಕೋ ಕಂಪೆನಿಗೆ ಮಾರಾಟ ಮಾಡಲು ಹವಣಿಸಿದ್ದ. ಈ ವ್ಯವಹಾರವನ್ನು ಕುದುರಿಸಲು ಅಧ್ಯಕ್ಷ ಜಾರ್ಜ್ ಬುಷ್ ತನ್ನ ತಂದೆಯನ್ನೇ ಖುದ್ದಾಗಿ ಕಳಿಸಿದ್ದದ್ದು.

ರಷ್ಯಾದ ರಕ್ಷಣಾ ಸಚಿವ ಸೆರ್ಗೆಯಿ ಇವಾನೋವ್ ಕಳೆದ ಅಕ್ಟೋಬರ್ ತಿಂಗಳಲ್ಲಿ ಮಾಜಿ ಸೋವಿಯೆತ್ ರಾಷ್ಟ್ರದ ಹನ್ನೆರಡು ರಾಜ್ಯಗಳನ್ನು ಒಂದುಗೂಡಿಸಿರುವ 'ಸ್ವತಂತ್ರ ರಾಷ್ಟ್ರಗಳ ಕಾಮನ್‌ವೆಲ್ತ್' ರಷ್ಯಾದ ಹಿತಾಸಕ್ತಿಯ ವಲಯ ಹಾಗೂ ಮುಖ್ಯ ರಕ್ಷಣಾವಲಯ ಎಂದು ಪ್ರಕಟಿಸಿದ್ದು ಅಮೆರಿಕವನ್ನು ಕಳವಳಕ್ಕೀಡುಮಾಡಿದೆ. ಈ ಪ್ರದೇಶದಲ್ಲಿ ರಷ್ಯಾ ಪ್ರಬಲಗೊಳ್ಳುವುದು ಅಮೆರಿಕದ ಹಿತಾಸಕ್ತಿಗಳಿಗೆ ಭಾರಿ ಹೊಡೆತವಾಗುತ್ತದೆ ಎಂದು ವಾಷಿಂಗ್ಟನ್ ಆತಂಕಕ್ಕೀಡಾಗಿದೆ. ಇತ್ತೀಚೆಗೆ ಜಾರ್ಜಿಯಾದಲ್ಲಿ ನಡೆದ ಅಂತಃಕಲಹ ಹಾಗೂ ಅಧ್ಯಕ್ಷ ಎಡುವರ್ಡ್ ಷೆವರ್ನಾಡ್ಜೆ ಪದಚ್ಯುತಿ ಅಮೆರಿಕ ಪ್ರೇರಿತ ಎನ್ನುವುದು ಸರ್ವವಿದಿತ. ಅಮೆರಿಕಾಗೆ ಬೇಕಾಗಿರುವ ಮಿಖಾಯಿಲ್ ಸಕಾಶ್‌ವಿಲಿ ಈಗ ಜಾರ್ಜಿಯಾದ ಅಧ್ಯಕ್ಷ. ಈತ ಅಧಿಕಾರ ವಹಿಸಿಕೊಂಡ ಸಂದರ್ಭದಲ್ಲಿ ಅಮೆರಿಕದ ವಿದೇಶಾಂಗ ಸಚಿವ ಕಾಲಿನ್ ಪೊವೆಲ್ ಹಾಜರಿದ್ದುದು ಆಕಸ್ಮಿಕವೇನಲ್ಲ. ಜಾರ್ಜಿಯಾದಲ್ಲಿರುವ ರಷ್ಯನ್ ಸೇನೆಯನ್ನು ಹಿಂದಕ್ಕೆ ಕರೆಸಿಕೊಳ್ಳಬೇಕೆಂಬ ಬೇಡಿಕೆಗೆ ಪೊವೆಲ್ ದನಿಗೂಡಿಸಿದ್ದು ಆಶ್ಚರ್ಯವೇನಲ್ಲ. ರಷ್ಯಾದ ನಾಯಕರು ಅಮೆರಿಕದ ಈ ಕುತಂತ್ರಗಳನ್ನು ಧಿಕ್ಕರಿಸಿದ್ದಾರೆ. ಪೊವೆಲ್‌ರೊಂದಿಗೆ ಮಾತುಕತೆಯ ಕಾಲದಲ್ಲಿ ಮಾಸ್ಕೋದ ವರಿಷ್ಠರು ಜಾರ್ಜಿಯಾದಲ್ಲಿರುವ ಅಮೆರಿಕದ ಮಿಲಿಟರಿ ತರಬೇತುದಾರರನ್ನು ಹಿಂತೆಗೆದುಕೊಳ್ಳಬೇಕೆಂದು ಒತ್ತಾಯಪಡಿಸಿದ್ದಾರೆ. ಹಾಗೆಯೇ ಆಫ್ಘಾನಿಸ್ತಾನದ ಮೇಲೆ ಅಮೆರಿಕ ನಡೆಸಿದ ಸಮರದ ಸಮಯದಲ್ಲಿ ಉಜ್ಬೆಕಿಸ್ತಾನ ಮತ್ತು ಕಿರ್ಘಿಸ್ತಾನದಲ್ಲಿ ನೆಲೆಗೊಳಿಸಲಾಗಿದ್ದ ಅಮೆರಿಕದ ಸೇನೆಯನ್ನು ಹಿಂತೆಗೆದುಕೊಳ್ಳಬೇಕೆಂದೂ ರಷ್ಯಾ ಒತ್ತಾಯಪಡಿಸಿದೆ. ಅಮೆರಿಕ ತ ಸೇನೆಯನ್ನು ಅಲ್ಲಿ ಖಾಯಂ ಆಗಿ ನೆಲೆಗೊಳಿಸುವ ಸನ್ನಾಹದಲ್ಲಿತ್ತು. ಈ ಬಗೆಯಲ್ಲಿ ನಿಧಾನವಾಗಿ ರಷ್ಯಾದಲ್ಲಿ ಅಮೆರಿಕದ ಹಂಚಿಕೆಗಳಿಗೆ ಪ್ರತಿರೋಧ ಬರತೊಡಗಿದೆ. ರಷ್ಯಾ-ಅಮೆರಿಕಗಳ ಮಧ್ಯೆ ಮೊಳೆಯುತ್ತಿರುವ ಈ ವಿರಸ ಇನ್ನೂ ಸುಪ್ತವಾಗಿಯೇ ಇದೆ. ಬಹಿರಂಗವಾಗಿ ಇದನ್ನು ದೊಡ್ಡದು ಮಾಡಲು ಸದ್ಯದ ಪರಿಸ್ಥಿತಿಯಲ್ಲಿ ಅಮೆರಿಕಾಗೂ ಇಷ್ಟವಿಲ್ಲ ರಷ್ಯಾಗೂ ಇಷ್ಟವಿಲ್ಲ. ಎರಡೂ ದೇಶಗಳಲ್ಲಿ ಅಧ್ಯಕ್ಷೀಯ ಚುನಾವಣೆಗಳ ಭರಾಟೆ ಇರುವುದನ್ನು ಗಮನಿಸಬೇಕು. ಹಾಗಿದ್ದರೂ ಈ ಬೆಳವಣಿಗೆಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಲಾಗದು. ಏಕೆಂದರೆ ಯಾವುದೇ ಸಂದರ್ಭದಲ್ಲಾದರೂ ಒಡಂಬಡಿಕೆಗಳಾಗುವುದನ್ನು ತಳ್ಳಿಹಾಕುವಂತಿಲ್ಲ. ರಷ್ಯಾದಲ್ಲಿ ಸ್ವಾಭಿಮಾನ ಮೂಡಿ, ರಾಷ್ಟ್ರದ ಸ್ವಾತಂತ್ರ್ಯ, ಸಾರ್ವಭೌಮತ್ವವನ್ನು ಎತ್ತಿಹಿಡಿಯುವಂಥ, ಅಮೆರಿಕದ ಒತ್ತಡಗಳಿಗೆ ಮಣಿಯದೆ ಗೌರವ, ಘನತೆಗಳನ್ನು ಕಾಪಾಡಿಕೊಳ್ಳುವಂಥ ಭಾವನೆಗಳಿಂದ ಕೂಡಿದ ವ್ಯವಸ್ಥೆ ರೂಪುಗೊಂಡರೆ ಸ್ವಾಗತಾರ್ಹ.

ಸೀಯಾರ್ಕೆ
'ಚೌಬೀನ', ೮೪೯, ಬನಶಂಕರಿ ೩ನೇ ಹಂತ, ಕತ್ತರಗುಪ್ಪೆ, ಬೆಂಗಳೂರು - ೫೬೦ ೦೮೫

# ದಲಿತರ ಬಗ್ಗೆ ಒಂದು ಮೀಮಾಂಸೆ

೧೯೩೪ರಲ್ಲಿ ಬಿಹಾರಿನಲ್ಲಿ ಭೂಕಂಪ ನಡೆಯಿತು. ನಮ್ಮ ರಾಷ್ಟ್ರದಲ್ಲಿ ಹರಿಜನರ ವಿರುದ್ಧವಿರುವ ಅಸ್ಪೃಶ್ಯತಾ ಭಾವನೆಗೆ ಇದಿರಾಗಿ ದೇವರೇ ಕೊಟ್ಟ ಶಾಪದಿಂದ ಈ ಭೂಕಂಪ ನಡೆಯಿತು ಎಂದಿದ್ದರು ಅಂದು ಗಾಂಧೀಜಿ. ಇದು ದಲಿತರ ಕುರಿತು ಅವರ ಕಾಳಜಿಯನ್ನು ವ್ಯಕ್ತಪಡಿಸಿತ್ತು.

ಪಿ. ಎಲ್. ಎನ್. ಮೂರ್ತಿ

ನಮ್ಮ ರಾಷ್ಟ್ರದ ಇಂದಿನ ಜನಸಂಖ್ಯೆ ೧೦೩ ಕೋಟಿ, ಅದರಲ್ಲಿ ಸುಮಾರು ೨೦ ಕೋಟಿ ದಲಿತರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಶ್ರೇಣೀಕೃತ ಸಮಾಜದಲ್ಲಿ ಅವರಿಗೆ ಸ್ಥಾನವಿಲ್ಲ. ಎಷ್ಟೋ.ಕಾಲದ ನಂತರ ಅವರಿಗೆ ಪಂಚಮರೆಂಬ ಹೆಸರು ಕೊಡಲಾಯಿತು. ಗಾಂಧೀಜಿಯವರು ಅವರನ್ನು ಹರಿಜನರೆಂದು ಕರೆದರು. ಅವರೀಗ ತಮ್ಮನ್ನು ದಲಿತರೆಂದು ಕರೆದುಕೊಳ್ಳುತ್ತಿದ್ದಾರೆ.

ಬ್ರಿಟಿಷರ ಕಾಲದಲ್ಲಿ ಅವರಿಗೆ ಸಾರ್ವಜನಿಕ ಸ್ಥಳಗಳಲ್ಲಿ ಪ್ರವೇಶವನ್ನು ದೊರಕಿಸಿ ಕೊಡಲು ಅಸ್ಪೃಶ್ಯತಾ ಕಾಯಿದೆ ಒಂದನ್ನು ಜಾರಿಗೆ ತಂದಿತು. ಉದಾಹರಣೆಗಾಗಿ ಹೋಟೇಲುಗಳು, ಸಾರ್ವಜನಿಕ ಸ್ಥಳ. ಇಂತಹ ಹೋಟೇಲುಗಳಿಗೆ ದಲಿತರಿಗೆ ಪ್ರವೇಶ ದೊರೆಯುತ್ತಿರಲಿಲ್ಲ. ಅವರು ಹೋಟೇಲಿನ ಹಿಂದೆ ನಿಂತು ಅಲ್ಲಿಂದಲೇ ತಿಂಡಿ ತಿನಸುಗಳನ್ನು ಪಡೆದು ಅದರ ಬೆಲೆಯನ್ನು ಅಲ್ಲೇ ಹತ್ತಿರವಿಟ್ಟು ಹೋಗಬೇಕಾಗಿತ್ತು. ಇಂತಹ ಪರಿಚ್ಛೇದವನ್ನು ತಡೆಗಟ್ಟಲು ಅವರು ಜಾರಿಗೊಳಿಸಿದ ಕಾಯಿದೆ ಇದು. ಸವರ್ಣೀಯರಲ್ಲಿ ಅವರ ಮಟ್ಟಿಗೆ ಎಷ್ಟೊಂದು ನಿಕೃಷ್ಟ ಭಾವನೆ ಇದ್ದಿತ್ತು ಎಂಬುದಕ್ಕೆ ಇದೊಂದು ದೃಷ್ಟಾಂತ.

ನಮ್ಮ ಸಂವಿಧಾನದ ೩೩೦ ಮತ್ತು ೩೩೨ನೇ ವಿಧಿಗಳಲ್ಲಿ ದಲಿತರಿಗೆ ರಾಜಕೀಯ ಮೀಸಲಾತಿಯನ್ನು ನೀಡುವ ಅವಕಾಶಗಳನ್ನು ಕಾಯ್ದಿರಿಸಲಾಗಿದೆ. ೧೫(೪) ವಿಧಿಯಲ್ಲಿ ಶಿಕ್ಷಣ ಹಾಗೂ ಆರ್ಥಿಕ ಸವಲತ್ತುಗಳ, ೧೬(೪)ನೇ ವಿಧಿಯಲ್ಲಿ ಸರಕಾರಿ ನೌಕರಿಯಲ್ಲಿ ಅವರಿಗೆ ಶೇ. ೧೮ರಷ್ಟನ್ನು ಮೀಸಲಾತಿಯಾಗಿ ಅವರಿಗೆ ದೊರಕಿಸಿಕೊಡುವ ಅವಕಾಶವನ್ನು ಕಲ್ಪಿಸಲಾಗಿದೆ. ೧೯೫೫ರಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳವರ ಮೇಲೆ ಹಿಂಸಾಚಾರಗಳು ನಡೆಯದಂತೆ, ಹಾಗೇನಾದರೂ ದೌರ್ಜನ್ಯಗಳು ನಡೆದರೆ ನಡೆಸಿದವರ ವಿರುದ್ಧ ಸೂಕ್ತ ಕ್ರಮಗಳನ್ನು ಕೈಗೊಳ್ಳಲು ಮತ್ತೊಂದು ಕಾಯಿದೆಯನ್ನು ಸೃಷ್ಟಿಸಲಾಗಿದೆ.

ಮಹಾತ್ಮಾ ಗಾಂಧಿಯವರು ಈ ದಲಿತರ ಮಧ್ಯದಲ್ಲೇ ನಿಂತು ಅವರ ಕುರಿತು ಚಿಂತಿಸಿದರು. ಡಾ॥ ಅಂಬೇಡ್ಕರರು ಅಂಚಿನಲ್ಲಿ ನಿಂತು ಅವರಿಗೆ ಬೋಧಿಸಿದರು. ೧೯೩೪ರಲ್ಲಿ ಬಿಹಾರಿನಲ್ಲಿ ಭೂಕಂಪ ನಡೆಯಿತು. ನಮ್ಮ ರಾಷ್ಟ್ರದಲ್ಲಿ ಹರಿಜನರ ವಿರುದ್ಧವಿರುವ ಅಸ್ಪೃಶ್ಯತಾ ಭಾವನೆಗೆ ಇದಿರಾಗಿ ದೇವರೇ ಕೊಟ್ಟ ಶಾಪದಿಂದ ಈ ಭೂಕಂಪ ನಡೆಯಿತು ಎಂದಿದ್ದರು ಅಂದು ಗಾಂಧೀಜಿ. ಇದು ದಲಿತರ ಕುರಿತು ಅವರ ಕಾಳಜಿಯನ್ನು ವ್ಯಕ್ತಪಡಿಸಿತ್ತು.

ಇಂತಹ ಕೆಲವು ಕಾಯಿದೆಗಳಿಂದ ಈ ವಿಭಾಗದ ಜನರಿಗೆ ಗಣನೀಯ ರೀತಿಯಲ್ಲಿ ಪ್ರಯೋಜನವಾಗಿರುವುದಿಲ್ಲ ಎಂಬುದು ಸ್ವಯಂಸಿದ್ಧ. ಆದರೆ ಅವುಗಳಿಂದ ಪ್ರಯೋಜನ ಪಡೆದವರಲ್ಲಿ ಕೆಲವರು ಅವುಗಳನ್ನು ತಮ್ಮ ಸ್ವಂತಕ್ಕಾಗಿಯೇ ಉಪಯೋಗಿಸಿಕೊಂಡಿದ್ದಾರೆ. ಈ ದಲಿತರು ಈಗ ಅನೇಕ ಸಂಘಟನೆಗಳನ್ನು ಕಟ್ಟಿಕೊಂಡಿದ್ದಾರೆ. ಅವುಗಳಲ್ಲಿ ಅನೇಕ ಸಂಘಟನೆಗಳಿಗೆ ಗೊತ್ತುಗುರಿ ಎಂಬುದಿಲ್ಲ. ಈಗ್ಗೆ ಕೆಲವು ವರ್ಷಗಳ ಹಿಂದೆ ಮಂಗಳೂರಿನ ಅಂಚಿನಲ್ಲಿರುವ ಸೂರತ್‌ಕಲ್ಲಿನಲ್ಲಿ ಕೋಮುಗಲಭೆಗಳು ನಡೆದಿದ್ದವು. ಇವುಗಳಿಗೆ ಮೂಲ ಕಾರಣವೇನು, ಹಾಗೆಯೇ ಮೂಲ ಕಾರಣರು ಯಾರು ಎಂಬುದನ್ನು ಚರ್ಚಿಸಲು ಒಂದು ಸಭೆಯನ್ನು ಕರೆಯಲಾಗಿತ್ತು. ಅದರಲ್ಲಿ ವಿವಿಧ ಪಕ್ಷಗಳ ಮುಖಂಡರೂ, ಅನೇಕ ಬರಹಗಾರರೂ, ಹಾಗೆಯೇ ಸಾಹಿತಿಗಳು ಹಾಜರಿದ್ದರು. ಈ ಕುರಿತು ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಸಮಯವನ್ನೂ ನಿರ್ಧರಿಸಲಾಗಿತ್ತು. ಈ ಸಭೆಗೆ ಓರ್ವ ದಲಿತರ ಮುಖಂಡರೂ ಆಗಮಿಸಿದ್ದರು. ಅವರು ಸಮಯದ ಅವಧಿಯನ್ನು ನಿರ್ಲಕ್ಷಿಸಿ ಸಂಬಂಧಪಟ್ಟ ವಿಷಯಗಳನ್ನು ಬದಿಗಿಟ್ಟು ದೀರ್ಘವಾದ ಭಾಷಣವನ್ನು ಮಾಡಿದರು. ಎಲ್ಲಾ ಸಮಸ್ಯೆಗಳು ಪರಿಹಾರವಾಗಬೇಕಾದರೆ ಬ್ರಾಹ್ಮಣರಿಗೆ ಗೋಮಾಂಸವನ್ನು ತಿನ್ನಿಸಬೇಕು ಎಂದು ಬೋಧಿಸಿ ತನ್ನ ಭಾಷಣವನ್ನು ಮುಕ್ತಾಯಗೊಳಿಸಿದರು. ಇಂತಹ ಅವರ ಹೇಳಿಕೆ ಎಲ್ಲರಲ್ಲೂ ಒಂದು ರೀತಿಯ ದಿಗ್ಭ್ರಮೆಯನ್ನು ತಂದಿತ್ತು. ಹಾಗೆಯೇ ಅವರಲ್ಲಿ ಒಂದು ಅಸಹನೀಯ ಭಾವನೆಯನ್ನೂ ಕಲ್ಪಿಸಿತ್ತು. ನವಮಂಗಳೂರು ಸ್ಥಾಪನೆಯಾದ ಕಾಲದಲ್ಲಿ ಅಲ್ಲಿಯ ದಲಿತ ವರ್ಗಕ್ಕೆ ಸೇರಿದ ನೌಕರರು ಎಐಟಿಯುಸಿ, ಐಎನ್‌ಟಿಯುಸಿಗಳ ಸದಸ್ಯರಾಗಿದ್ದರು. ಕೆಲವೇ ಸಮಯದಲ್ಲಿ ಅವರದೇ ಆದ ಪ್ರತ್ಯೇಕವಾದ ಯೂನಿಯನ್ ಅನ್ನು ಕಟ್ಟಿದರು. ಈ ಬಂದರಿನಲ್ಲಿ ಈಗಲೂ ಗುತ್ತಿಗೆಯ ಆಧಾರದಲ್ಲಿ ನಾಲ್ಕನೆಯ ತರಗತಿಯ ಕೆಲಸಗಳು ನಡೆಯುತ್ತವೆ. ಅವುಗಳಲ್ಲಿ ಹೆಚ್ಚಿನ ಕೆಲಸಗಾರರು ಮಾಲಿಕವರ್ಗ ಮಾನ್ಯರುಗಳು. ಇವರೆಲ್ಲರೂ ಎಐಟಿಯುಸಿ ಸಂಘಟನೆಯಲ್ಲಿದ್ದಾರೆ. ಈ ತರಗತಿಯ ಖಾಯಂ ಕೆಲಸಗಾರರಿಗೆ ತಿಂಗಳೊಂದಕ್ಕೆ ಸುಮಾರು ೬,೦೦೦ ಸಂಬಳ ದೊರೆಯುತ್ತಿದೆ. ಆದರೆ ಗುತ್ತಿಗೆಯ ಆಧಾರದಲ್ಲಿ ದುಡಿಯುವ ಇದೇ ಕೆಲಸಗಾರರಿಗೆ ಮೊದಲಿಗೆ ದಿನವೊಂದಕ್ಕೆ ೪೦ರಿಂದ ೫೦ ರೂಪಾಯಿಗಳ ತನಕ ಮಾತ್ರ ಸಂಬಳವಿತ್ತು. ಕನಿಷ್ಠ ವೇತನದ ಕಾಯಿದೆಯ ಪ್ರಕಾರ – ಎಐಟಿಯುಸಿ ಯೂನಿಯನ್‌ನ ಸಾಧನೆಯಿಂದ – ಅವರಿಗೆ ದಿನವೊಂದಕ್ಕೆ ೭೦ರೂ. ವೇತನ ದೊರೆಯುತ್ತದೆ. ಗುತ್ತಿಗೆದಾರರ ಮೂಲಕ ಕೆಲಸ ಮಾಡುವ ಈ ಕೆಲಸಗಾರರ ಕೆಲಸ ಖಾಯಂ ಆಗುವಂತೆ ಹಾಗೆಯೇ ಖಾಯಂ ಕೆಲಸಗಾರರಿಗೆ ದೊರೆಯದ ಸಂಬಳ ಇವರಿಗೂ ದೊರೆಯುವಂತೆ ಒಟ್ಟಾಗಿ ಶ್ರಮಿಸಲು ಈ ದಲಿತರ ಸಂಘಟನೆ ಮುಖಂಡರೊಡನೆ ಎಐಟಿಯುಸಿಯ ಮುಖಂಡರು ಪ್ರಯತ್ನಿಸಿದರು. ಆದರೆ ದಲಿತರ ಯೂನಿಯನ್‌ನ ಮುಖಂಡರು ಇದಕ್ಕೆ ಮುಂದಾಗಲಿಲ್ಲ. ಕಾರಣ ಅವರಲ್ಲಿ ಇಡೀ ದಲಿತ ಸಮುದಾಯದ ಆಸಕ್ತಿ ಆಕಾಂಕ್ಷೆಗಳ ಕುರಿತು ಚಿಂತನೆ ಇಲ್ಲ. ಅದರ ಹೋರಾಟಗಳಿಗೆ ಖಾತ್ರಿಯಾದ ಸಿದ್ಧಾಂತವಿಲ್ಲ.

ತಮ್ಮ ಎಲ್ಲಾ ಕಷ್ಟಗಳಿಗೆ ಬ್ರಾಹ್ಮಣರು ಹಾಗೂ ಮನುವಾದಿಗಳೇ ಕಾರಣವೆಂಬ ಭಾವನೆ ಅವರಲ್ಲಿ ತುಂಬಿಹೋಗಿದೆ. ಉತ್ತರ ಪ್ರದೇಶದಲ್ಲಿ ಮಾಯಾವತಿಯವರು ಎರಡು ಬಾರಿ ಮುಖ್ಯಮಂತ್ರಿಯಾದರು. ಆಗ್ಯೆ ಅವರು ಏನೇ ತಪ್ಪು ಮಾಡಿರಲಿ, ಅವುಗಳಿಗೆ ಅವರು ಹುಡುಕುವುದು ಮನುವಾದಿಗಳನ್ನೇ. ಮುಖ್ಯಮಂತ್ರಿಯಾಗಿ ಧಾರಾಳವಾಗಿ ಹಣ ಮಾಡಿದರು. ಆಸ್ತಿಗಳನ್ನು ಕೂಡಿಹಾಕಿದರು. ತಾಜ್‌ಮಹಲ್‌ನ ಬಳಿ ವಾಣಿಜ್ಯ ವ್ಯವಸ್ಥೆಗಳಿಗೆ ಅವಕಾಶವಾಗುವ ಕಟ್ಟಡಗಳನ್ನು ಕಟ್ಟಿಸಲು ಆಲೋಚಿಸಿ ಅದರಲ್ಲೂ ಹಣ ಗಳಿಸಿದರು. ಇಂತಹ ದುಷ್ಟ ಕಾರ್ಯಗಳನ್ನು ಭ್ರಷ್ಟಾಚಾರಗಳನ್ನು ಎತ್ತಿಹಾಕಿದವರನ್ನು ಮನುವಾದಿಗಳೆಂದು ನಿಂದಿಸಿ ತನ್ನ ಈ ಕೆಲಸಗಳನ್ನು ಸಾಗಿಸುತ್ತಲೇ ಬಂದರು. ಆದರೆ ಅವರ ಈ ''ಸಂಪಾದನೆಗೆ'' ಅವಕಾಶ ಮಾಡಿಕೊಟ್ಟ ಮುಖ್ಯಮಂತ್ರಿ ಸ್ಥಾನವು ಅವರಿಗೆ ದೊರಕಿದ್ದು ನಿಜವಾಗಿಯೂ ಮನುವಾದಿಗಳಿಂದ. ಅಂದರೆ ಸಂಘಪರಿವಾರದಿಂದ.

ಈ ದಲಿತರ ಸಾಕಷ್ಟು ಸುಧಾರಣೆಗಳನ್ನು ಹಾಗೂ ಹಕ್ಕುಗಳನ್ನು, ಅಂತೆಯೇ ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗದಿರುವುದಕ್ಕೆ ಒಂದು ಮುಖ್ಯ ಕಾರಣವೆಂದರೆ ಬರೆ ಜಾತಿಯ ಆಧಾರದಲ್ಲಿ

ನಡೆಸುತ್ತಿರುವ ಅವರ ಹೋರಾಟಗಳು.

ಡಾ|| ರಾಮ ಮನೋಹರ ಲೋಹಿಯಾರವರು ಸಮಾಜವಾದಿ. ಸಮಾಜವಾದಿ ಕ್ರಮದ ನಿರ್ಮಾಣಕ್ಕೆ ಬದ್ಧರಾದ ವ್ಯಕ್ತಿ. ಭಾರತದಲ್ಲಿ ಜಾತಿ ಜಾತಿಗಳೊಳಗಿನ ಹೋರಾಟವೇ ವರ್ಗ ಹೋರಾಟವೆಂಬುದು ಅವರ ಸಿದ್ಧಾಂತ. ಅವರ ಈ ಸಿದ್ಧಾಂತವನ್ನು ಕೃತಿಗಿಳಿಸಿದ್ದು ಬಿಹಾರಿನಲ್ಲಿ. ಅಲ್ಲಿ ಅದು ನಿಷ್ಫಲವಾಯಿತು. ಅವರ ಪಟ್ಟ ಶಿಷ್ಯರಾದ ಜಾರ್ಜ್ ಫರ್ನಾಂಡಿಸ್, ನಿತೀಷ್ ಕುಮಾರರು, ಶರದ್ ಯಾದವ್‌ರು ಈಗ ಯಾರನ್ನು ಕೂಡಿಕೊಂಡಿದ್ದಾರೆ ? ಬಿಜೆಪಿಯನ್ನು ಸಂರಕ್ಷಿಸುವುದೇ ಫರ್ನಾಂಡಿಸರ ದಿನನಿತ್ಯದ ಕೆಲಸ. ನಿತೀಷ್ ಕುಮಾರರು ಹಣ ಗಳಿಸುವುದರಲ್ಲೇ ನಿರತರಾಗಿದ್ದಾರೆ. ಇತ್ತೀಚೆಗೆ ರೈಲ್ವೆ ಇಲಾಖೆಯಲ್ಲಿ ನಡೆದ ಹಗರಣಗಳೇ ಇದಕ್ಕೆ ದೃಷ್ಟಾಂತ. ಜೈನ್ ಹವಾಲದಲ್ಲಿ ತಾನು ಮೂರೂವರೆ ಲಕ್ಷ ರೂಪಾಯಿ ಪಡೆದಿದ್ದೇನೆ ಎಂದು ಶರದ್ ಯಾದವರು ಅಂದೇ ಒಪ್ಪಿಕೊಂಡಿದ್ದಾರೆ. ಆದುದರಿಂದ ಲೋಹಿಯಾರ ಸಿದ್ಧಾಂತ ದಲಿತರಿಗೆ ಎಳ್ಳಷ್ಟು ಸಹಾಯವಾಗದು ಎಂಬುದು ಇದರಿಂದ ಶತಃಸಿದ್ಧವಾಗಿದೆ.

ಡಾ|| ಅಂಬೇಡ್ಕರರವರು ಬ್ರಾಹ್ಮಣ್ಯವನ್ನು ಟೀಕೆಗೆ ಗುರಿಪಡಿಸಿದರು. ಇದು ಬಹುತೇಕವಾಗಿ ಸರಿ. ಆದರೆ ಇಂದಿನ ದಲಿತ ಮುಖಂಡರಲ್ಲಿ ಅನೇಕರು ಬ್ರಾಹ್ಮಣರನ್ನು ವೈಯಕ್ತಿಕವಾಗಿ ತಮ್ಮ ವಿಷಮ ಪರಿಸ್ಥಿತಿಗೆ ಕಾರಣವೆಂದು ದೂರಿಕೊಳ್ಳುತ್ತಾರೆ. ಅವರ ಈ ದೂರು ವಾಸ್ತವವಾಗಿ ಸಮಂಜಸವಾದುದಲ್ಲ. ಅವರ ಭಾಷಣಗಳಲ್ಲಿ, ಅವರು ನಡೆಸುವ ಪ್ರಚಾರ ಮಾಧ್ಯಮಗಳಲ್ಲಿ ಈ ಅಸಮಂಜಸವಾದ ದೂರುಗಳು ಕೇಳಿಬರುತ್ತವೆ. ಇಂದು ನಮ್ಮ ರಾಷ್ಟ್ರದ ಅಧಿಕಾರವನ್ನು ವಶಪಡಿಸಿಕೊಂಡವರು ಸಂಘಪರಿವಾರದವರು. ಅವರ ಗುರುಗಳಾದ ಗೋಳ್ವಾಲ್ಕರರ ಸಿದ್ಧಾಂತದ ಪ್ರಕಾರ ''ಹಿಂದುಗಳ'' ಪರಿಧಿಯಲ್ಲಿ ಈ ದಲಿತರಿಗೆ ಸ್ಥಳವಿಲ್ಲ, ಸ್ಥಾನವಿಲ್ಲ. ಅವರು ದಲಿತರನ್ನು ತಮ್ಮ ವರ್ಣ ಸಮಾಜದ ದಾಸರೆಂದೇ ಎಣಿಸುತ್ತಾರೆ. ಗುಜರಾತಿನಲ್ಲಿ ನಡೆದ ಹತ್ಯಾಕಾಂಡಕ್ಕೆ ಉಪಯೋಗಿಸಿದ್ದು ಈ ದಲಿತ ಸಮುದಾಯದ ಜನರನ್ನು. ತಾವು ಸಮೀಪದಲ್ಲಿ ನಿಂತು ಅತ್ಯಾಚಾರ ಹಿಂಸಾಚಾರಗಳನ್ನು ನಿರ್ದೇಶಿಸಿದ್ದು, ಕೂಲಿಯಾಳಿಗಾಗಿ ಅವರನ್ನು ಪ್ರಯೋಗಿಸಿದ್ದು ಬಿಹಾರಿನ ಭೂಮಾಲಿಕರಲ್ಲಿ ಬಿಜೆಪಿ ಮುಖಂಡರು ಹೆಚ್ಚಿನವರು. ಅವರು ರಣಭೀರ ಸೇನೆಯನ್ನು ಸಂಘಟಿಸಿ ದಲಿತರನ್ನು ಸದೆ ಬಡೆಯುತ್ತಿದ್ದಾರೆ. ಹರಿಯಾಣದ ಜಜ್ಜಾರಿನಲ್ಲಿ ಸಂಘಪರಿವಾರದ ಕರಸೇವಕರು ೫ ಮಂದಿ ದಲಿತರನ್ನು ಹತ್ಯಗೈದರು. ತಮಿಳುನಾಡಿನಲ್ಲಿಯ ಗೌಂಡರುಗಳೂ, ತೇವರರೂ-ಭೂಮಾಲಿಕರು-ದಲಿತರನ್ನು ಹೊಡೆದು ಬಡಿದು ಪ್ರಾಣಿಗಳಂತೆ ದುಡಿಯಿಸುತ್ತಿದ್ದಾರೆ.

ಈಗ್ಯೆ ಸುಮಾರು ಎರಡೂವರೆ ತಿಂಗಳ ಹಿಂದೆ ಆರ್‌ಎಸ್‌ಎಸ್‌ನ ಅತ್ಯಂತ ಉನ್ನತ ಅಧಿಕಾರಿಯಾದ ಸುದರ್ಶನರವರು ಬಿಹಾರಿನ ರಾಂಚಿಯಲ್ಲಿ ಮಾಡಿದ ಭಾಷಣದಲ್ಲಿ ಹಿಂದುಗಳ ಸಂಖ್ಯೆ ಈಗ್ಯೆ ೬೯ ಕೋಟಿಗೆ ಇಳಿದಿದೆ ಎಂದರು. ೨೦೦೧ರ ಜನಗಣತಿಯ ಪ್ರಕಾರ ನಮ್ಮ ರಾಷ್ಟ್ರದ ಒಟ್ಟು ಜನಸಂಖ್ಯೆ ೧೦೩ ಕೋಟಿ. ಅವರಲ್ಲಿ ೨ ಕೋಟಿ ಕ್ರೈಸ್ತರು. ೧೩ ಕೋಟಿ ಮುಸ್ಲಿಮರು. ಒಟ್ಟು ೧೦೩ ಕೋಟಿಯಲ್ಲಿ ೧೫ ಕೋಟಿ ಈ ಅಲ್ಪಸಂಖ್ಯಾತರಾದರೆ ಉಳಿದ ೧೯ ಕೋಟಿ ಯಾರು ? ಅವರೇ ಈ ದಲಿತರು. ಅವರನ್ನು ಸಂಘಪರಿವಾರದವರು ಇಂದಿಗೂ ಹಿಂದುಗಳೆಂದೆಣಿಸುವುದಿಲ್ಲ ಎಂಬುದಕ್ಕೆ ಇದೊಂದು ಖಾತ್ರಿಯಾದ ಪುರಾವೆ.

ಬಂಗಾರು ಲಕ್ಷ್ಮಣರು ದಲಿತ ಸಮುದಾಯಕ್ಕೆ ಸೇರಿದ ವ್ಯಕ್ತಿ. ತೆಹಲ್ಕಾ ಹಗರಣದಲ್ಲಿ ಅವರು ಲಂಚ ಪಡೆದುದಕ್ಕೆ ಅವರನ್ನು ಬಿಜೆಪಿಯ ಅಧ್ಯಕ್ಷ ಸ್ಥಾನದಿಂದ ಕಿತ್ತೆಸೆದರು. ತನ್ನನ್ನು ಈಗ ಯಾರೂ ಕೇಳುವವರು ಇಲ್ಲ. ಬಿಜೆಪಿಯ ಬರೇ ಸಾಮಾನ್ಯ ಸದಸ್ಯನಾಗಿ ಕೆಲಸ ಮಾಡಲು ಕೂಡಾ ತನಗೆ ಅವಕಾಶವೀಯುತ್ತಿಲ್ಲ ಎಂದು ಅವರು ಇತ್ತೀಚೆಗೆ ತನ್ನ ವ್ಯಥೆಯನ್ನು ತೋಡಿಕೊಂಡರು. ಜಾರ್ಜ್ ಫರ್ನಾಂಡಿಸರ ಮನೆಯಲ್ಲೇ ಈ ಹಗರಣ ನಡೆಯಿತು. ಬರೇ ನೋಟಕ್ಕಾಗಿ ಫರ್ನಾಂಡಿಸರು ತನ್ನ ಸ್ಥಾನ ಬಿಟ್ಟು ಮೂರು ತಿಂಗಳುಗಳೂ ಕೂಡಾ ಆಗಿರಲಿಲ್ಲ. ಅವರನ್ನು ಪುನಃ ಏನೊಂದು ಶರ್ತಗಳಿಲ್ಲದೆ ಸಚಿವ ಸಂಪುಟಕ್ಕೆ ಸೇರಿಸಲಾಯಿತು. ಜಂಜಿ ರಾಮಚಂದ್ರರನ್ನು ಕೂಡಾ ಇದೇ ರೀತಿಯಲ್ಲಿ ಮಂತ್ರಿ ಸ್ಥಾನಕ್ಕೆ ಸೇರಿಸಲಾಯಿತು. ಹಾಗಾದರೆ ಈ ಬಂಗಾರು ಲಕ್ಷ್ಮಣರನ್ನು ಹೊರಗೆ ಅಟ್ಟಿ ಪಕ್ಷದಿಂದಲೇ ದೂರವಿಟ್ಟಿರುವ ಕಾರಣವೇನು ? ಅವರು ದಲಿತರಲ್ಲಿ ಒಬ್ಬ. ಅದುವೇ ಕಾರಣ.

ಇತ್ತೀಚೆಗೆ ತೀರ್ಥಹಳ್ಳಿಯ ಹತ್ತಿರದ ಗ್ರಾಮವೊಂದರಲ್ಲಿ ಒಂದೇ ಕುಟುಂಬಕ್ಕೆ ಸೇರಿದ [illegible] ಮಂದಿ ದಲಿತರು ಆತ್ಮಹತ್ಯೆ ಮಾಡಿಕೊಂಡರು. ಮೇಲ್ಜಾತಿಯ ಬಿಜೆಪಿ ಮುಖಂಡರೊಬ್ಬರು ಅವರ ವಿರುದ್ಧವಾಗಿ ಕಳ್ಳತನದ ಆರೋಪವನ್ನು ಅನ್ಯಾಯವಾಗಿ ಹೊರಿಸಿದ್ದೇ ಇದಕ್ಕೆ ಕಾರಣ. ಇಂದು ಕೇಂದ್ರ ಸರಕಾರದಲ್ಲಿರುವ ಅರುಣ ಶೌರಿಯವರು ವರ್ಣಾಶ್ರಮ ಧರ್ಮದ ಪೋಷಕ ಸಂಘ ಪರಿವಾರದ ತತ್ವದ ಸಿದ್ಧಾಂತಿ. ಕಮ್ಯುನಿಸ್ಟರ ಕುರಿತು ಅವರ ದ್ವೇಷಕ್ಕೆ ಎಲ್ಲೆಯೇ ಇಲ್ಲ. ಸೆಕ್ಯುಲರಿಸ್ಟರ ವೈರಿ. ಬಿಜೆಪಿ ಪಕ್ಷಕ್ಕೆ ಹಣಗೂಡಿಸುವ ಹರಿಕಾರ. ಇಂತಹ ಮನುಷ್ಯ ಅಂಬೇಡ್ಕರರ ಕುರಿತು ಒಂದು ಪುಸ್ತಕವನ್ನು ಬರೆದಿದ್ದಾರೆ. ಈ ಪುಸ್ತಕದ ಹೆಸರು ''ಸುಳ್ಳು ದೇವರು''ಗಳು ಎಂದು. ಅವರ ಚಾರಿತ್ರ್ಯದ ಹರಣ ಮಾಡುವುದೇ ಈ ಪುಸ್ತಕದ ಉದ್ದೇಶ. ಆ ಪುಸ್ತಕವನ್ನು ಓದಿದವರಿಗೆ ಮಾತ್ರ ಅವರಲ್ಲಿರುವ ದಲಿತರ ವಿರುದ್ಧದ ದ್ವೇಷದ ಪ್ರಖರತೆಯನ್ನು ಅರ್ಥಮಾಡಿಕೊಳ್ಳಲು ಸಾಧ್ಯ.

ಅಯೋಧ್ಯೆಯಲ್ಲಿ ಬಾಬ್ರಿ ಮಸೀದಿಯನ್ನು ಕೆಡವಲು ಅಂದಿನ ಯುಪಿಯ ಮುಖ್ಯಮಂತ್ರಿ ಕಲ್ಯಾಣಸಿಂಗರನ್ನು ಸಂಘ ಪರಿವಾರದವರು ಸಂಪೂರ್ಣವಾಗಿ ಉಪಯೋಗಿಸಿದರು. ಅವರ ಉದ್ದೇಶ ಸಾಧನೆಯಾದೊಡನೆ ಅವರ ಹಠಾವ್ ನಡೆಯಿತು. ಅವರು ಬರೇ ಹಿಂದುಳಿದ ಜನಾಂಗಕ್ಕೆ ಸೇರಿದ ವ್ಯಕ್ತಿ. ಇದನ್ನು ಅವರೇ ಸ್ಪಷ್ಟವಾಗಿ ಹೇಳಿದ್ದಾರೆ. ಈಗ ಮತ್ತೆ ವಾಪಸ್ಸಾಗಿದ್ದಾರೆ.

ಹೀಗಿರುವ ಒಂದು ಪಕ್ಷದ ಆ ಆಡಳಿತೆಯಿಂದ ಈ ದಲಿತರು ಯಾವೊಂದೂ ಸಹಾಯ, ಸಹಕಾರ ಹಾಗೆಯೇ ಪ್ರಯೋಜನಗಳನ್ನು ನಿರೀಕ್ಷಿಸುವುದು ಬರೀ ಒಂದು ಮರೀಚಿಕೆಯಷ್ಟೆ. ಯಾವ ವ್ಯಕ್ತಿಯೇ ಆಗಲಿ ಸಾಮಾನ್ಯವಾಗಿ ಆತನು ಸಂಘ ಪರಿವಾರಕ್ಕೆ ಸೇರಿದನೆಂದರೆ, ದುರಹಂಕಾರ ಹಾಗೆಯೇ ದುಷ್ಟತೆಗಳು ಆತನನ್ನು ಆವರಿಸುತ್ತವೆ. ನಂತರ ಆತನು ಅವುಗಳನ್ನು ಸಂಪೂರ್ಣವಾಗಿ ಮೈಗೂಡಿಸಿಕೊಳ್ಳುತ್ತಾನೆ. ಬೆಂಗಳೂರಿನ ಸಮೀಪದ ಆನೆಕಲ್ಲಿನಲ್ಲಿ ನಡೆದ ಘಟನೆಯು ಇದಕ್ಕೊಂದು ದೃಷ್ಟಾಂತ. ತಮ್ಮ ಪಕ್ಷಕ್ಕೆ ಸೇರಿದ ಪುರಸಭೆಯ ಅಧ್ಯಕ್ಷೆಯಾಗಿದ್ದ ಮಹಿಳೆಯೋರ್ವರಿಗೆ ಉಳಿದ ಬಿಜೆಪಿ ಸದಸ್ಯರು ಮಾನಸಿಕವಾಗಿ ಹಿಂಸೆ ನೀಡಿ ಅವರ ಸಾವಿಗೆ ಕಾರಣರಾದರು. ನವೆಂಬರ್ ತಿಂಗಳ 'ಹೊಸತು'ವಿನ ಸಂಪಾದಕೀಯವನ್ನು (ನೀವು ಈತನಕ ಓದದಿದ್ದರೆ) ದಯವಿಟ್ಟು ಓದಿ. ಈ ಮಂದಿಗಳ ಅಘೋರ ಕೃತ್ಯಗಳ ಅಘೋರತೆಯನ್ನು ಅದರಲ್ಲಿ ತೀವ್ರವಾಗಿ ಬಯಲಿಗೆ ಎಳೆಯಲಾಗಿದೆ. ಸದ್ಭಾವನೆಯಿಂದ ಕೂಡಿದ ಯಾವ ಮನುಷ್ಯನ ಹೃದಯದ ಅಂತರ್ಜಲವನ್ನು ಕುಕ್ಕುವ ಘಟನೆ ಇದು. ಅವರ ದುಷ್ಟತನ ಅಘೋರತೆಯನ್ನು ಪ್ರದರ್ಶಿಸುವ ಕೃತ್ಯವೂ ಆಗಿದೆ. ಈ ರೀತಿಯಲ್ಲಿ ನಿಸ್ಸಹಾಯಕವಾಗಿರುವ ದಲಿತರಿಗೆ ಗತಿ ಏನು ?

ನಮ್ಮ ರಾಷ್ಟ್ರದಲ್ಲಿ ದಲಿತರಿಗಿಂತಲೂ ದರಿದ್ರರಾದ ಜನರು ಕೋಟಿ ಸಂಖ್ಯೆಯಲ್ಲಿದ್ದಾರೆ. ಅವರೆಲ್ಲರೂ ಅಸಂಘಟಿತ ವಲಯಗಳಲ್ಲಿ ಕೆಲಸ ಮಾಡುವವರು. ಈ ಮೊದಲು ಸಂಘಟಿತರಾದ ಕಾರ್ಮಿಕರು ನೌಕರರೂ ತಮ್ಮ ಸ್ಥಿತಿಗತಿಗಳನ್ನು ಸಾಕಷ್ಟು ಮಟ್ಟಿಗೆ ಉತ್ತಮ ಪಡಿಸಿಕೊಂಡಿದ್ದಾರೆ ಎಂಬುದು ನಿರ್ವಿವಾದ. ಅವರು ತಮ್ಮ ವರ್ಗ ಹೋರಾಟಗಳಿಂದಲೇ ತಮ್ಮ ಸ್ಥಿತಿಗತಿಗಳನ್ನು ಬದಲಾಯಿಸಿಕೊಂಡದ್ದು. ಅವರಿಗೆ ಇದಕ್ಕೆ ಸಹಾಯವಾದದ್ದು ವರ್ಗಹೋರಾಟ. ಮಾರ್ಕ್ಸ್ ತತ್ವವೇ ಈ ವರ್ಗ ಹೋರಾಟಕ್ಕೆ ಆಧಾರ. ಆದುದರಿಂದ ದಲಿತರು ತಮ್ಮ ಶ್ರೇಯಸ್ಸಿಗೆ ಇತರ ಜನಾಂಗಗಳ ಕಾರ್ಮಿಕರೊಡನೆ ಕೂಡಿಕೊಂಡು ತಮ್ಮ ವರ್ಗ ಶಕ್ತಿಯನ್ನು ವರ್ಧಿಸಿಕೊಂಡು ಅವರೊಡನೆ ಕೂಡಿ ಹೋರಾಡಿದರೆ ಮಾತ್ರ ಅವರ ಕೂಗು, ಬಡತನ ಧ್ವನಿ, ದೌರ್ಜನ್ಯಗಳನ್ನು ತಾಳಲಾರದಿರುವ ಹಾಹಾಕಾರಗಳಿಗೆ ಪರಿಹಾರಗಳನ್ನು ದೊರಕಿಸಿಕೊಳ್ಳಬಹುದು. ಇಂತಹ ವರ್ಗಗಳ ಒಕ್ಕೂಟಗಳಿಂದ ಅದರೊಳಗೆ ಒಗ್ಗಟ್ಟು ಉಂಟಾಗುತ್ತದೆ. ಶಿಸ್ತು ಕ್ರಮಗಳು ಅಸ್ತಿತ್ವಕ್ಕೆ ಬರುತ್ತವೆ. ಸಂಖ್ಯೆ ಬಲವಾದೊಡನೆ ಒಂದು ಹೊಸ ಉತ್ಸಾಹ ಹುಮ್ಮಸ್ಸುಗಳು ತಾನಾಗಿಯೇ ಹುಟ್ಟಿ ಬರುತ್ತವೆ. ಮಾರ್ಕ್ಸ್ ಸಿದ್ಧಾಂತಗಳು ಇಂತಹ ಹೋರಾಟಗಳ ಮುಂಚೂಣಿಯಾಗಿ ನಿಂತಿರುತ್ತವೆ. ಇದರಲ್ಲಿ ಅವರು ಸಂದೇಹ ಪಡಬೇಕೆಂದಿಲ್ಲ. ಮಾರ್ಕ್ಸಿಸ್ಟ್ ತತ್ವವನ್ನು ಸ್ವೀಕರಿಸಿದವರಲ್ಲಿ ಅಪ್ರಾಮಾಣಿಕರು ಇಲ್ಲ. ಇದ್ದರೂ ಅವರ ಸಂಖ್ಯೆ ಬಹು ಕಡಿಮೆ. ಈ ವಾಸ್ತವತೆಯನ್ನು ಎಷ್ಟು ಶೀಘ್ರವಾಗಿ ದಲಿತ ನಾಯಕರು ಅರ್ಥ ಮಾಡಿಕೊಂಡರೂ ಅಷ್ಟೇ ಶೀಘ್ರವಾಗಿ ಅವರಿಗೆ ಒಳಿತು ಪ್ರಾಪ್ತವಾಗುವುದು ಖಂಡಿತ.


ಪಿ. ಎಂ. ಎನ್. ಮೂರ್ತಿ
೪.೨ ೨೩೭/೨೪, ಭಾರತೀನಗರ, ಬಿಜೈ, ಮಂಗಳೂರು - ೫೭೫ ೦೦೪

# ನಕಲಿ ಔಷಧಿಯ ಹಾವಳಿಗೆ ಮರಣದಂಡನೆ ಪರಿಹಾರವೇ ?

**ಡಾ॥ ಪ್ರಕಾಶ್ ಸಿ. ರಾವ್**

**ಕೇಂ**ದ್ರ ಆರೋಗ್ಯ ಸಚಿವೆ ಸುಶ್ಮಾ ಸ್ವರಾಜ್ ೧೦.೦೭.೨೦೦೩ರಂದು ಎನ್.ಡಿ.ಟಿ.ವಿ. ಚಾನಲ್‌ನ ಸಂದರ್ಶನದಲ್ಲಿ ಮಾತನಾಡುತ್ತ ಸರಕಾರ ಮುಂದಿನ ಸಂಸತ್ತಿನ ಅಧಿವೇಶನದಲ್ಲಿ ನಕಲಿ ಔಷಧಿ ತಯಾರಕರು ಹಾಗೂ ವ್ಯಾಪಾರಿಗಳಿಗೆ ಮರಣದಂಡನೆ ವಿಧಿಸಲು ಅಗತ್ಯ ವಿರುವ ಕಾನೂನನ್ನು ರಚಿಸುವುದಾಗಿ ಹೇಳಿಕೆ ನೀಡಿ ಎಲ್ಲರ ಗಮನವನ್ನು ಸೆಳೆದಿದ್ದಾರೆ.

ಅವರ ವಾದ ''ನಕಲಿ ಔಷಧಿ ತಯಾರಕರು ಹಾಗೂ ಮಾರಾಟಗಾರರು ಹಣದ ಆಸೆಗಾಗಿ ಸಾಮೂಹಿಕ ಹತ್ಯೆ ಮಾಡುತ್ತಿದ್ದಾರೆ. ಅವರಿಗೆ ಮರಣದಂಡನೆ ವಿಧಿಸಬೇಕು. ಮರಣದಂಡನೆಯ ಭಯದಲ್ಲಿ ಈ ಕೃತ್ಯಗಳನ್ನು ಇತರರು ಮಾಡದಂತೆ ತಡೆಯಬಹುದಾಗಿದೆ'' ಎಂಬುದಾಗಿತ್ತು. ಸಾಮಾನ್ಯವಾಗಿ ರಾಜಕಾರಣಿಗಳು ಇತರರ ಹೇಳಿಕೆಯನ್ನು ನಕಲು ಮಾಡುತ್ತಾರೆ ಹಾಗೂ ಭಾವೋದ್ರೇಕತೆಯನ್ನು ಉಂಟುಮಾಡುತ್ತಾರೆ ಎಂಬುದು ಎಲ್ಲರಿಗೂ ಗೊತ್ತಿರುವ ವಿಷಯ. ಶ್ರೀಮತಿ ಸುಶ್ಮಾ ಸ್ವರಾಜ್ ಏನೂ ಬೇರೆಯಲ್ಲ.

ಭಾರತದಲ್ಲಿ ನಕಲಿ ಔಷಧಿಗಳ ಹಾವಳಿ ಹೆಚ್ಚುತ್ತಿದೆ. ಇತ್ತೀಚೆಗೆ ವಿಶ್ವ ಆರೋಗ್ಯ ಸಂಸ್ಥೆ ನಕಲಿ ಔಷಧಿಗಳ ಬಗ್ಗೆ ಕಳವಳ ವ್ಯಕ್ತಪಡಿಸಿದೆ. ಕರ್ನಾಟಕದಲ್ಲಿ ಲೋಕಾಯುಕ್ತ, ''ನಕಲಿ ಔಷಧಿ ಹಾವಳಿಯನ್ನು ತಡೆಹಿಡಿಯದೇ ಔಷಧಿ ನಿಯಂತ್ರಣ ಮಂಡಳಿ ಬೇಜವಾಬ್ದಾರಿಯಿಂದ ವರ್ತಿಸಿದೆ'' ಎಂದು ತೋರಿಸಿಕೊಟ್ಟಿದೆ. ನಕಲಿ ಔಷಧಿ ತಯಾರಿಸಿ ಮಾರುವುದು ಅಪರಾಧವೇ ಸರಿ. ನಕಲಿ ಔಷಧಿ ತಯಾರಕರನ್ನು ಹಾಗೂ ಮಾರಾಟಗಾರರನ್ನು ಗುರುತಿಸಲು ಔಷಧಿ ನಿಯಂತ್ರಣ ಮಂಡಳಿಗೆ ಸಾಧ್ಯವಿದೆ. ಈ ಸೌಲಭ್ಯವನ್ನು ಔಷಧಿ ನಿಯಂತ್ರಣ ಮಂಡಳಿ ಇಲ್ಲಿಯವರೆಗೆ ಉಪಯೋಗಿಸಿಯೇ ಇಲ್ಲವೆಂದು ಹೇಳಬಹುದಾಗಿದೆ. ಔಷಧಿ ನಿಯಂತ್ರಣದ ಹತೋಟಿಯನ್ನು ಬಲಪಡಿಸುವುದರ ಬದಲು ಮರಣದಂಡನೆ ಹೇಗೆ ಸಮಸ್ಯೆಗೆ ಉತ್ತರವಾಗಬಹುದು ? ಇನ್ನೊಂದು ಮುಖ್ಯವಾದ ಅಂಶವೇನೆಂದರೆ, ಔಷಧಿ ತಯಾರಿಕಾ ಕ್ಷೇತ್ರದ ಹಲವಾರು ಜ್ವಲಂತ ಸಮಸ್ಯೆಗಳು ಇಂದಿಗೂ ಕಡೆಗಣಿಸಲ್ಪಟ್ಟಿವೆ. ಈ ಸಮಸ್ಯೆಗಳು ನಕಲಿ ಔಷಧಿ ಸಮಸ್ಯೆಗಳಿಗಿಂತ ಹೆಚ್ಚು ಅಪಾಯವುಂಟುಮಾಡುವಂತಹವು. ಆದರೂ ಸರಕಾರ ನಕಲಿ ಔಷಧಿಗಳನ್ನು ನಿರ್ಮೂಲನ ಮಾಡಲು ಮಾಡುವ ಪ್ರಯತ್ನ ಸರಿ, ಆದರೆ ವಿಧಾನ ?

**ನಕಲಿ ಔಷಧಿ**

ಯಾವುದೇ ಔಷಧಿಯಲ್ಲಿ ವೈಜ್ಞಾನಿಕವಾಗಿ ರುಜುವಾತಾದ ಘಟಕವಿರುವುದಿಲ್ಲವೋ ಆ ಔಷಧಿ ಪರಿಣಾಮಕಾರಿಯಾಗಿರದೆ ಅಪಾಯ ಉಂಟುಮಾಡಬಹುದಾಗಿದೆಯೋ ಆ ಔಷಧಿಯನ್ನು ನಕಲಿ ಔಷಧಿಯೆಂದು ಕರೆಯಬಹುದಾಗಿದೆ. ಸಾಮಾನ್ಯವಾಗಿ ಈ ಔಷಧಿಗಳು ಕಡಿಮೆ ಗುಣಮಟ್ಟದ ಔಷಧಿಗಳಾಗಿರುತ್ತವೆ. ನಕಲಿ ಔಷಧಿಯ ಬಣ್ಣ, ರುಚಿ ಬೇರೆಯಾಗಿರಲು ಸಾಧ್ಯವಿದೆ. ಮತ್ತು ಕಡಿಮೆ ಬೆಲೆಯಲ್ಲಿ ದೊರಕಲು ಸಾಧ್ಯವಿದೆ.

ನಕಲಿ ಔಷಧಿ ತಯಾರಿಕೆಗೆ ಎರಡು ಮುಖ್ಯ ಕಾರಣಗಳನ್ನು ಗುರುತಿಸಬಹುದು : (೧) ಔಷಧಿ ತಯಾರಿಕೆಯಲ್ಲಿ ನಿರ್ಲಕ್ಷ್ಯ ಮತ್ತು (೨) ಹಣದ ದುರಾಸೆ. ನಕಲಿ ಔಷಧಿಗಳು ದೊಡ್ಡ ಔಷಧಿ ಕಂಪೆನಿಗಳಲ್ಲಿಯೇ ತಯಾರಾಗಬೇಕಾಗಿಲ್ಲ. ಸಣ್ಣ ಶೆಡ್ಡಿನಲ್ಲಿ (shed) ಸಣ್ಣ ಉದ್ಯಮಿಗಳೇ ಈ ಔಷಧಿಗಳನ್ನು ತಯಾರಿಸುತ್ತಾರೆ ಮತ್ತು ಔಷಧಿ ನಿಯಂತ್ರಣ ಮಂಡಳಿಯನ್ನು ಬುಟ್ಟಿಗೆ ಹಾಕಿಕೊಂಡು ಅವುಗಳನ್ನು ವಿತರಿಸಲು ಪ್ರಯತ್ನಿಸುತ್ತಾರೆ. ಔಷಧಿ ನಕಲಿಯೇ ಅಲ್ಲವೇ ಎಂಬುದನ್ನು ಗ್ರಾಹಕ ಅಥವಾ ವೈದ್ಯ ತೀರ್ಮಾನಿಸಲು ಆಗುವುದಿಲ್ಲ. ಆದರೆ ನಕಲಿ ಔಷಧಿಯನ್ನು ಔಷಧಿ ನಿಯಂತ್ರಣ ಮಂಡಳಿ ಪತ್ತೆಹಚ್ಚಲು ಸಾಧ್ಯವಿದೆ.

ನಕಲಿ ಔಷಧಿ ಹಾವಳಿ ಜಗತ್ತಿನ ಸುಮಾರು ಎಲ್ಲ ದೇಶಗಳಲ್ಲಿಯೂ ಇರುವುದು ಕಂಡುಬಂದಿದೆ. ಮುಂದುವರಿದ ರಾಷ್ಟ್ರಗಳಲ್ಲಿ ಹೆಚ್ಚೆಚ್ಚು ಉಪಯೋಗಿಸುವ ಹಾರ್ಮೋನುಗಳು, ಸ್ಟೀರಾಯ್ಡ್‌ಗಳು, ಆಂಟಿಹಿಸ್ಟಮಿನ್‌ಗಳು ನಕಲಿ ಎಂದು ಕಂಡುಬಂದರೆ, ಭಾರತದಲ್ಲಿ ದೊರೆಯುವ ಮಲೇರಿಯಾ, ಕ್ಷಯರೋಗದ ಔಷಧಿಗಳು, ನೋವು ನಿವಾರಕಗಳು ನಕಲಿಯೆಂದು ವಿಶ್ವ ಆರೋಗ್ಯ ಸಂಸ್ಥೆ ಹೇಳುತ್ತದೆ.

ಭಾರತದಲ್ಲಿ ಸುಮಾರು ೧೭೦೦೦ ಕೋಟಿ ರೂಪಾಯಿಯ ಔಷಧಿ ವಹಿವಾಟಿದೆ. ಅದರಲ್ಲಿ ಸುಮಾರು ೪೦೦೦ ಕೋಟಿ ರೂಪಾಯಿಯಷ್ಟು ನಕಲಿ ಔಷಧಿಗಳಿವೆಯೆಂದು ಅಂದಾಜು ಮಾಡಲಾಗಿದೆ. ಆದರೆ ಔಷಧಿ ನಿಯಂತ್ರಣ ಮಂಡಳಿ ಈ ವಿಷಯದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಿಲ್ಲ ಹಾಗೂ ಈ ಹಾವಳಿಯನ್ನು ಸರಿಪಡಿಸಲು ಪ್ರಯತ್ನಿಸಿಲ್ಲ. ಔಷಧಿ ನಿಯಂತ್ರಣವೇ ಔಷಧಿಯ ಉತ್ಪಾದನೆ, ಆಮದು, ಹಂಚಿಕೆ ಹಾಗೂ ಮಾರಾಟದ ಜವಾಬ್ದಾರಿಯನ್ನು ತೆಗೆದುಕೊಂಡಲ್ಲಿ ನಕಲೀ ಔಷಧಿಗಳನ್ನು ತಡೆಗಟ್ಟಬಹುದಾಗಿದೆ.

ನಮ್ಮಲ್ಲಿ ಔಷಧಿಗೆ ಸಂಬಂಧಪಟ್ಟ ಕಾನೂನು ಸಾಕಷ್ಟು ಪರಿಣಾಮಕಾರಿಯಾಗಿರುವುದರಿಂದ, ಅಗತ್ಯ ಬಿದ್ದಾಗ ಪೊಲೀಸ್ ಹಾಗೂ ನ್ಯಾಯಾಲಯದ ಸಹಾಯದಿಂದ ಈ ಅಪರಾಧವನ್ನು ಪತ್ತೆಹಚ್ಚಿ ತಡೆಗಟ್ಟಬಹುದಾಗಿದೆ. ವಿಶ್ವ ಆರೋಗ್ಯ ಸಂಸ್ಥೆ ಎಲ್ಲ ದೇಶಗಳಿಗೆ ಔಷಧಿ ಕಾನೂನು, ಒಳ್ಳೆಯ ತಯಾರಿಕೆಯ ಅಭ್ಯಾಸಗಳು, ರಾಷ್ಟ್ರೀಯ ಔಷಧೀಯ ನಿಯಂತ್ರಣಕ್ಕೆ ಅಗತ್ಯವಾದ ಮಾಹಿತಿ, ಗುಣಮಟ್ಟ ಪರೀಕ್ಷೆಯ ಸೂತ್ರಗಳನ್ನು ತಿಳಿಸಲು, ನಕಲಿ ಔಷಧಿಗಳನ್ನು ಕಂಡುಹಿಡಿಯಲು ಹಾಗೂ ತಡೆಗಟ್ಟಲು ಸಾಕಷ್ಟು ಮಾಹಿತಿ ಕೊಡುತ್ತಿದೆ. ದೇಶದ ಹಿತದೃಷ್ಟಿಯಿಂದ ಈ ವಿಷಯಗಳ ಅಧ್ಯಯನ ಮಾಡಿ ಬೆಳಕುಚೆಲ್ಲಬೇಕಾಗಿರುವ ಔಷಧಿ ನಿಯಂತ್ರಣ ಮಂಡಳಿಗಳೇ ಭ್ರಷ್ಟಾಚಾರಗಳಲ್ಲಿ ಮುಳುಗಿರುವಾಗ (ಕರ್ನಾಟಕ ಔಷಧಿ ಹಗರಣ – ೨೦೦೩), ಔಷಧಿ ತಯಾರಕರು ಹಾಗೂ ಮಾರಾಟ ಮಾಡುವವರಿಗೆ ಮರಣ ದಂಡನೆ ವಿಧಿಸುವ ಕ್ರಮ ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಇಂಜೆಕ್ಷನ್ ಕೊಟ್ಟಂತಾಗುತ್ತದೆ !

ಸರಕಾರ ಹಾಗೂ ಔಷಧಿ ನಿಯಂತ್ರಣ ಇನ್ನೂ ಅನೇಕ ವಿಷಯಗಳನ್ನು ಮೊದಲಿನಿಂದಲೂ ಕಡೆಗಣಿಸುತ್ತಾ ಬಂದಿವೆ. ಭಾರತ ಔಷಧಿ ಕ್ಷೇತ್ರದಲ್ಲಿ ಪ್ರಗತಿ



## ನಕಲಿ ಔಷಧಿಗಳನ್ನು ಜನಸಾಮಾನ್ಯರೂ ಪತ್ತೆ ಹಚ್ಚಬಹುದು

ನಕಲಿ ಔಷಧಿಗಳನ್ನು ಪತ್ತೆಹಚ್ಚುವುದು ಅಷ್ಟು ಸುಲಭದ ಕೆಲಸವಲ್ಲದಿದ್ದರೂ, ಜನಸಾಮಾನ್ಯರು ಇದರ ಬಗ್ಗೆ ಸ್ವಲ್ಪ ಜಾಗರೂಕತೆ ವಹಿಸಿದಲ್ಲಿ ನಕಲಿ ಔಷಧಿಗಳನ್ನು ಪತ್ತೆ ಹಚ್ಚಬಹುದಾಗಿದೆ.

೧. ನೀವು ಮೊದಲೊಮ್ಮೆ ಉಪಯೋಗಿಸಿದ ಔಷಧಿಯನ್ನು ಇನ್ನೊಮ್ಮೆ ಉಪಯೋಗಿಸಿದಾಗ ಅದರ ರುಚಿ, ವಾಸನೆ, ಇತ್ಯಾದಿಗಳಲ್ಲಿ ಬದಲಾವಣೆ ಕಂಡರೆ ಅದು ನಕಲಿ ಔಷಧಿಯಾಗಿರಲು ಸಾಧ್ಯವಿದೆ.

೨. ಔಷಧಿಯ ಬಾಟಲಿನ ಮೇಲೆ ನಮೂದಿಸಿದ ಹೆಸರು, ಪ್ರಮಾಣ, ತಯಾರಕರ ಹೆಸರು, ಬ್ಯಾಚ್ ನಂಬರು, ಯಾವ ತಾರೀಖಿನವರೆಗೆ ಉಪಯೋಗಿಸಬಹುದು ಎಂಬುದನ್ನು ಪರೀಕ್ಷಿಸಿದಾಗ ಬದಲಾವಣೆ ಕಂಡಲ್ಲಿ ಅದು ನಕಲಿ ಔಷಧಿಯಾಗಿರಲು ಸಾಧ್ಯ.

೩. ಔಷಧಿಯಲ್ಲಿ ಬದಲಾವಣೆ ಅಂದರೆ, ಮಾತ್ರೆ ಪುಡಿ ಪುಡಿಯಾಗುವುದು, ಮಾತ್ರೆ ಮೇಲ್ಭಾಗ ಸೀಳಿರುವುದು, ಕ್ಯಾಪ್ಸೂಲಿನಲ್ಲಿ ಔಷಧಿ ಇಲ್ಲದಿರುವುದು, ಕುಡಿಯುವ ಔಷಧಿಯಲ್ಲಿ ಔಷಧಿ ಪದರಪದರವಾಗಿ ನಿಂತಿರುವುದು, ರುಚಿ ವಾಸನೆಯಲ್ಲಿ ಬದಲಾವಣೆ, ಮುಂತಾದವುಗಳಿಂದ ನಕಲಿ ಔಷಧಿಯನ್ನು ಪತ್ತೆ ಹಚ್ಚಬಹುದಾಗಿದೆ.

ನಕಲಿ ಔಷಧಿ ಇರಬಹುದೆಂದು ಅನುಮಾನ ಬಂದಾಗ ಔಷಧಿಯ ರಸೀತಿಯೊಂದಿಗೆ ಔಷಧಿಯನ್ನು ಔಷಧಿ ನಿಯಂತ್ರಣ ಅಧಿಕಾರಿಗಳಿಗೆ ತೋರಿಸಿ ದೂರು ಕೊಡಬಹುದಾಗಿದೆ.

ಸಾಧಿಸಿದರೂ, ಕೆಲವು ನಕಾರಾತ್ಮಕ ಬೆಳವಣಿಗೆಗಳು ದೇಶದ ಔಷಧಿ ಕ್ಷೇತ್ರದ ಪ್ರಗತಿಯನ್ನು ಮೊಟಕುಗೊಳಿಸಿವೆ. ನಕಲಿ ಔಷಧಿ ಹಾವಳಿಯಷ್ಟೇ ಅಪಾಯ ಈ ನಕಾರಾತ್ಮಕ ಬೆಳವಣಿಗೆಯಿಂದ ಆಗಿದೆ. ಇವುಗಳ ಬಗ್ಗೆ ಸರಕಾರ ಔಷಧಿ ನಿಯಂತ್ರಣ ಮಂಡಳಿಗಳು ತುರ್ತಾಗಿ ವಿಚಾರ ಮಾಡಿ, ತೀರ್ಮಾನ ತೆಗೆದುಕೊಳ್ಳಬೇಕಾಗಿದೆ.

೧. ವಿಶ್ವ ಆರೋಗ್ಯ ಸಂಸ್ಥೆಯ ಅಗತ್ಯ ಔಷಧ ಪಟ್ಟಿಯನ್ನು ಭಾರತ ಇಲ್ಲಿಯವರೆಗೂ ಜಾರಿಗೆ ತಂದಿಲ್ಲ.
೨. ಭಾರತದಲ್ಲಿ ಅಗತ್ಯ ಔಷಧಿಗಳ ಕೊರತೆ ಕಂಡುಬರುತ್ತದೆ.
೩. ಮಾರುಕಟ್ಟೆಯಲ್ಲಿ ಅನಗತ್ಯ ಔಷಧಿಗಳೇ ಹೇರಳವಾಗಿ ದೊರೆಯುತ್ತಿವೆ. ನಿಷೇಧಿಸಲು ಯೋಗ್ಯವಾದ, ಇತರೇ ದೇಶಗಳಲ್ಲಿ ನಿಷೇಧವಾದ, ಅಪಾಯಕಾರಿ ಔಷಧಿಗಳು ಸುಲಭವಾಗಿ ದೊರೆಯುತ್ತಿವೆ. ಔಷಧಿ ಕ್ರಿಯಾ ವೇದಿಕೆಗಳು ಈ ವಿಷಯಗಳನ್ನು ಹಲವಾರು ಬಾರಿ ಪ್ರಸ್ತಾಪ ಮಾಡಿವೆ ಹಾಗೂ ಸರಕಾರದ ನೀತಿಯ ವಿರುದ್ಧ ಪ್ರತಿಭಟಿಸಿವೆ.
೪. ಔಷಧಿ ಬೆಲೆಗಳು ದಿನನಿತ್ಯ ಏರುತ್ತಿವೆ.
೫. ಔಷಧಿ ದುರಂತಗಳು ಸಂಭವಿಸುತ್ತಿವೆ.
೬. ಔಷಧಿ ಮಾರುಕಟ್ಟೆಗೆ ಬಿಡುಗಡೆಯಾದ ನಂತರ ಔಷಧಿಯ ಅಡ್ಡ ಪರಿಣಾಮ ಹಾಗೂ ಇತರೆ ವಿಷಯಗಳ ಬಗ್ಗೆ ಔಷಧಿ ನಿಯಂತ್ರಣ ಮಂಡಳಿ ಜಾಗರೂಕತೆ ವಹಿಸುತ್ತಿಲ್ಲ.

ಈ ಎಲ್ಲಾ ಸಮಸ್ಯೆಗಳು ಮೊದಲಿನಿಂದಲೇ ಇದ್ದರೂ ಇವುಗಳ ಬಗ್ಗೆ ಸರಕಾರ ಎಳ್ಳಷ್ಟೂ ಯೋಚನೆ ಮಾಡದೆ ಚುನಾವಣೆ ಸಮಯದಲ್ಲಿ ದಿಢೀರನೆ ನಕಲಿ ಔಷಧಿಗಳ ಬಗ್ಗೆ ಭಾವೋದ್ರೇಕತೆ ಹುಟ್ಟಿಸಿ ಜನರ ಗಮನ ಸೆಳೆಯುವ ಪ್ರಕ್ರಿಯೆ ಎಷ್ಟರಮಟ್ಟಿಗೆ ಸರಿ ಎಂಬುದನ್ನು ಜನರೇ ತೀರ್ಮಾನಿಸಬೇಕಾಗಿದೆ.

**ಡಾ|| ಪ್ರಕಾಶ್ ಸಿ. ರಾವ್**
ನಂ. ೭೩/೨, ಮೊದಲನೇ 'ಆರ್' ಬಡಾವಣೆ, ರಾಜಾಜಿನಗರ
ಬೆಂಗಳೂರು - ೫೬೦ ೦೧೦

## ಸರ-ಹದ್ದು

**ಈ** ನೆಲದ ಮೇಲೆ
ಮನುಷ್ಯರ ನಡುವೆ
ಬೆಳೆದ ಬೇಲಿಯ ಲೆಕ್ಕ ಹಾಕುತ
ನಿಂತುಕೊಂಡಿದ್ದೆ ನಾನು
ಸರಹದ್ದಿನ ಈಚೆ ಬದಿ.

ಸರಹದ್ದಿನ ಆಚೆ ಬದಿ
ಮನುಷ್ಯರ ಕೈಗಳಿಗೆ ಬೇಲಿ-
ಕಟ್ಟುವ ಕೆಲಸ
ಕಂದರ ತೋಡುವ ತರಾತುರಿ.

ಈ ಸರಹದ್ದುಗಳಿಗೆ ಹೊಂದಿಕೊಂಡೇ
ಬೆಳೆದ ಗಿಡದಲ್ಲೊಂದು ಪುಟ್ಟ ಹಕ್ಕಿ.

ದುರ್ಬೀನು ಹಿಡಿದು ನೋಡಿದೆ
ಇರಲಿಲ್ಲ-
ಹಕ್ಕಿಯ ರೆಕ್ಕೆಯ ಮೇಲೆ
ಒಂದು ದೇಶದ ನಿಶಾನೆ.

ಬೇಲಿ ಕಟ್ಟುವ ತಲೆಗಳ ಮೇಲೆ
ಹಾರುವ ಹಕ್ಕಿ
ಸರಹದ್ದಿನ ಆಚೆ ಬದಿಯೊಮ್ಮೆ
ಈಚೆ ಬದಿಯೊಮ್ಮೆ ಕೂತು ಹಾಡುತ್ತಿತ್ತು.

ಕಿವಿಗೊಟ್ಟು ಆಲಿಸಿದೆ
ಹಕ್ಕಿಯ ಹಾಡಿನ ರಾಗ
ಯಾವ ಭಾಷೆಯ ಗುತ್ತಿಗೆಗೂ ಸಿಲುಕಿರಲಿಲ್ಲ.



ಕೊಂಚ ಸೋಜಿಗದ ಸಂಗತಿ;
ಭಾಷೆಯಿಲ್ಲದ ಹಕ್ಕಿಯ ಹಾಡಿನ ಇಂಪಿಗೆ
ನೂರು ಭಾಷೆಯಾಡುವ ಮನುಷ್ಯರು ತಲೆತೂಗಿದ್ದು
ಹೊತ್ತು-ಗೊತ್ತಿಲ್ಲದೆದ್ದ ಸರಹದ್ದಿನ ಗದ್ದಲ
-ಕೆ ಕಂಪಿಸಿದ ಹಕ್ಕಿ

ಗಡಿಯ ಆ ಕಡೆ ಈ ಕಡೆ ರೆಕ್ಕೆಯಾಡಿಸಿ
ತೇಲಿತು ಸೀಮೆಗಳಿರದ ನೀಲಾಕಾಶದಲಿ.

ಎಂಥ ಮಾಯೆ ! ಕ್ಷಣಾರ್ಧದಲಿ
ನಗುವ ನಗರದ ತುಟಿಗಳಿಗೆ
ಕರ್ಫ್ಯೂವಿನ ಸಿಡಿಲು
ಗಲ್ಲಿಗಳಲಿ ಕತ್ತಲೆಯ ಕಾವಲು
ಎಲ್ಲೆಡೆ ಧಾವಂತದ ಹೆಜ್ಜೆ ಸಪ್ಪಳ

ಸುತ್ತಿ ಸುಳಿಯಿತು ಗಾಳಿಗುಂಟ ಗಾಳಿಸುದ್ದಿ
ನೋಡ-ನೋಡುತ್ತಲೆ
ನಗರವೆಂಬುದು ಸಾವಿರ ಆರ್ತನಾದಗಳ ಒಡಲು
ಸಾವು ನೋವಿನ ನರಳಿಕೆಗಳ ಕಡಲು
ಬೀದಿಗಳ ತುಂಬ ರಕ್ತವೇ ರಂಗೋಲಿ
ಮೊಳಗುವ ಸೈರನ್ನೇ ಜೋಗುಳ.

ಮುಚ್ಚಿದ ಮನೆಗಳಲ್ಲಿ
ಭಯದ ಕಂದೀಲಿಗಷ್ಟೆ ಉರಿವ ತಾಕತ್ತು !

ಕೋಣೆಯ ಭದ್ರ ಬಾಗಿಲುಗಳೊಳಗೆ
ಕಿಟಕಿಯ ಕಿಂಡಿಯಲ್ಲಿ ದೃಷ್ಟಿ ನೆಟ್ಟು
ಅಭದ್ರ ಜೀವ ಮಿಡಿತದ ನಾನು
ನೋಡುತ್ತಲೇ ಇದ್ದೇನೆ.
ಮನುಷ್ಯರು ಕಟ್ಟಿಕೊಂಡ
ಮನುಷ್ಯರ ಜೀವ ನುಂಗಿದ ಸರಹದ್ದನೊಮ್ಮೆ
ಬೇಸತ್ತ ಬದುಕಿಗೆ ಜೀವ ತುಂಬಲು
ಹಾಡುವ ಹಕ್ಕಿ ಹಾರಿ ಹೋದ ಹಾದಿಯನ್ನೊಮ್ಮೆ

**ವಿಭಾ**
ಕಛೇರಿ ಸಹಾಯಕಿ, ವಿಭಾಗೀಯ ಅಂಚೆ ಕಛೇರಿ, ಬಾಗಲಕೋಟೆ



ಇಂಗ್ಲಿಷ್ ಮೂಲಕೃತಿ QUEST ಅನ್ನು
ಕನ್ನಡಕ್ಕೆ ಅನುವಾದಿಸಿದವರು
ಜೀವೂಬಾಯಿ ಲಕ್ಷ್ಮಣರಾವ್.
**ನವಕರ್ನಾಟಕ ಪ್ರಕಾಶನ**
ಪುಟಗಳು : ೩೫೬ ರೂ. ೧೮೦

## ಶೋಧ

# ಲಿಯೋಪಾಲ್ಡ್ ಇನ್‌ಫೆಲ್ಡ್ ಅವರ ಆತ್ಮಕಥೆ

ಲಿಯೋಪಾಲ್ಡ್ ಇನ್‌ಫೆಲ್ಡ್ (೧೮೯೮-೧೯೬೮) ಪೋಲೆಂಡಿನ ಮಧ್ಯಮ ವರ್ಗದ ಯೆಹೂದ್ಯ ಕುಟುಂಬದಲ್ಲಿ ಜನಿಸಿದರು. ಯೂರೋಪಿನಲ್ಲಿ ಯೆಹೂದ್ಯ ದ್ವೇಷದ ಕಾವು ಏರುತ್ತಿದ್ದ ದಿನಗಳವು. ಉದಾತ್ತ ಭಾವ, ತೀಕ್ಷ್ಣಮತಿ, ವಿಜ್ಞಾನದಾಹ ಮತ್ತು ಗುರಿಸಾಧಕ ಛಲ ಇವು ಅವರ ವ್ಯಕ್ತಿತ್ವವನ್ನು ರೂಪಿಸಿದ್ದುವು. ಮನೆಯಲ್ಲಿ ಕರ್ಮಠ ಯೆಹೂದ್ಯ ಧಾರ್ಮಿಕ ಸಂಪ್ರದಾಯ, ಹೊರಗೆ ಪ್ರಚ್ಛನ್ನ ಯೆಹೂದ್ಯ ದ್ವೇಷವಿದ್ದರೂ ಈ ಯುವಕ ಸಭ್ಯ ಸುಸಂಸ್ಕೃತ ಪಥದಿಂದ ವಿಚಲಿತನಾಗಲಿಲ್ಲ. ಜರ್ಮನಿ, ಇಂಗ್ಲೆಂಡ್, ಕೆನಡಾ ಮುಂತಾದ ವಿದೇಶಗಳಲ್ಲಿ ಸಂಶೋಧಕ, ಅಧ್ಯಾಪಕರಾಗಿ ಹೆಸರು ಗಳಿಸಿದರು. ಆದರೂ ಸ್ಥಿರ ನೆಲೆ ಒದಗಲಿಲ್ಲ, ಮನಃಸ್ವಾಸ್ಥ್ಯ ಲಭಿಸಲಿಲ್ಲ – ಯೆಹೂದ್ಯ ಕುಲಜ ಎಂಬ ಏಕೈಕ ಕಾರಣಕ್ಕಾಗಿ.

೧೯೨೦ರಲ್ಲಿ ಬರ್ಲಿನ್ನಿಗೆ ಹೋಗಿ ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫) ಅವರನ್ನು ಕಂಡು ಹುಟ್ಟಿನ ಆಕಸ್ಮಿಕತೆಯಿಂದ ತಮ್ಮ ವಿಜ್ಞಾನ ಪರಿವ್ರಜನಕ್ಕೆ ಎದುರಾಗುತ್ತಿದ್ದ ಪ್ರತಿರೋಧವನ್ನು ವಿವರಿಸಿದರು, ಜರ್ಮನಿಯಲ್ಲಿ ಸಂಶೋಧನೆ ಮುಂದುವರಿಸಲು ಮಾರ್ಗದರ್ಶನ ಬೇಕೆಂದು ಕೋರಿದರು. ಆ ವೇಳೆಗೆ ಐನ್‌ಸ್ಟೈನ್ ತಮ್ಮ ಯುಗಪ್ರವರ್ತಕ ಆವಿಷ್ಕಾರಗಳಿಂದ (ಸಾಪೇಕ್ಷತಾ ಸಿದ್ಧಾಂತಗಳು – ವಿಶೇಷ ೧೯೦೫, ಸಾರ್ವತ್ರಿಕ ೧೯೧೫; ವಿಶ್ವ ವೇದಶಾಲೆಯಲ್ಲಿ ಎರಡನೆಯದರ ಸ್ಥಿರೀಕರಣ ೧೯೧೯) ಪ್ರಪಂಚ ಪ್ರಸಿದ್ಧರಾಗಿದ್ದರು. ಆದರೂ ಇವರು ಯೆಹೂದ್ಯ ಕುಲಜರು, ಎಂದೇ ಸಮಕಾಲೀನ ಸರ್ಕಾರ ಮತ್ತು ಸಮಾಜ ದೃಷ್ಟಿಯಲ್ಲಿ 'ಅಸ್ಪೃಶ್ಯ'ರು. ನಿಜ, ದ್ವೇಷಮಾರ್ಗ ತರ್ಕಶಿಲಾ ರಚಿತವಲ್ಲ, ಅಲ್ಲವೇ ?

ಇನ್‌ಫೆಲ್ಡ್ ಬರೆದಿದ್ದಾರೆ (ಕನ್ನಡ ಅನುವಾದದಿಂದ ಉದ್ಧೃತ). "ನಾನು ಜಾಗರೂಕತೆಯಿಂದ ಸಿದ್ಧಮಾಡಿಕೊಂಡಿದ್ದ ಮಾತುಗಳನ್ನು ಸಂಪೂರ್ಣವಾಗಿ ಮರೆತುಬಿಟ್ಟೆ. ಐನ್‌ಸ್ಟೈನ್‌ರು ನಗುಮುಖದಿಂದ ನನ್ನತ್ತ ನೋಡಿ ಒಂದು ಸಿಗರೇಟನ್ನು ನೀಡಿದರು. ನಾನು ಬರ್ಲಿನ್ನಿಗೆ ಬಂದಾಗಿನಿಂದ ನನಗೆ ದೊರೆತ ಪ್ರಥಮ ಆತ್ಮೀಯ ಮುಗುಳ್ನಗೆ ಅದಾಗಿದ್ದಿತು. ನನ್ನ ಪರಿಸ್ಥಿತಿಯನ್ನು ಸಂಕ್ಷಿಪ್ತವಾಗಿ ಅವರಿಗೆ ಹೇಳಿದೆ. ಅವರು ಅದನ್ನು ಜಾಗರೂಕತೆಯಿಂದ ಕೇಳಿಸಿಕೊಂಡರು. ಬೇರೆ ಎಲ್ಲ ಕಡೆಯಲ್ಲಿಯೂ ನಾನು ಎದುರಿಸಿದ್ದಂಥ ಅಸಹನೆಯಾಗಲೀ ಸಂದರ್ಶನ ಮುಗಿಸಿಬಿಡಬೇಕೆಂಬ ಕಾತರವಾಗಲೀ ಯಾವುದೂ ಅವರಲ್ಲಿ ಇರಲಿಲ್ಲ." (ಪುಟ ೯೪)

ತಮ್ಮ ಶಿಫಾರಸುಗಳಿಗೆ ಜರ್ಮನಿಯಲ್ಲಿ ಕವಡೆ ಕಿಮ್ಮತ್ತೂ ಇಲ್ಲ, ತಾವು ಈಗಾಗಲೇ ಕೊಟ್ಟಿರುವ ಹಲವಾರು ಪತ್ರಗಳು ಹೇಗೆ ವ್ಯರ್ಥವಾಗಿವೆ ಎಂಬ ನಗ್ನ ವಾಸ್ತವತೆಯನ್ನು ಐನ್‌ಸ್ಟೈನ್ ಅತ್ಯಂತ ಕಳಕಳಿಯಿಂದ ವಿವರಿಸಿದರು, ಮತ್ತು ಮೆತ್ತಗೆ ಉಸುರಿದರು, "ಅವರು ಯೆಹೂದ್ಯ ದ್ವೇಷಿಗಳು." ('ಅವರು' ಎಂದರೆ ಜರ್ಮನ್ ವ್ಯವಸ್ಥಾಪನೆ.)

ಯೆಹೂದ್ಯ ದ್ವೇಷವೆಂಬ ದಾವಾನಲದಿಂದ ಉದ್ಭವಿಸಿದ ಘೋರ ರಾಕ್ಷಸ ಅಡಾಲ್ಫ್ ಹಿಟ್ಲರ್ (೧೮೮೯-೧೯೪೫). ಈತ ಮತ್ತು ಈತನ ದುಷ್ಟಕೂಟ ತಮ್ಮನ್ನು ತಾವೇ ಆರ್ಯರು ಆದ್ದರಿಂದ ರಾಷ್ಟ್ರನಾಯಕರಾಗಬೇಕಾದವರು, ಯೆಹೂದ್ಯರಾದರೋ ಅನಾಗರಿಕರು, ಆದ್ದರಿಂದ ನಾಶಗೊಳಿಸಲ್ಪಡಬೇಕಾದವರು ಎಂದು ಬಣ್ಣಿಸುತ್ತಿದ್ದರು. ೧೯೩೦ರ ದಶಕದಲ್ಲಿ ಯೆಹೂದ್ಯ ಮೇಧವನ್ನು ವ್ಯವಸ್ಥಿತವಾಗಿ ತೊಡಗಿದರು. ಇವರ ಪರಮ ಶತ್ರು ಐನ್‌ಸ್ಟೈನ್, ಈತ ಪ್ರವರ್ತಿಸಿದ ವಿಜ್ಞಾನ ಪೂರ್ತಿ ಕಲುಷಿತ ಹೀಗೆ ಸಾಗಿತ್ತು ಮಾರಿಯ ಮೂರಿಯ ಭೂರಿ ಮೆರವಣಿಗೆ. ಹಿಟ್ಲರ್-ನರಕಾಸುರ ಕೊನೆಗೂ ಜರ್ಮನಿಯ ಅಧಿಕಾರ ಚುಕ್ಕಾಣಿಯನ್ನು ಹಿಡಿದೇ ಹಿಡಿದ (೩೦.೦೧.೧೯೩೩) – "ಮಾರಿಗೌತಣವಾಯ್ತು ನಾಳಿನ" ಜರ್ಮನಿ, ಜೊತೆಯಲ್ಲಿ ಆಸುಪಾಸಿನ ರಾಷ್ಟ್ರಗಳೂ ಕೂಡ.

ಜರ್ಮನಿಯಲ್ಲಿ ಅವಕಾಶ ದೊರೆಯದೇ ಇನ್‌ಫೆಲ್ಡ್ ಪೋಲೆಂಡಿಗೆ ಮರಳಿದರು. ವಯಸ್ಸು ೨೩ರಲ್ಲಿ ಪಿಎಚ್.ಡಿ. ಪದವಿ ಪಡೆದು ಪೋಲೆಂಡಿನ ಪ್ರಪ್ರಥಮ ಸೈದ್ಧಾಂತಿಕ ಭೌತವಿಜ್ಞಾನಿ ಎನಿಸಿಕೊಂಡರು. ಆಗ ಆ ದೇಶದಲ್ಲಿ ಎಲ್ಲ ಪ್ರಾಧ್ಯಾಪಕ ಪೀಠಗಳನ್ನು ಭರ್ತಿಸಲು ಸಾಕಷ್ಟು ಪದವೀಧರರೇ ಇರಲಿಲ್ಲ. ಇನ್‌ಫೆಲ್ಡರಿಗಾದರೋ ಸಮಸ್ತ ಅರ್ಹತೆಯೂ ಇತ್ತು. ಆದರೆ ಈ ಯೆಹೂದ್ಯನಿಗೆ ಮಾತ್ರ ಯಾವುದೂ ದಕ್ಕದಂತೆ ವ್ಯವಸ್ಥಾಪನೆ ಕುತಂತ್ರ ಹೂಡಿತು. "ಮುಂದಿನ ಎಂಟು ವರ್ಷ ನಾನು ಶಾಲಾ ಉಪಾಧ್ಯಾಯನಾಗಿದ್ದೆ. ಮೂರು ವರ್ಷಗಳ ಕಾಲ ನಗರಗಳಿಂದ ದೂರದಲ್ಲಿದ್ದೆ, ಸ್ವಲ್ಪ ಹೆಚ್ಚು ಕಡಿಮೆ ಹತ್ತು ಸಾವಿರ ನಿವಾಸಿಗಳೂ ಯೆಹೂದ್ಯರೇ ಆಗಿದ್ದ, ಸಣ್ಣ ಸಣ್ಣ ಪೋಲಿಷ್ ಪ್ರಾಂತೀಯ ಊರುಗಳಲ್ಲಿ ಬೋಧಿಸಿದೆ. ನಾನು ಪಾಠ ಹೇಳಿದ ಮಕ್ಕಳು ಎಂಥ ಹಿನ್ನೆಲೆಯಿಂದ ಬಂದವರೆಂದರೆ, ಅವರಿಗೆ ಹೋಲಿಸಿದರೆ ನನ್ನ ಮನೆಯವರು ತುಂಬ ಮುಂದುವರಿದವರು ಎನ್ನಿಸುತ್ತಿತ್ತು. ನನ್ನ ಸುತ್ತಲ ವರ್ತುಲ ಮುಚ್ಚಿಕೊಂಡಿತ್ತು. ಕ್ರ್ಯಾಕೋ ಘೆಟ್ಟೋದಿಂದ ಹೊರಕ್ಕೆ ಹೋಗಲು ನಾನು ಎಷ್ಟೇ ಪ್ರಯತ್ನಿಸಿದರೂ ಕೊನೆಗೆ ಒಂದು ದೊಡ್ಡ ಘೆಟ್ಟೋವೇ ಆಗಿದ್ದ ಊರನ್ನೇ ಸೇರಿದೆ." (ಪುಟ ೧೦೫)

ಇನ್‌ಫೆಲ್ಡ್ ಪ್ರೀತಿಸಿ ಮದುವೆಯಾದ ಸಮಾನಶೀಲ ಮನಸ್ಕೆ ಹೆಲೀನ ತೀವ್ರ ನರಸಂಬಂಧಿ ವ್ಯಾಧಿಯಿಂದ ನರಳಿ ನರಳಿ ಅಸುನೀಗಿದರು. ಈಕೆಯ ಶುಶ್ರೂಷೆಗೆ ಈ ಯುವ ಪತಿ ಅರ್ಪಿಸಿದ ಸೇವೆ ಅನ್ಯಾದೃಶವಾದದ್ದು. ಆದರೆ ಎದುರಾದದ್ದು ವೈಫಲ್ಯ. ಇತ್ತ ಇವರನ್ನು ಇನ್ನೊಂದು ಭೂತವೂ ಕಾಡತೊಡಗಿತು : ಕಮ್ಯೂನಿಸ್ಟ್ ಎಂಬ ಆರೋಪ, ಆದ್ದರಿಂದ ಅವಕಾಶಗಳ ನಿರಾಕರಣೆ. ತೋಳ-ಕುರಿಮರಿ ವ್ಯಾಜ್ಯದಲ್ಲಿ ನ್ಯಾಯ ಸದಾ ತೋಳದತ್ತಲೇ ಇರುವುದಲ್ಲವೇ ?

ಮುಂದೇನು ? ಪೋಲೆಂಡಿಗೆ ಹೋಲಿಸಿದಾಗ ತುಸು ವಿವೃತವಾಗಿದ್ದ ಇಂಗ್ಲೆಂಡಿಗೆ ರಾಕ್‌ಫೆಲ್ಲರ್ ಫೆಲೋಶಿಪ್ ಪಡೆದು ತೆರಳಿದರು. ಅಲ್ಲಿ ಪ್ರಸಿದ್ಧ ಸೈದ್ಧಾಂತಿಕ ಭೌತವಿಜ್ಞಾನಿ ಪಾಲ್ ಡಿರಾಕ್ (೧೯೦೨-೮೪) ಅವರನ್ನು ಭೇಟಿ ಮಾಡಿ ಭೌತವಿಜ್ಞಾನ ವಿಷಯ ಮಾತಾಡಿದರು. ಮ್ಯಾಕ್ಸ್ ಬಾರ್ನ್ (೧೮೮೨-೧೯೭೦) ಜೊತೆ ಸಹಸಂಶೋಧಕರಾಗಿ ವಿಜ್ಞಾನ ಶೋಧವನ್ನು ಮುಂದುವರಿಸಿದರು. ಈ ಸಹಯೋಗದ ಫಲವಾಗಿ ಇಬ್ಬರ ಸಂಯುಕ್ತ ಲೇಖಕತ್ವದಲ್ಲಿ ಬರೆದ ಸಂಶೋಧನ ಪ್ರಬಂಧಗಳು Nature ಮತ್ತು Proceedings of the Royal Society ಎನ್ನುವ ಪ್ರತಿಷ್ಠಿತ ವಿಜ್ಞಾನ ನಿಯತಕಾಲಿಕಗಳಲ್ಲಿ ಪ್ರಕಟವಾದುವು. "ನನ್ನ ಜೀವಮಾನದಲ್ಲಿ ಮೊದಲ ಬಾರಿಗೆ ನಾನು ಒಬ್ಬ ಪ್ರಖ್ಯಾತ ಭೌತವಿಜ್ಞಾನಿಯ ನಿಕಟ ಸಂಪರ್ಕ ಪಡೆದಿದ್ದೆ. ಈ ಸಂಬಂಧದಿಂದ ನಾನು ಸಾಕಷ್ಟು ವಿಷಯಗಳನ್ನು ಕಲಿತೆ.

**ಜಿ. ಟಿ. ನಾರಾಯಣರಾವ್**

ಬಾರ್ನ್‌ರವರು ನನ್ನೊಡನೆ ಮಾತನಾಡಬೇಕೆಂದೆನಿಸಿದಾಗಲೆಲ್ಲ ನಮ್ಮ ಮನೆಗೇ ಸೈಕಲ್ ಮೇಲೆ ಬರುತ್ತಿದ್ದರು. ನಾನು ಅವರನ್ನು ಭೇಟಿಯಾಗಬೇಕೆನ್ನಿಸಿದಾಗಲೆಲ್ಲ ಹೇಳದೆ ಕೇಳದೆ ಅವರ ಮನೆಗೆ ಹೋಗುತ್ತಿದ್ದೆ.'' (ಪುಟ ೨೧೦)

ರಾಕ್‌ಫೆಲ್ಲರ್ ಫೆಲೋಶಿಪ್ ದೀರ್ಘಕಾಲ ಮುಂದುವರಿಯಲಿಲ್ಲ, ತಾಯಿನಾಡು ಪೋಲೆಂಡಿಗೆ ತನ್ನ ಪ್ರತಿಭಾನ್ವಿತ ಸುಪುತ್ರ ಬೇಕೆನಿಸಲಿಲ್ಲ. ೧೯೩೦ರ ದಶಕಾರಂಭದಲ್ಲಿ ಇವರು ಇಂಗ್ಲೆಂಡಿನಿಂದ ಸ್ವದೇಶಕ್ಕೆ ಮರಳಿ ತಮ್ಮ ಹಿಂದಿನ ಅಮುಖ್ಯ ಹುದ್ದೆಗೆ ದಾಖಲಾಗುವುದು ಅನಿವಾರ್ಯವಾಯಿತು. ಇಲ್ಲಿ ''ವಿಶ್ವವಿದ್ಯಾನಿಲಯದ ವಾತಾವರಣದ ತಾಪ ಕುದಿಬಿಂದುವಿನ ಮಟ್ಟಕ್ಕೆ ಏರಿತು. ಚಿಕ್ಕದಾದ ನಮ್ಮ ವಿಭಾಗದಲ್ಲಿಯೂ ಒತ್ತಡ ಮತ್ತು ಯೆಹೂದ್ಯ ದ್ವೇಷಿ ಮನೋಭಾವಗಳು ಎದ್ದು ಕಾಣುತ್ತಿದ್ದುವು... ಉಪನ್ಯಾಸಕರಿಗೆ ತೊಂದರೆ ಕೊಡುತ್ತಿದ್ದರು. ಸಂಘಟಿತ ಗುಂಪುಗಳ ಜನ ಯೆಹೂದ್ಯರನ್ನು ಸದೆಬಡಿಯುತ್ತಿದ್ದರು.'' (ಪುಟ ೨೨೯-೨೩೦)

ಜರ್ಮನಿಯಲ್ಲಿ ಹಿಟ್ಲರ್ ಆ ರಾಷ್ಟ್ರದ ನಿರಂಕುಶ ಪ್ರಭುವಾದ (೩೦.೦೧.೧೯೩೩). ಅಲ್ಲಿಗೆ ಯೆಹೂದ್ಯ-ಯಜ್ಞ ಪೂರ್ಣಾಹುತಿ ಮಟ್ಟವೈದಿತು. ಇದೇ ವೇಳೆ ಐನ್‌ಸ್ಟೈನ್ ಹಲವಾರು ಸನ್ಮಿತ್ರರ ಸುಸಂಘಟಿತ ಪ್ರಯತ್ನದ ಫಲವಾಗಿ ಅಮೆರಿಕ ತಲಪಿ (೧೭.೧೦.೧೯೩೩) ಪ್ರಿನ್‌ಸ್ಟನ್ನಿನ ಇನ್‌ಸ್ಟಿಟ್ಯೂಟ್ ಫಾರ್ ಅಡ್ವಾನ್ಸ್ಡ್ ಸ್ಟಡಿಯಲ್ಲಿ ಸ್ಥಾಪಿತರಾದರು.

''ನನ್ನ ಪರಿಸ್ಥಿತಿಯನ್ನು ವಿವರಿಸಿ ಐನ್‌ಸ್ಟೈನ್ ಅವರಿಗೆ ಪತ್ರ ಬರೆದೆ. ಅವರಿಗೆ ಬರುತ್ತಿದ್ದ ಅನೇಕ ಕೋರಿಕೆ ಪತ್ರಗಳ ಪೈಕಿ ಇದೂ ಒಂದು ಆಗುವುದು ಎಂದು ನನಗೆ ಚೆನ್ನಾಗಿ ತಿಳಿದಿತ್ತು. ಆದರೆ, ಪ್ರಿನ್‌ಸ್ಟನ್ ಇನ್‌ಸ್ಟಿಟ್ಯೂಟ್ ಫಾರ್ ಅಡ್ವಾನ್ಸ್ಡ್ ಸ್ಟಡಿಯಲ್ಲಿ ನನಗೊಂದು ಸಣ್ಣದಾದ ಫೆಲೋಶಿಪ್ ಕೊಟ್ಟಿರುವುದಾಗಿಯೂ ತಾವು ನನ್ನ ಆಗಮನವನ್ನು ಕಾಯುತ್ತಿರುವುದಾಗಿಯೂ ಅವರು ಒಂದು ಹಿತಕರವಾದ ಉತ್ತರವನ್ನು ಬರೆದರು. ನನ್ನ ಮೂವತ್ತೆಂಟನೆಯ ವಯಸ್ಸಿನಲ್ಲಿ (೧೯೩೬) ಒಂದು ಹೊಸ ದೇಶದಲ್ಲಿ ಹೊಸ ಜೀವನವನ್ನು ಪ್ರಾರಂಭಿಸುವ ಪ್ರಯತ್ನ ಮಾಡಬೇಕಾಯಿತು.'' (ಪುಟ ೨೩೨)

ಐನ್‌ಸ್ಟೈನ್-ಸಾಮೀಪ್ಯ ತಲಪಿದ್ದಾಯಿತು, ಹೊಸ ಹವೆಯಲ್ಲಿ ಅವರ ಜೊತೆ ಸಂಶೋಧನೆ ತೊಡಗಿದ್ದೂ ಆಯಿತು. ''ಆದರೆ ನನ್ನ ಚಿಂತನೆಯಿಂದ ಆದರ್ಶೀಕರಿಸಲಾದ ಮತ್ತು ನನ್ನ ಕಲ್ಪನಾಶಕ್ತಿಯಿಂದ ಸ್ಪಷ್ಟವಾಗಿ ಚಿತ್ರೀಕರಿಸಲಾದ ನನ್ನ ದೇಶದ (ಪೋಲೆಂಡ್) ಮರೀಚಿಕೆ ಎಂದೆಂದೂ ನನ್ನ ಕಣ್ಣಮುಂದೆ ಇದ್ದೇ ಇರುತ್ತದೆ.'' (ಪುಟ ೨೩೬)

ಸಹಯೋಗವೇನೋ ಒಂದು ವರ್ಷ ಯಶಸ್ವಿಯಾಗಿ ಮುಂದುವರಿಯಿತು. ಎರಡನೆಯ ವರ್ಷ? ಸಾಕ್ಷಾತ್ ಐನ್‌ಸ್ಟೈನರ ಆಗ್ರಹಪೂರ್ವಕ ಶಿಫಾರಸು ಇದ್ದರೂ ಹಲವಾರು ಅಶೈಕ್ಷಣಿಕ ನೆಪ ಒಡ್ಡಿ (ಪ್ರಚ್ಛನ್ನ ಯೆಹೂದ್ಯ ವಿರೋಧೀ ನೀತಿ) ಇನ್‌ಫೆಲ್ಡರ ವೇತನ ರದ್ದಾಯಿತು (೧೯೩೭). ಯೂರೋಪಿನಲ್ಲಿ ಹಿಟ್ಲರ್ ಯಾವುದೇ ಕ್ಷಣ ಎರಡನೆಯ ಮಹಾಯುದ್ಧ (ಒಂದನೆಯದು ೧೯೧೪-೧೮) ಸಿಡಿಸಬಹುದೆಂಬ ವದಂತಿ ಗಾಢವಾಯಿತು. ಸಮಗ್ರವಾಗಿ ಆ ಖಂಡದಲ್ಲಿ ಯಾವ ಯೆಹೂದ್ಯ ಛಾಯೆಯವನಿಗೂ ಭದ್ರತೆ ಇರಲಿಲ್ಲ. ಅಲ್ಲಿಂದ ಪ್ರತಿಭಾವಂತರ ಮಹಾಪೂರವೇ ಪ್ರವಹಿಸತೊಡಗಿತು – ಅಧಿಕಾಂಶ ಅಮೆರಿಕದ ವಿಸ್ತಾರ ಪ್ರದೇಶದತ್ತ. ಇತ್ತ ಅಮೆರಿಕದ ಆರ್ಥಿಕ ಪರಿಸ್ಥಿತಿ ತೀರ ಕುಸಿದಿತ್ತು, ಉದ್ಯೋಗಾವಕಾಶಗಳು ತಳ ಮುಟ್ಟಿದ್ದವು. ಇನ್‌ಫೆಲ್ಡರಿಗೆ ಎದುರಾದದ್ದು ಗಾಢಾಂಧಕಾರ ಪರಿಸರ.

ತಮ್ಮ ನಿರುದ್ಯೋಗಿ ಸಹಾಯಕನಿಗೆ ಐನ್‌ಸ್ಟೈನ್ ಆಶ್ವಾಸಿಸಿದರು, ''ನೀನು ತಲೆಕೆಡಿಸಿಕೊಳ್ಳಬೇಡ. ಏನಿಲ್ಲದಿದ್ದರೂ ನಿನ್ನನ್ನು ನನ್ನ ವೈಯಕ್ತಿಕ ಸಹಾಯಕನಂತೆ ಇಟ್ಟುಕೊಳ್ಳಬಲ್ಲೆ. ನನಗೆ ಬೇಕಾದುದಕ್ಕಿಂತ ಹೆಚ್ಚು ಹಣ ಸಂಪಾದಿಸುತ್ತಿದ್ದೇನೆ. ಇನ್‌ಸ್ಟಿಟ್ಯೂಟ್‌ನ ಫೆಲೋಶಿಪ್‌ನಿಂದ ದೊರೆಯುವಷ್ಟು ಹಣವನ್ನು ನನ್ನ ಸಂಪಾದನೆಯಿಂದ ಕೊಡಬಲ್ಲೆ.'' (ಪುಟ ೩೦೫)

ಕಾರುಣ್ಯನಿಧಿಯ ಅಯಾಚಿತವರ ಮತ್ತು ಅನುಗ್ರಹ ಒಂದು ಕಡೆ, ಮಾನನಿಧಿಯ ಸದೃಢ ಅಸ್ಮಿತೆ ಮತ್ತು ಅಪರಿಗ್ರಹ ಇನ್ನೊಂದು ಕಡೆ. ಈ ಔದಾರ್ಯ ಇನ್‌ಫೆಲ್ಡರ ಹೃದಯವನ್ನೇ ಕಲಕಿತು. ಆದರೆ ಸಮಸ್ಯೆಗೆ ಇದು ಶಾಶ್ವತ ಪರಿಹಾರವಾಗದು. ಹೊಸಹಾದಿ? ತಾನೇಕೆ ಐನ್‌ಸ್ಟೈನರ ನೇತೃತ್ವದಲ್ಲಿ ಒಂದು ಜನಪ್ರಿಯ ವಿಜ್ಞಾನ ಪುಸ್ತಕ ಬರೆಯಬಾರದು? ಅದರಿಂದ ತನಗೆ (ಇನ್‌ಫೆಲ್ಡ್) ಇಬ್ಬಗೆಯ ಲಾಭ ಉಂಟು: ಐನ್‌ಸ್ಟೈನ್-ಸಹಯೋಗದ ವಿಸ್ತರಣೆ ಮತ್ತು ಪುಸ್ತಕ ಮಾರಾಟದಿಂದ ಸದ್ಯದ ಆರ್ಥಿಕ ಬಿಕ್ಕಟ್ಟು ನಿವಾರಣೆ. ಮನುಕುಲದ ಹಿತಕ್ಕಾಗಿ ಯಾವುದೇ ರಚನಾತ್ಮಕ ಕಾರ್ಯವೆಸಗಲು ಸದಾ ಬದ್ಧರೂ ಸಿದ್ಧರೂ ಆಗಿದ್ದ ಐನ್‌ಸ್ಟೈನ್ ಈ ವಿನೂತನ ಯೋಜನೆಯನ್ನು ಪರಮೋತ್ಸಾಹದಿಂದ ಸ್ವಾಗತಿಸಿದರು. ಉಭಯರೂ ತತ್‌ಕ್ಷಣವೇ ಕಾರ್ಯೋದ್ಯುಕ್ತರಾದರು. ಹೀಗೆ ಅಂಕುರವೊಡೆದ ಈ ಫಲವಂತ ಬೀಜ ಇಬ್ಬರ ಹೆಸರಿನಲ್ಲಿ The Evolution of Physics ಎಂಬ ಆಕರ್ಷಕ ಜನಪ್ರಿಯ ಗ್ರಂಥವಾಗಿ ಪ್ರಕಟವಾಯಿತು (೧೯೩೮), ಮತ್ತು ಮಾರುಕಟ್ಟೆಯಲ್ಲಿ ನಿರೀಕ್ಷಾತೀತ ಯಶಸ್ಸು ಗಳಿಸಿತು.

ಇದರ ಮೊದಲ ಪರಿಚ್ಛೇದ: ''ಕಲ್ಪನಾಲೋಕದಲ್ಲೊಂದು ನಿಗೂಢ ಕಥೆ ಇದೆ. ಇದು ನಮಗೆ ಅಗತ್ಯವಾಗುವ ಎಲ್ಲ ಸುಳುಹುಗಳನ್ನೂ ಒದಗಿಸಿ ಸದ್ಯದ ಪರಿಸ್ಥಿತಿ ಕುರಿತಂತೆ ನಮ್ಮದೇ ಸಿದ್ಧಾಂತ ರೂಪಿಸುವಂತೆ ನಮ್ಮನ್ನು ಒತ್ತಾಯಿಸುತ್ತದೆ. ಈ ಕಥಾವಸ್ತುವನ್ನು ನಾವು ಎಚ್ಚರಿಕೆಯಿಂದ ಅನುಸರಿಸಿದ್ದಾದರೆ, ಲೇಖಕ, ಪುಸ್ತಕದ ಕೊನೆಯಲ್ಲಿ ಇದರ ಪೂರ್ಣ ಪರಿಹಾರವನ್ನು ಅನಾವರಣಿಸುವ ಅದೇ ಮೊದಲು, ನಾವೇ ಕಂಡುಕೊಂಡಿರುತ್ತೇವೆ. ಇನ್ನು ಈ ಪರಿಹಾರವಾದರೋ ಅಗ್ಗದ ನಿಗೂಢಗಳಿಗೆ ಒದಗುವಂಥದ್ದಲ್ಲ – ಇದು ನಮ್ಮನ್ನು ಹತಾಶೆಗೊಳಿಸದು, ಅಲ್ಲದೇ ಇದನ್ನು ಯಾವ ಕ್ಷಣದಲ್ಲಿ ನಿರೀಕ್ಷಿಸುತ್ತೇವೋ ಆ ಕ್ಷಣದಲ್ಲೇ ಪ್ರತ್ಯಕ್ಷವೂ ಆಗುವುದು. ಇಂಥ ಪುಸ್ತಕದ ಒಬ್ಬ ವಾಚಕನನ್ನು ನಿಸರ್ಗ ಗ್ರಂಥದ ನಿಗೂಢಗಳಿಗೆ ಪರಿಹಾರ ಶೋಧಿಸಲು ತಮ್ಮ ಉತ್ತರೋತ್ತರ ಪೀಳಿಗೆಗಳಲ್ಲಿ ಪರಿಶ್ರಮಿಸುತ್ತಿರುವ ವಿಜ್ಞಾನಿಗಳ ಜೊತೆ ಹೋಲಿಸಬಹುದೇ?''
(ಅನುವಾದ: ಜಿಟಿಎನ್)

ಈ ಧ್ವನಿಕಾವ್ಯದ ಪೂರ್ಣ ಅರ್ಥವಾಗಲು ಐಸಾಕ್ ನ್ಯೂಟನ್ (೧೬೪೨-೧೭೨೭) ಅಥವಾ ಸುಮಾರು ಎರಡೂವರೆ ಶತಮಾನಾನಂತರ ಐನ್‌ಸ್ಟೈನ್ ''ನಿಸರ್ಗ ಗ್ರಂಥದ ನಿಗೂಢಗಳಿಗೆ'' ಒದಗಿಸಿದ ಪರಿಹಾರಗಳ ಹಿನ್ನೆಲೆ ನಾಟಕೀಯ ಸನ್ನಿವೇಶಗಳನ್ನು ಕಲ್ಪಿಸಿಕೊಳ್ಳಬೇಕು.

ಸರಿ, ಸದ್ಯದ ಆರ್ಥಿಕ ಬವಣೆ ಇನ್‌ಫೆಲ್ಡರನ್ನು ಬಾಧಿಸಲಿಲ್ಲ. ಆದರೆ ಶಾಶ್ವತ ಪರಿಹಾರ? ಅಂತಾರಾಷ್ಟ್ರೀಯ ಪರಿಸ್ಥಿತಿ ಕರಾಳವಾಗಿತ್ತು: ಹಿಟ್ಲರನ ಸೈನ್ಯಗಳು ಪೋಲೆಂಡನ್ನು ಆಕ್ರಮಿಸುವುದರೊಂದಿಗೆ (೧.೯.೧೯೩೯) ಎರಡನೆಯ ಮಹಾಯುದ್ಧದ ಕಹಳೆ ಊದಿದುವು. ಇನ್ನು ಇನ್‌ಫೆಲ್ಡ್ ಪೋಲೆಂಡಿಗೆ ಮಾತ್ರವಲ್ಲ ಯಾವುದೇ ಯೂರೋಪಿಯನ್ ದೇಶಕ್ಕಾದರೂ ಮರಳುವುದುಂಟೇ? ಸಂಶೋಧನ ರಂಗದಲ್ಲಿ ಇವರ ಹಿರಿಮೆ ಗುರುತಿಸಿದ್ದ ಹಿತೈಷಿಗಳ ನೆರವಿನಿಂದ ಇವರು, ಒಂದು ವರ್ಷದ ಮಟ್ಟಿಗೆ ಟೊರಾಂಟೋ (ಕೆನಡ) ವಿಶ್ವವಿದ್ಯಾಲಯದಲ್ಲಿ, ಹಂಗಾಮಿ ಹುದ್ದೆ ಪಡೆದರು.

''ಟೊರಾಂಟೋಗೆ ಹೋಗುವ ಮುನ್ನ ನಾನು ನ್ಯೂಯಾರ್ಕ್‌ನಲ್ಲಿ ಉಳಿದು ಅಮೆರಿಕನ್ ಮ್ಯಾಥಮ್ಯಾಟಿಕಲ್ ಸೊಸೈಟಿಯ ಸಭೆಗೆ ಹೋಗಿದ್ದೆ. ಅಲ್ಲಿ ನಾನು ಹೆಲೆನ್‌ಳನ್ನು ಭೇಟಿಯಾದೆ. ಇದು ನಡೆದದ್ದು ನಾನು ವಿಲ್ನೋ ಸಭೆಯಲ್ಲಿ ಹೆಲೀನಾಳನ್ನು ಭೇಟಿಯಾದ ಹತ್ತು ವರ್ಷಗಳ ತರುವಾಯ ಮತ್ತು ಅವಳು ಗತಿಸಿದ ಆರು ವರ್ಷಗಳ ತರುವಾಯ. ಆಗ ನಾನು ಇನ್ನೂ ದುಃಖದಲ್ಲೇ ಇದ್ದೆ ಮತ್ತು ಆಗಿಹೋದ ದುರಂತದ ಪೆಟ್ಟಿನಿಂದ ಕುಗ್ಗಿಹೋಗಿದ್ದೆ. ನನ್ನ ಈಗಿನ ಸ್ಥಿತಿಗೂ ಹಿಂದಿನ ಅನುಭವಕ್ಕೂ ಇರುವ ಸಂಬಂಧವನ್ನು ಅರ್ಥಮಾಡಿಕೊಳ್ಳಲು ಮತ್ತು ಒಂದಕ್ಕೊಂದು ಸಂಬಂಧವಿಲ್ಲವೆಂದು ನಾನು ತಿಳಿದಿದ್ದ ಘಟನೆಗಳ ನಡುವೆ ಇದ್ದ ಕಾರ್ಯ-ಕಾರಣ ಸಂಬಂಧವನ್ನು ಗುರುತಿಸಲು ಹೆಲೆನ್ ನನಗೆ ಸಹಾಯ ಮಾಡಿದಳು. ಹೆಲೀನಾಳ ದುರಂತ ಸಾವಿನ ಕತೆಯನ್ನು ಆಕೆಗೆ ಹೇಳಿದೆ. ಉಪಶಮನ ಪ್ರಕ್ರಿಯೆ ಹ್ರಸ್ವವಾಗಿತ್ತು ಮತ್ತು ಪೂರ್ತಿಯಾಗಿತ್ತು. ಹೆಲೆನ್‌ಳ ಅನುಕಂಪ, ಪ್ರೀತಿ ಮತ್ತು ಅವಳು ನನ್ನನ್ನು ಅರ್ಥಮಾಡಿಕೊಂಡ ರೀತಿಯಿಂದ ನಾನು ಪೂರ್ವಸ್ಥಿತಿಗೆ ಬಂದೆ.'' (ಪುಟ ೩೨೨). ''ನ್ಯೂಜೆರ್ಸಿಯ ಒಬ್ಬ ನ್ಯಾಯಾಧೀಶರು ನಮ್ಮಿಬ್ಬರನ್ನೂ ಪತಿಪತ್ನಿಯರೆಂದು ವಿಧ್ಯುಕ್ತವಾಗಿ ಘೋಷಿಸಿದರು.'' (ಪುಟ ೩೨೫)

ಇನ್‌ಫೆಲ್ಡ್ ತಮ್ಮ ಸತ್ಯಶೋಧನೆಯ ಕಥನವನ್ನು ಒಬ್ಬ ನಿರ್ಲಿಪ್ತ ನಿರ್ಮೋಹಿ ನಿರ್ಮತ್ಸರಿ ಇತಿಹಾಸಕಾರನ ನಿರಪೇಕ್ಷ ನಿಲವಿನಿಂದ ಬರೆದರು – ೧೯೪೦ರ ತನಕ. ಇದೇ QUEST. ಕನ್ನಡದಲ್ಲಿ ''ಶೋಧ.'' ಮುಂದೆ ಅವರು ೧೫.೧.೧೯೬೮ರ ತನಕ ಹಿಂದಿನ ಧಾಟಿಯಲ್ಲೇ ಬಾಳಿದ್ದರು. ಆ ವಿವರವನ್ನು ಉಪಸಂಹಾರ ಅಧ್ಯಾಯದಲ್ಲಿ (ಪುಟ ೩೪೯-೩೫೫) ಓದಬಹುದು.

ಸ್ವವೈಭವೀಕರಣ, ವಿನಾ ದೈನ್ಯ ಮನೋಭಾವ ಅಥವಾ ಪರನಿಂದನೆ ಎಲ್ಲಿಯೂ ನುಸುಳಿರದ ಸ್ವಚಿತ್ರಣ QUEST. ಇದರ ವಾಚನದ ವೇಳೆ ವಾಚಕನೇ ಲೇಖಕ

ಮುಂದಿನ ಪುಟಕ್ಕೆ

# ಅಕ್ಕ-ಕೇಳಕ್ಕ...

ಹನ್ನೆರಡನೆಯ ಶತಮಾನ ದಾಟಿ ಇಪ್ಪತ್ತೊಂದನೆಯ ಶತಮಾನಕ್ಕೆ ಬಂದು ನಿಂತೀವಿ. ಅಂಕಿ ಅದಲು ಬದಲು ಆಯ್ತು ಅಷ್ಟೇ, ನಾವೇನು ಬದಲಾಗಲಿಲ್ಲ. ಏನಾರ ಆಗಿದ್ದರೆ ನಮ್ಮ ಹೊರಗ ಬದಲಾಗಿರಬೇಕು. ನಮ್ಮ ನಡೆ ನುಡಿ ಉಡುಗೆ ತೊಡುಗೆ ಎಲ್ಲಾ ಸಾಕಷ್ಟು ಹೊಸದು ಆಗೇದ. ಆದರ ಒಳಗೊಳಗೆ ನಾವು ನಿಂತ ನೀರಿನ್ಹಾಂಗ ನಿಂತಲ್ಲೇ ಮಲೀತಿದ್ದೀವಿ. ಮುಂದು ಮುಂದು ಹರೀಲಿಕ್ಕೇ ಆಗ್ತಾ ಇಲ್ಲ. ನೀನೇ ಹೇಳಿದ್ದೀಯಲ್ಲ, ''ರತ್ನದ ಸಂಕೋಲೆ ಯಾದರೂ ಬಂಧನವಲ್ಲವೇ ?'' ಅಂತ, ಹೌದು, ಅದು ಖರೇನ ಅದ. ನಿನ್ನಷ್ಟು ಧೈರ್ಯ ನಮಗಿಲ್ಲ ಅಕ್ಕ. ಅದಕ್ಕ ನೂರಾರು ಬಂಧನದ ಬಂದಿಯಾಗಿ ಬಳಲತಾ ಇದ್ದೀವಿ. ನಾವು ತಂಗಿಯರಾಗೇ ಉಳಿದೀವಿ. ಕೋಟಿ, ಕೋಟಿ ಬಂದು ಹೋಗು ತಂಗೀರಿಗೆಲ್ಲ ನಿನೊಬ್ಬಾಕೀನೇ 'ಅಕ್ಕ'.

ತುಂಬಿದ ಮನಿ, ಕಳ್ಳಬಳ್ಳಿ ಸಂಬಂಧ, ಓಣಿ ಒಡನಾಟ, ಎಲ್ಲಾ ಬಿಟ್ಟು ಬರೂದು ಅಷ್ಟು ಸುಲಭದ ಮಾತಲ್ಲ. ಪ್ರೀತಿಸಿ ಬಂದ ಊರ ಪ್ರಭು ಕೌಶಿಕನನ್ನು ಧಿಕ್ಕರಿಸಿದಿ, ತಿಳಿಹೇಳಲಿಕ್ಕೆ ಬಂದ ಪುರೋಹಿತರಿಗೆ ತಳಮಳ ಹುಟ್ಟಿಸಿದಿ, ಹರನೇ ಗಂಡನಾಗಬೇಕೆಂದು ಅನಂತಕಾಲ ತಪಿಸಿ – ಹುಟ್ಟಿ ಸಾಯುವ ಗಂಡಂದಿರನ್ನು ಒಲೆಯೊಳಗಿಕ್ಕಿ ಲೋಕದ ಪುರುಷ ಕುಲವೆಲ್ಲ ಕಂಗೆಡಿಸಿದಿ – ಹೀಂಗ ಪ್ರಭೂ, ಪುರೋಹಿತ, ಪುರುಷ ಎಲ್ಲಾ ವರ್ಗದವರನ್ನು ಮೀರಿ ಬಯಲಿಗೆ ಬಂದೆಯಲ್ಲ – ''ಬಯಲೊಳಗಿದ್ದರೂ ದುಃಖ, ಒಲೆಯೊಳಗಿದ್ದರೂ ದುಃಖ'' ಅನ್ನೋ ಕಲ್ಪನಾ ಅವತ್ತೇ ನಿನಗ ಆಗಿತ್ತು. ಅದಕ್ಕಂತ ನಿನ್ನ ದುಃಖ ಎಲ್ಲಾ ನಿನ್ನ ದನಿ ಆಗೇದ, ಆ ದನಿಯೊಳಗೆ ನಮ್ಮ ದನಿ ಕೇಳಸ್ತದ.

'ಕಾಮ ಒಂದನೆಯ ಭವಿ' ಅಂದೀಯಲ್ಲ. ಆ ಕಾಮ ಮನುಷ್ಯ ಜಾತಿ ಹುಟ್ಟಿದಾಗಿನಿಂದ ಹುಚ್ಚು ಹಿಡಿಸಿ ಹಾರಾಡಲಿಕ್ಕೆ ಹಚ್ಚೇದ, ಹುಚ್ಚೆದ್ದ ಮನಸ್ಸು ಮೀರಿ ಹೋಗು ಆ ವಿಚಾರ ನಿನ್ನ ಮನಸ್ಸಿನಾಗೂ ಸುಳಿದಿರಬೇಕು. ಅದಕ್ಕೆ ಕಳವಳದ ಮನ ತಲೆಕೆಳಗಾಯ್ತು, ಬಿಸಿಲು ಬೆಳದಿಂಗಳಾಯ್ತು. ಎಲ್ಲಾರಿಗೂ ಅನ್ನಿಸುವಾಂಗ ನಿನಗೂ ಅನ್ನಿಸ್ತು. ಆದರ ಯಾರಿಗಾಗಿ ಹಂಬಲಿಸಿತ್ತು ಅನ್ನೋ ಮಾತು ಬ್ಯಾರೇನೇ ಅದ. ಕೇಡಿಗೆ ಕರಗಿ ಹೋಗುವ ಗಂಡ ಅಲ್ಲ ನಿನ್ನವ, ಆತ ಹೊತ್ತು ಬಂದರ ಹೊಸಕಿ ಹಾಕುವವ ಅಲ್ಲ, ನಿನ್ನವ ಸೀಮಾತೀತ ! ಶಬ್ದಾತೀತ !!

''ಎಮ್ಮವರು ಎನ್ನ ಮದುವೆ ಮಾಡಿದರು, ಕನಕದಾ ಮಂಟಪ ಪವಳದ ತೋರಣ, ಪಚ್ಚೆಯ ನೆಲೆಗಟ್ಟು'' ಇಂಥ ಸುಂದರ ಹಂದರದಾಗ ನಿನ್ನ ಮದುವೆ ಎಷ್ಟು ಚಂದ ! ಅದ್ಭುತ ಅದ ನಿನ್ನ ಚೆಲುವಿನ ಕಲ್ಪನಾ ಶಕ್ತಿ, ಮೆಚ್ಚಿದೆ. ನಾವೂ ಮಾಡುತೇವ ಮದುವೆ ಕನಕದ ಮಂಟಪ ಹಾಕುತೀವಿ, ಕಷ್ಟದ ಅಡಿಪಾಯ ತೋಡಿದವರಿಗೆ ಗೊತ್ತು ಅದರ ಆಳ ಎಷ್ಟು ಅಂತ. ಹೆತ್ತವರು ಅತ್ತೂ ಅತ್ತೂ ತೋರಣಕ್ಕ ಕಂಗಳ ಪವಳ ಪೋಣಿಸ್ತೀವಿ. ವಜ್ರದ ಕಂಬ ಆಗಿ ನಿಲ್ತೀವಿ, ಇವರು ಗಳಿಗೆಗೊಮ್ಮೆ ಎಳೆಯುವ ಗಳ ಕಿತ್ತು ಸಂಸಾರದ ಹಂದರ ಬೀಳಬಾರದು ಅಂತ. ಇಷ್ಟೆಲ್ಲಾ ಆದರೂ ನಾನೊಲಿದವನೊಂದಿಗಿನ ಮದುವೇನೆ ಆಗೂದಿಲ್ಲ ಎಷ್ಟೋ ಸಲ, ಅವನೊಲಿದ ವಸ್ತುವಿನೊಂದಿಗೆ ಮದುವೆ. ಜೀವ ಜೀವದ ಸಂಬಂಧ ಅನುಬಂಧ ಅನ್ನೋ ಮಾತೆಲ್ಲ ಕ್ಲೀಷೆ ಅನ್ನಸ್ತಾವ ಎಷ್ಟೋ ಮಂದಿಗೀ, ಯಾಕಂದ್ರ ಇದು ಕೊಡು ಕೊಳ್ಳೊ ವ್ಯವಹಾರ, ಒಪ್ಪಂದ ಅಷ್ಟೇ. ಏನು ಮಾಡೋದು ವ್ಯವಸ್ಥೆನೇ ಅವ್ಯವಸ್ಥೆ ಆದರ ಯಾರಿಗೆ ಹೇಳೋದು. ಸಾಮಾಜಿಕ ವ್ಯವಸ್ಥೆ ನೀನೂ ಬಿಟ್ಟು ಥಟ್ಟನೆ ಬರಲಿಕ್ಕಾಗಲಿಲ್ಲ ನಮಗಂತೂ ಸಾಧ್ಯವೇ ಇಲ್ಲ. ನೀನು ಒಲಿದವ ಬ್ಯಾರೆ, ನಾವು ಒಲಿದವರೇ ಬ್ಯಾರೆ, ನಿನ್ನವ ''ಆತ್ಮ ಸಂಗಾತಿ'' ನಮ್ಮವ ''ಅರ್ಥ ಸಂಗಾತಿ.''

''ಲೋಕದಲ್ಲಿ ಹುಟ್ಟಿದ ಬಳಿಕ ಸ್ತುತಿ – ನಿಂದನೆಗಳು ಬಂದರೆ ಸಮಾಧಾನಿಯಾಗಿರಬೇಕು'', ಅಂತ ಸಮಾಧಾನ ಹೇಳಿದಿಯಲ್ಲ, ಭಾಳ ಚಂದ ಮಾತ ಅದ. ಯಾಕಾದರ ಹುಟ್ಟಿತು ಮುಂಡೇದು ಅಂತ ಹೊಸಕಿ ಹಾಕಿಸಿಕೊಂಡವರು ನಾವು, ಕೈತಪ್ಪಿ ಉಳಿದು ಬಂದರ ತಂಗಳ ತಿಂದವರು ನಾವು. ಅದೂ ಇಲ್ಲದಿದ್ದರ ಹೊಟ್ಟಿಗಿ ತಣ್ಣೀರ ಪಟ್ಟಿ ಹಾಕ್ಕೊಂಡು ಕಾಲ ಕಳೆದದ್ದಾಯಿತು. ಹುಟ್ಟಿದ ಮನಿಗೆ ಹೆಸರು ತರಬೇಕು 'ಕೊಟ್ಟ ಮನೆಗೆ ಜ್ಯೋತಿ ಆಗಿ ಬೆಳಗಬೇಕು', ಸುತ್ತೇಳು ನೆರೆಗಂಜಿ ಬಾಳಬೇಕು : ಇಂಥ ಸಾವಿರ ನುಡಿ ಕೇಳಿ ಕೇಳಿ ಕಿವಿ ಜಡ್ಡುಗಟ್ಟಿದೆ. ಇವರ ಹೆಸರಿಗಾಗಿ ನಮ್ಮ ಬದುಕಿನ ಹಸಿರ ಬಣ್ಣನೆ ಬಣ್ಣಗೆಟ್ಟುಹೋಯ್ತು. ಇವರಿಗೆ ಬೆಳಕ ಕೊಡಾಕ ನಾವು ಬತ್ತಿ ಆಗಿ ಉರಿದದ್ದಾಯ್ತು, ಬದುಕೇ ಧ್ಯಾನ ಆಗೇದ.

ಚಿಲ ಪಿಲಿ ಎನ್ನುವ ಗಿಳಿ, ನವಿಲು, ಕೋಗಿಲೆಗಳಿಗೆಲ್ಲ ಮಾತಾಡಿಸಿ ಬಂದಿದ್ದೀಯಲ್ಲ ನಾವು ಕೇಳಬೇಕಾದರೆ ಈಗ ಗಿಡಗಳೇ ಇಲ್ಲ ಅಂದ ಮ್ಯಾಲೆ ಗಿಳಿ ಎಲ್ಲಿ ಕಾಣವುದು ? ಮಳೆನೇ ಮಾಯ ಆಗೇದ, ಯಾವ ಮೋಡ ನೋಡಿ ನವಿಲ ಕುಣೀಬೇಕು ? ಚೈತ್ರದ ಚಿಗುರೇ ಚಿಗುರುವುದಿಲ್ಲ, ಕೋಗಿಲೆ ಎಲ್ಲಿ ಹಾಡಬೇಕು ? ನೀನೆ ಹೇಳು – ಎಲ್ಲಕ್ಕೂ ಮೊದಲ ಮಾತಂದ್ರ ನಮ್ಮ ಪಂಚೇಂದ್ರಿಯಗಳೆಲ್ಲ ತಮ್ಮ ಸೂಕ್ಷ್ಮತೆಯನ್ನು ಕಳಕೊಂಡಾವ. ಹಾಗಾಗಿ ಹಾಡುವ ಹಕ್ಕಿಯ ಇಂಪಾದ ದನಿಗೆ ಕಿವಿ ಕೊಡಲಿಕ್ಕಾಗುವುದಿಲ್ಲ, ಅರಳುವ ಹೂವಿನ ಮಕರಂದ ಹೀರುವ ಮೂಗು ನಮಗಿಲ್ಲ, ಎಳೆ ಚಿಗುರು ಮುಟ್ಟಿ, ಮುದ್ದು ಮಗುವಿನ ಗಲ್ಲ ತಟ್ಟಿ, ಸಂತೋಷಪಡುವ ಚರ್ಮ ನಮ್ಮದಲ್ಲ, ಭೂಮಿ ಆಕಾಶ ವ್ಯಾಪಿಸಿ ಬರೆದ ಬಣ್ಣ ಬಣ್ಣದ ಚಿತ್ರ ನೋಡೋ ಕಣ್ಣು ನಮಗಿಲ್ಲ, ಒಳ್ಳೆ ಮಾತಾಡೋದು ಒಳ್ಳೆದನ್ನು ಸವಿಯೋದು ಜಡ್ಡುಗಟ್ಟಿದ ಈ ನಾಲಿಗೆಗೆ ಸಾಧ್ಯವಿಲ್ಲ. ಎಲ್ಲರೂ ನಮ್ಮ ಬುದ್ಧಿ ಬೆಳೆಸೋದಕ್ಕೆ ನೋಡ್ತಾರೆಯೇ ಹೊರತು ಭಾವ ಬೆಳೀಬೇಕು, ಮನಸ್ಸು ಅರಳಿಸಬೇಕು ಎನ್ನುವವರು ಇಲ್ಲ. ನಾವು ಕಲಿತದ್ದೆಲ್ಲ ನಾಲ್ಕು ಗೋಡೆಗಳ ಮಧ್ಯ. 'ಅರಿವು' ಅನ್ನೋದು ಆಗಲೇ ಇಲ್ಲ ನಮಗ. ನಿನ್ನಂಗ ನಮಗೆ ಸಹಜ ಪ್ರಕೃತಿಯ ಪಾಠ, ಲೋಕದ ಅನುಭವ ಮಾತು ಅಂತ ಇಲ್ಲ. ಅಂತರ್ದೃಷ್ಟಿ ಎಂಬುದಿಲ್ಲ. ಅದಕ್ಕಂತ ನಮ್ಮ ಹಾಡಿಗೆ ಆ ಅದ್ಭುತ ಧ್ವನಿ ಇಲ್ಲ, ನಿನ್ನ ಶಬ್ದಕ್ಕಿರೋ ಮಂತ್ರಶಕ್ತಿನೂ ಇಲ್ಲ.

''ನೊಂದ ನೋವು ನೋಯದವರೆತ್ತ ಬಲ್ಲರು ?'' ಅಂತ ಹೇಳಿದಿಯಲ್ಲ ಅದು ನೂರಕ್ಕ ನೂರು ಖರೆ ಅದ ನೋಡು. ಬೀದಿ ಮಧ್ಯ ಮಾನ ಕಳಕೊಂಡ ಅಂಜಲಿಗೆ ಆದ ಅಪಮಾನ, ಆನಂದದಿಂದ ನಗುನಗ್ತಾ ಇರುವ ಹಸೀನಾ ಎಂದೂ ನಗದಾಂಗ, ನೋಡದಾಂಗ ಮುಖಕ್ಕೆ ಆಸಿಡ್ ಸುರಿದು ವಿಕಾರ ಮಾಡಿದ ವಿಕೃತ ಪ್ರೇಮಿಯ ಕೈಯಲ್ಲಿ ಅವಳು ನರಳಿ ಬೆಂದ ಉರಿ ! ಅಲಂಕಾರ ಮಾಡಿಕೊಂಡು ಒಯ್ಯಾರ ಮಾಡ್ತಾಳ ಅಂತ. ತಂದೂರಿ ಒಲೆಯೊಳಗ ಉರಿದ ಹೋದ ಬಾಲೆ ನೈನಾ !! ಕೂಡಿದ ಜನಜಾತ್ರೆಯ ಹುಂಬತನಕ್ಕೆ ತಾ ಪತಿವ್ರತೆ ಎಂಬೊಂದು ಸಾಬೀತು ಮಾಡಲಿಕ್ಕೆ ಸುಟ್ಟು ಕರಕಲಾದ ರೂಪ ಕನ್ವರ ! ಹಿಂಗ ಹೇಳಿಕೊಂಡು ಹೋದರ ಸಾವಿರ ಸಾವಿರ ಅದಾವ ನಮ್ಮ ಕಥೆ, ಏನು ಹೇಳೋದು 'ಎಮ್ಮೆಗೊಂದು ಚಿಂತೆ, ಸಮ್ಮಗಾರನಿಗೊಂದು ಚಿಂತೆ.'

ಹೇಳ್ತಾ ಹೋದರ ಅಂದಿನಿಂದ ಇಂದಿನ ತನಕ ದಾರಿ ಮ್ಯಾಲ ಕಣ್ಣ ಹಾಯಿಸಿದರ ಮುಳ್ಳಿನ ಹಾದಿ, ತಂತಿ ಬೇಲಿ, ರಣಗುಡುವ ಬಿಸಿಲು, ವಿಪರೀತ ನೀರಡಿಕೆ. ಆದರ ಅಲ್ಲಲ್ಲಿ ಸಿಕ್ಕ 'ಓಯಸಿಸ್'ನಂತೆ ನಿನ್ನ ಮಾತಿನ ಝರಿ. ಅದು ನಮ್ಮ ಆಯಾಸ ಪರಿಹಾರ ಮಾಡೇದ, ಮಾತಾಡೋ ಧೈರ್ಯ ಕೊಟ್ಟದ. ಅದಕಂತ ನನಗನಿಸಿದ್ದನ್ನು ನಾ ಹೇಳಲಿಕ್ಕೆ ಹೊರಟೀನಿ. ಅದು ತಪ್ಪಿರಲಿ, ಒಪ್ಪಿರಲಿ ಹೇಳುವ ನನ್ನ ದನಿಗೆ ಕಸು ಬಂದಿದ್ದೇ ನಿನ್ನಿಂದ. ಆದಕ್ಕೇ ನಮ್ಮ ಹಾಡು ಹೇಳತೀನಿ.... ಅಕ್ಕ ಕೇಳಕ್ಕ....

ಕಿರಣ ದೇಸಾಯಿ
ಉಪನ್ಯಾಸಕಿ, ಕಮಲಾ ನೆಹರು ಮಹಿಳಾ ಕಾಲೇಜು, ಶಿವಮೊಗ್ಗ

---

ಹಿಂದಿನ ಪುಟದಿಂದ

ನಾಗುವಂಥ ತನ್ಮಯತೆ ಒದಗುತ್ತದೆ – ''ನೋಟಕರು ಮಾಟಕರೆ'' ಎಂಬ ಮಂಕುತಿಮ್ಮ ನುಡಿಯಂತೆ. ಏಕೆಂದರೆ QUEST ಮನುಕುಲದ ಕಥೆ-ವ್ಯಥೆಗಳ ವಿಶಿಷ್ಟ ಮಾದರಿ, ಆದ್ದರಿಂದ ಇದು ನಮ್ಮ ನಿಮ್ಮ ಜೀವನ ಗಾಥೆ ಕೂಡ.

''ಶೋಧ'' ಕನ್ನಡ ಅವತರಣಿಕೆಯಲ್ಲಿ ಜೀವೂಬಾಯಿ ಲಕ್ಷ್ಮಣರಾಯರು ಮೂಲದ ಸಮಸ್ತ ಸ್ವಾರಸ್ಯವನ್ನೂ ಬಟ್ಟಿ ಇಳಿಸಿದ್ದಾರೆ, ನಾನೊಂದು ಅನುವಾದ ಕೃತಿಯನ್ನು ಓದುತ್ತಿದ್ದೇನೆ ಎಂಬ ಭಾವನೆ ಎಲ್ಲಿಯೂ ನನ್ನಲ್ಲಿ ಮೂಡಲಿಲ್ಲ.

QUEST ಪ್ರಕಟವಾದ ಹಲವು ದಶಕಾನಂತರ ''ಶೋಧ'' ಮರುವುಟ್ಟಿದೆ. ಕನ್ನಡ ಓದುಗನ ಸೌಕರ್ಯ ದೃಷ್ಟಿಯಿಂದ ಇದರಲ್ಲಿ ಮೂರು ಹೆಚ್ಚಿನ ಅನುಬಂಧಗಳನ್ನು ಸೇರಿಸಬಹುದಿತ್ತು : ವಿಷಯ-ಪುಟಸೂಚಿ (index), ಘಟನೆಗಳ ಕಾಲಾನುಕ್ರಮ, ಮತ್ತು ಅಂಕಿತನಾಮಗಳು ಮೊದಲಬಾರಿಗೆ ಬಂದಾಗ ಇಸವಿಗಳ ಮಾಹಿತಿ.

ಕೊನೆಯದಾಗಿ ವಾಚಕನ ಆತ್ಮಾವಲೋಕನ : ಸ್ವತಂತ್ರ ಭಾರತಕ್ಕೆ ೫೦ ವರ್ಷಗಳಿಗಿಂತಲೂ ಹೆಚ್ಚು ಪ್ರಾಯವಾಗಿದ್ದರೂ ನಮ್ಮ ಅಸಂಖ್ಯ ಪ್ರತಿಭೆಗಳನ್ನು ನಾವು ಹೇಗೆ ನಡೆಸಿಕೊಂಡಿದ್ದೇವೆ, ಇಂದಿಗೂ (೨೦೦೪) ನಡೆಸಿಕೊಳ್ಳುತ್ತಿದ್ದೇವೆ ?

ಜಿ. ಟಿ. ನಾರಾಯಣರಾವ್
೮, 'ಅತ್ರಿ', ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ
ಮೈಸೂರು - ೫೭೦ ೦೦೯

**ಕ**ಳೆದ ದಶಕದ ಆರ್ಥಿಕ ಉದಾರೀಕರಣ ನಮ್ಮ ಬದುಕಿನಲ್ಲೆಲ್ಲಾ ಕಂಡೂ ಕಾಣದಂತೆ ಒಳಹೊಕ್ಕು ಬಹುರಾಷ್ಟ್ರೀಯ ಕಂಪೆನಿಗಳ 'ಕಾಂಟ್ರ್ಯಾಕ್ಟ್ ಕಾರ್ಪೊರೇಟ್' ಅಂಥ ಜಾಣ ಕೃಷಿ ತಂತ್ರಗಳಿಂದ ದೇಶದ ಸಣ್ಣಪುಟ್ಟ ರೈತರು ತಮ್ಮ ತುಂಡು ಭೂಮಿಗಳಲ್ಲೇ ಕೂಲಿಯಾಳುಗಳಾಗುವ ದಿನ ದೂರವಿಲ್ಲ. ಶತಮಾನಗಳ ಗುಲಾಮಗಿರಿಯಿಂದ ಸೊರಗಿರುವ ನಾವು ಈ ವಿಶ್ವ ಮಾರುಕಟ್ಟೆ ದಾಳಿಯನ್ನು ಎದುರಿಸುವಲ್ಲಿ ವಸ್ತುನಿಷ್ಠ ವಿಚಾರ ವಿಮರ್ಶೆ ಮಾಡಬೇಕಾದದ್ದು ಇಂದಿನ ಸವಾಲು.

ಭಾರತ ಭೌಗೋಳಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಹೆಮ್ಮೆಯ ನಾಡು. ಅದರ ಸೊಗಡನ್ನು ಸಂಸ್ಕರಿಸಿ ಸವಿಯುವ ಹೃದಯವಂತಿಕೆ ಬೇಕು. ದೇಶದ ೧,೦೦೦ ಮಿಲಿಯನ್ ಜನಸ್ತೋಮ ೩೨೮ ಮಿಲಿಯನ್ ಹೆಕ್ಟೇರ್ ಪ್ರದೇಶದ ಉದ್ದಗಲಕ್ಕೂ ಹಂಚಿ ಹರಡಿರುವ ಪ್ರಕೃತಿಯ ಕೊಡುಗೆಯನ್ನು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಕೃಷಿ ಮಾಡಿಕೊಂಡು ಏರುಪೇರುಗಳನ್ನೆದುರಿಸಿ ಸಾವಿರಾರು ವರ್ಷಗಳಿಂದ ಬದುಕಿ ಬಾಳಿದ್ದಾರೆ. ಉದ್ದಕ್ಕೂ ಭೂಮಿ ಉಳುವವನು ಉಳಿಸಿಕೊಳ್ಳುವವನ ಸಂಬಂಧ, ಉಳುವವನಿಗೆ ಪ್ರತಿಕೂಲವಾಗಿಯೇ ಬೆಳೆದುಬಂದಿದೆ.

ಈ ಗಂಭೀರ ಚಿಂತನೆ ಬದಿಗಿಟ್ಟು ಪ್ರಸ್ತುತದ ವಾಸ್ತವಾಂಶಗಳನ್ನು ಗಮನಿಸೋಣ. ನಮ್ಮ ಭೂ ವಿಸ್ತೀರ್ಣ ೩೨೮ ಮಿಲಿಯನ್ ಹೆಕ್ಟೇರ್ (೧ ಹೆಕ್ಟೇರ್ ಅಂದರೆ ೨.೫ ಎಕರೆ); ಅದರಲ್ಲಿ ೨೧೦ಕ್ಕೆ ಜೀವಿಧಾರಣ ಸಾಮರ್ಥ್ಯ (ಬಯೋಪೊಟೆನ್ಷಿಯಲ್) ಇದೆ. ೧೪೨ ಮಿಲಿಯನ್ ಉಳುಮೆಯಾಗಿದೆ. ೬೦ಕ್ಕೆ ನೀರಾವರಿ ಇದೆ.ಅದು ೧೯೭೫ರ ಕೃಷಿ ಆಯೋಗದ ಅಂಕಿ ಅಂಶದಂತೆ. ಉತ್ತಭೂಮಿ ೮೨ ಮಿಲಿಯನ್ ಹಿಡುವಳಿಗಳಾಗಿ ಹಂಚಿಹೋಗಿದೆ. ವಿಸ್ತೀರ್ಣದ ಆಧಾರದಂತೆ ಹಿಡುವಳಿಗಳ ವರ್ಗೀಕರಣ ಹೀಗಿದೆ : (೧) ಸಬ್ ಮಾರ್ಜಿನಲ್ ಅರ್ಧ ಹೆಕ್ಟೇರ್‌ಗೂ ಕಡಿಮೆ. (೨) ಮಾರ್ಜಿನಲ್ ಅರ್ಧದಿಂದ ೧ (೩) ಸ್ಮಾಲ್ ೧ ರಿಂದ ೨ (೪) ಸೆಮಿ ಮೀಡಿಯಂ ೨ ರಿಂದ ೪ (೫) ಮೀಡಿಯಂ ೪ ರಿಂದ ೧೦ (೬) ಲಾರ್ಜ್ ೧೦ ಹೆಕ್ಟೇರಿಗೂ ಜಾಸ್ತಿ. ಹಿಡುವಳಿಗಳ ವಿಸ್ತೀರ್ಣ ಹಂಚಿಕೆಯನ್ನು ಪರಿಶೀಲಿಸಿದಾಗ ಕಣ್ಣು ಕುಕ್ಕುವಂತೆ ಎದ್ದು ಕಾಣುವ ಚಿತ್ರಣ ಒಟ್ಟು ೮೨ ಮಿಲಿಯನ್ ಹಿಡುವಳಿಗಳಲ್ಲಿ ೬೦-೬೨ ಮಿಲಿಯನ್ ಹಿಡುವಳಿಗಳು ೨ ಹೆಕ್ಟೇರಿಗಿಂತ ಕಡಿಮೆ ಗಾತ್ರದವು. ಅದರಲ್ಲಿ ೪೦-೪೫ ೧ ಹೆಕ್ಟೇರಿಗಿಂತ ಸಣ್ಣವು; ಅರ್ಧ ಹೆಕ್ಟೇರಿಗಿಂತ ಚಿಕ್ಕವು ೨೦-೨೫

# ಸುಸಂಘಟಿತ ಕೃಷಿ ಹಾಗೂ ಅಂತ್ಯೋದಯ

ಪ್ರೊ|| ಬಿ. ವಿ. ವೆಂಕಟದಾಸ್



ಕುರಿ ಸಾಕಣೆ - ದುಡ್ಡಿನ ಬ್ಯಾಂಕು

ಮಿಲಿಯನ್. ೧೯೯೦ರ ಅಂದಾಜಿನಂತೆ ಒಟ್ಟು ೧೦೭ ಮಿಲಿಯನ್ ಭೂ ಹಿಡುವಳಿಗಳಲ್ಲಿ ಮುಕ್ಕಾಲುಭಾಗ ಅಂದರೆ ಶೇ. ೭೮ರಷ್ಟು ಅಂದರೆ ೮೦ ಮಿಲಿಯನ್ ಹಿಡುವಳಿದಾರರು ಅವರೊಟ್ಟಿನ ಬಡಗಿ, ಕಮ್ಮಾರರಂಥ ಕುಶಲಕರ್ಮಿ ಕುಟುಂಬಗಳು ೧೫-೨೦ ಮಿಲಿಯನ್. ಅವರ ಪಾಲಿಗೆ ಬಂದ ಸಾಗುವಳಿ ಭೂಮಿ ಮೂರರಲ್ಲಿ ಒಂದು. ಅದೂ ಕೊಚ್ಚಣೆಯಾದ ಮಳೆಯಾಧಾರಿತ ಬರಡು. ಅದಕ್ಕೆ ಜೋತುಬಿದ್ದ ೬೦೦-೭೦೦ ಮಿಲಿಯನ್ ಜನರ ಬದುಕೂ ಅಷ್ಟೇ. ಹೊಟ್ಟೆಪಾಡಿಗೆ ಊರು-ಪಟ್ಟಣಗಳಲ್ಲಿ ಕಂಡ ಕಂಡಲ್ಲಿ ಕೆಲಸ-ಕೂಲಿ ಯಾಚಿಸುತ್ತಾ ಬರುವ ದೌರ್ಭಾಗ್ಯರು ಇವರೇ. ಇದೇ ಪರಿಸ್ಥಿತಿ ಕರ್ನಾಟಕದಲ್ಲೂ ಇತರೆಡೆಯಂತೆಯೇ. ಉಳುಮೆಯಾದ ೧೨೩ ಲಕ್ಷ ಹೆಕ್ಟೇರಿನಲ್ಲಿ ೨೧ ಲಕ್ಷ ಬೀಳು. ೩೮ ಲಕ್ಷ ಬಡ ರೈತರಿಗೆ ಕೇವಲ ೧೬ ಲಕ್ಷ ಹೆಕ್ಟೇರ್ ನೀರಾವರಿ ಭೂಮಿಯೂ ಸೇರಿದಂತೆ, ಉಳಿದೆಲ್ಲ ಉತ್ತಮ ಜಮೀನು ಅಂದರೆ ೨/೩ನೇ ಭಾಗ ೧೯ ಲಕ್ಷ ಬಲ್ಲಿದರಲ್ಲಿ, ಅನುಕೂಲಸ್ಥ ರೈತರಲ್ಲಿ. ಇನ್ನು ಒಂದು ಲೆಕ್ಕಾಚಾರದಂತೆ ಬೇರೆ ಬೇರೆ ರೈತ ಕುಟುಂಬ ವರ್ಗಗಳಿಗೆ ಅಂದರೆ, ತೀರಾ ಸಣ್ಣ, ಅತಿ ಸಣ್ಣ, ಸಣ್ಣ ಉಪಮಧ್ಯಮ, ಮಧ್ಯಮ ಹಾಗೂ ದೊಡ್ಡ ಕುಟುಂಬದ ವ್ಯಕ್ತಿಗೆ ತಲಾವಾರು ಲಭ್ಯ ಭೂಮಿ ಅನುಕ್ರಮವಾಗಿ ಗುಂಟೆಗಳಲ್ಲಿ ೫,೧೫,೩೦,೫೫, ೧೨೦ ಮತ್ತು ೩೦೦. ಹಳ್ಳಿಗಾಡಿನಲ್ಲಿ ಆರ್ಥಿಕ ಸಾಮಾಜಿಕ ಅವಕಾಶಕ್ಕೆ ದ್ಯೋತಕ ಭೂಮಿ. ಇದರ ವಿತರಣೆಯಲ್ಲಿ ಅಥವಾ ಅದರ ಮೇಲಿನ ಹಿಡಿತದಲ್ಲಿ ನಮ್ಮ ಧುರೀಣರಲ್ಲಿ ಗಂಭೀರವಾದ ಚಿಂತನೆ ಕಳಕಳಿ ಎಂದೂ ಮೂಡಿದಂತಿಲ್ಲ. ಅರ್ಧ-೨ ಹೆಕ್ಟೇರ್ ಉಳ್ಳ ಬಡರೈತ, ಅವನ ಬೇಸಾಯ ಕ್ರಮಗಳ ಸಂಘಟನೆಯಿಂದ ಅವನಿರುವಲ್ಲಿಯೇ ನೆಮ್ಮದಿಯಾಗಿ ಬಾಳುವುದು ಹೇಗೆ ಎಂಬುದೇ ಈ ಚಿಂತನೆಯ ಉದ್ದೇಶ.

ಈ ದಿಸೆಯಲ್ಲಿ ಒಂದು ಮುಖ್ಯ ವಿಷಯಕ್ಕೆ ನಮ್ಮ ಗಮನ ತಪ್ಪಬಾರದು. ಮುಖ್ಯ ೧೯೬೫-೭೦ರ



ಹಸಿರು ಕ್ರಾಂತಿಯ ಪ್ರಧಾನ ಅಂಗಗಳಾದ ಸುಧಾರಿತ ಬೀಜ, ಗೊಬ್ಬರ, ಸಸ್ಯ ಸಂರಕ್ಷಣೆ ಇಂತಹ ಒದಗಿಬಂದ ಸೌಲಭ್ಯಗಳನ್ನು ಶ್ರದ್ಧೆಯಿಂದ ಬಳಸಿ, ದೇಶದ ಆಹಾರ ಪರಿಪೂರ್ಣತೆಗೆ ಸಹಾಯಕರಾದವರು ನಮ್ಮ ಪ್ರಗತಿಪರ ರೈತರು ಒಟ್ಟು ರೈತರ ಸಂಖ್ಯೆಯಲ್ಲಿ ೩ರಲ್ಲಿ ೧ ಭಾಗಕ್ಕೂ ಕಡಿಮೆ. ಇವರ ಕೊಡುಗೆ ಅಪಾರ, ಶ್ಲಾಘನೀಯ. ಪ್ರಸ್ತುತ ಸ್ಪರ್ಧಾತ್ಮಕ ವಿಶ್ವ ಮಾರುಕಟ್ಟೆಯಲ್ಲಿ ಅವರದೇ ನಿಯಮಗಳ ಪರಿಧಿಯಲ್ಲೇ ಇವರ ತೊಂದರೆ ಅನುಕೂಲಗಳನ್ನು, ಸರ್ಕಾರ ಜಾಣತನದಿಂದ ನಿಭಾಯಿಸುವುದು ಅದರ ಆದ್ಯ ಹೊಣೆ.



ವಸತಿ ಹಿಂಬದಿ ಶೌಚಾಲಯ - ಬಯೋಗ್ಯಾಸ್ ಪ್ಲಾಂಟ್

ಸಣ್ಣಾಟ ಒದಗಿಸುವ ಬಹೂಪಯೋಗಿ ಗಿಡ ಮರಗಳ ಬೆಳೆಕ್ರಮ ಅಥವಾ ಆಗ್ರೋಫಾರೆಸ್ಟ್ ರೂಢಿ ಸ್ಥಾಪನೆ. ಹಾಗೆಯೇ, ಸೂಕ್ತ ಜಾಗಗಳಲ್ಲಿ ಬೇವು, ಹೊಂಗೆ, ಹುಣಸೆ, ಹಲಸು, ಮಾವು ಈ ಬಗೆಯ ಆರ್ಥಿಕ ಬೆಳೆಗಳು ವರಮಾನ ದಾಯಕ ಎಂಬುದನ್ನು ನೆನಪಿಡಬೇಕು. ಮೇಲೆ ಹೇಳಿದ ಅಂಶಗಳ ಜೊತೆಗೆ ಕಾರ್ಯರೂಪಕ್ಕೆ ತರಬೇಕಾದ ಕ್ರಮವೆಂದರೆ, ಕಾಡಿನ ಅವಲಂಬನೆಗೆ ತಡೆ, ಅದರ ನಾಶಕ್ಕೆ ರೈತನ ಮೇಲಿನ ಹುಸಿ ಆರೋಪಕ್ಕೆ ವಿದಾಯ. ಅಂತೆಯೇ ಇಳಿಜಾರಿನ ತಗ್ಗಿನಲ್ಲಿ ಹರಿನೀರು ಶೇಖರಣೆಗೆ ಹೊಂಡ ನಿರ್ಮಾಣ.

ಇದರೊಟ್ಟಿಗೆ ಗಮನಾರ್ಹ ವಿಪರ್ಯಾಸ; ಆಹಾರೋತ್ಪನ್ನ ೫೦ ರಿಂದ ೨೦೦ ಮಿಲಿಯನ್ ಟನ್ನಿಗೆ ಮಿಗಿಲಾಗಿದೆ, ೬೦ ಮಿಲಿಯನ್ ಕಾಪು ದಾಸ್ತಾನಿದೆ. ಆದರೆ ೩೦೦ ಮಿಲಿಯನ್ ಜನ ಹಸಿದವರಿದ್ದಾರೆ. ಸುಸಂಘಟಿತ ಕೃಷಿ ಅರ್ಥಾತ್ ವಿಸ್ತೃತ ಅಕ್ಕಡಿ ಅಥವಾ 'ಆಗ್ರೋಫಾರೆಸ್ಟ್' ರೂಢಿ ಒಬ್ಬೊಬ್ಬ ಅರ್ಧ-೨ ಹೆಕ್ಟೇರಷ್ಟೇ ಭೂಮಿಯುಳ್ಳ ಬಡ ರೈತ ತನ್ನ ನೆಲೆಯಲ್ಲಿಯೇ ವರ್ಷವಿಡೀ ಉದ್ಯೋಗಾವಕಾಶ ಸೃಷ್ಟಿಸಿ ತನ್ನ ಕಾಳುಕಡ್ಡಿ, ತರಕಾರಿ, ಹಣ್ಣು ಹಂಪಲು, ಒಲೆಗೆ ಉರುವಲು, ದನಕರುಗಳಿಗೆ ಹುಲ್ಲು, ಹಸಿರು ಮೇವು, ಗೊಬ್ಬರ, ಮಣ್ಣು ನೀರು ಸಂರಕ್ಷಣೆಯ ಹೊಣೆ ಹೀಗೆ ಎಲ್ಲ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ದಾರಿ, ಒಂದು ಚಿಂತನಶೀಲ ಪ್ರಜ್ಞೆ ಅದೇ ಸಮಗ್ರ ಗ್ರಾಮೀಣ ಅಭಿವೃದ್ಧಿಯ ತತ್ವ. ಅದು ಇತ್ತೀಚಿನ ೫೦ ವರ್ಷಗಳಲ್ಲಿ ಮರೀಚಿಕೆಯಾಗಿಯೇ ಉಳಿದಿದೆ. ಗಾಂಧೀಜಿ ಕುಮಾರಪ್ಪ ಅವರ ಚಿಂತನೆ ಇದೇ ಆಗಿತ್ತು. ಮೊದಲ ಹೆಜ್ಜೆ; ಒಂದೊಂದು ತುಂಡು ಹೊಲದಲ್ಲೇ ರಾಗಿ, ಜೋಳ, ಕಾಳುಗಳನ್ನು ಒಟ್ಟೊಟ್ಟಿಗೆ ಸಮಸಮನಾಗಿ ಬೆಳೆಯುವುದರ ಜೊತೆಗೆ ಅಲ್ಲಿಯೇ ಹಾಳು-ಪಾಳು ಬಿದ್ದು ಕಳೆಕಸ ಹುಳು ಹುಪ್ಪಟ ರೋಗರುಜಿನಗಳಿಗೆ ಆಗರವಾಗಿರುವ ಜಮೀನಿನ ಸರಹದ್ದು, ಅಡ್ಡ ಉದ್ದ ಬದು, ಕಾಂಟೂರು ಸಾಲು, ಮೂಲೆ ಓರೆಕೋರೆ, ಇಲ್ಲೆಲ್ಲಾ ಸನ್ನಿವೇಶಕ್ಕೆ ಮಣ್ಣು, ಹವಾಗುಣ ರೈತನ ಒಲವುಗಳಿಗನುಗುಣವಾಗಿ ನೆಟ್ಟಗೆ ಎತ್ತರವಾಗಿ ಬೆಳೆಯುವ ಗ್ಲಿರಿಸೀಡಿಯಾ, ಸೀಪಿಯಂ, ಸೋಬಾಬುಲ್, ನುಗ್ಗೆ, ಅಗಸೆ ಇಂಥ ಮೇವು-ಸೊಪ್ಪು, ಸೌದೆ,




ಮೈಸೂರಿನ ಇನ್‌ಸ್ಟಿಟ್ಯೂಷನ್ ಆಫ್ ಎಂಜಿನಿಯರ್ಸ್ ಸಭಾಂಗಣದಲ್ಲಿ ಜನವರಿ ತಿಂಗಳು ನಡೆದ ನವಕರ್ನಾಟಕದ ಬೃಹತ್ ಪುಸ್ತಕ ಮೇಳವನ್ನು ಖ್ಯಾತ ವಿಚಾರವಾದಿ ಪ್ರೊ|| ಕೆ. ರಾಮದಾಸ್ ಉದ್ಘಾಟಿಸಿದರು.

ಅನಾಯಾಸವಾಗಿ ಒದಗುವ ಹುಲ್ಲು-ಹಸಿ ಮೇವು ಕೆಲವಷ್ಟು ಹಸು, ಕುರಿ, ಕೋಳಿಗಳಂಥವುಗಳ ಸಾಕಾಣಿಕೆಗೆ ಪ್ರಚೋದನೆ. ಒದಗುವ ಸಗಣಿ, ಗಂಜಳ, ಕಸಗಳಿಂದ ನೇರವಾಗಿ ಗೊಬ್ಬರ ಇಲ್ಲವೇ ಬಯೋಗ್ಯಾಸ್ ಹಾಗೂ ಸ್ಲಡ್ಜ್ ಹೊಗೆ ರಹಿತ ಉರುವಲು, ಉರಿಯುವ ದೀಪಗಳು ಲಭ್ಯ. ಸಾಮೂಹಿಕ ಬಯೋಗ್ಯಾಸ್ ಪ್ಲಾಂಟ್‌ನಿಂದ ವಿದ್ಯುಚ್ಚಾಲಿತ ಮನೆ-ಕೈಗಾರಿಕೆ ಎಲೆಕ್ಟ್ರಿಕ್-ಎಲೆಕ್ಟ್ರಾನಿಕ್ ಬಿಡಿಭಾಗ ಇಂಥ ಸಣ್ಣ ಪುಟ್ಟ ತಯಾರಿಕೆ ಚಟುವಟಿಕೆಗಳಿಗೆ ದಾರಿ. ಬೆಳೆ, ಹೈನುಗಾರಿಕೆ ಇನ್ನಿತರ ಎಲ್ಲಾ ಉದ್ಯಮಗಳಲ್ಲೂ, ರೈತನಿಗೆ ಅವನ ವಿಶಿಷ್ಟ ವ್ಯಕ್ತಿತ್ವಕ್ಕೆ ಧಕ್ಕೆಯಾಗದಂತೆ ಸನ್ನಿವೇಶಕ್ಕೆ ಹೊಂದುವ ಜೈವಿಕ ವಿಧಾನಗಳೂ ಸೇರಿದಂತೆ, ಆಧುನಿಕ ಕೃಷಿ ತಂತ್ರಜ್ಞಾನ ಅಳವಡಿಕೆ ಅತ್ಯಂತ ಅವಶ್ಯಕ. ಅದು ಅವನ ಹಕ್ಕೂ ಹೌದು.

ಸದಾ ಕುಣಿದು ಕುಪ್ಪಳಿಸುವ ಹಸಿರು ಹಾಗೂ ನಾನಾ ಚಟುವಟಿಕೆಗಳ ಕೇಂದ್ರ ಬಿಂದುವಾದ ತನ್ನ ತುಂಡು ಭೂಮಿ ಅವನ ದಿನವಿಡೀ ಗಮನ ಕೇಳುತ್ತದೆ. ಹಳ್ಳಿಯ ಕೊಳಚೆ-ಕೊಚ್ಚೆಗಳಿಂದ ಸಮೃದ್ಧವಾದ ಗಾಳಿ ಬೆಳಕುಳ್ಳ ತನ್ನ ಹೊಲಕ್ಕೆ ರೈತನ ವಸತಿ ತಾನೇ ತಾನಾಗಿ ಬದಲಾಗುತ್ತದೆ. ಗ್ರಾಮೀಣ ಜೀವನ ಸುಧಾರಣೆಯಲ್ಲಿ ಇದು ಒಂದು ಪ್ರಧಾನ ಹೆಜ್ಜೆ. ಶ್ರಮದಿಂದ ಹೊರಹೊಮ್ಮುವ ಆತ್ಮವಿಶ್ವಾಸ ಪ್ರಾಮಾಣಿಕ ಕೆಚ್ಚು, ಸಾಮರ್ಥ್ಯ ಇವುಗಳ ಪ್ರತೀಕವಾದ ಈ ಸ್ವಾವಲಂಬಿ ಸಣ್ಣವ ಜಾಗತಿಕ ಮಾರುಕಟ್ಟೆಯ ಆಳ-ನೀಳಗಳನ್ನು ಅರಿತು ಅರಗಿಸಿಕೊಂಡು ಅದನ್ನು ಎದುರಿಸಿ ದೊಡ್ಡವನಾಗಿ ಬದುಕಿ ಬಾಳುವುದು ಸುಲಭಸಾಧ್ಯ. ಸದೃಢ ಭವಿಷ್ಯದ ಹೊಸ್ತಿಲಲ್ಲಿರುವ ಇವನ ಬಳಿ ಆತ್ಮಹತ್ಯೆಯಂಥ ಹೇಡಿ ಚಿಂತನೆ ಸೆರಳೂ ಅಸಾಧ್ಯ.

ಈ ಸಂದರ್ಭದಲ್ಲಿ ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ತರೀಕೆರೆ ತಾಲ್ಲೂಕು ಬಾವಿಕೆರೆ ಸಂಶೋಧನಾ ಕ್ಷೇತ್ರದಲ್ಲಿ ಈ ದಿಸೆಯಲ್ಲಿ ನಡೆಯುತ್ತಿರುವ ಪ್ರಯೋಗಗಳ ಪ್ರಸ್ತಾಪ ಉಚಿತ. ಒಂದು ಎಕರೆ ಹೊಲದಿಂದ ಮರಗಿಡ, ದನಕರು, ಕೈಗಾರಿಕೆ ಚಟುವಟಿಕೆಗಳ ಸಂಘಟನಾ ಕ್ರಮಗಳಿಂದ ಒಂದು ಶ್ರಮಜೀವಿ ಕುಟುಂಬದ ಜೀವನ ನಿರ್ವಹಣೆ ಹಾಗೂ ಸಾಗುವಳಿ ವೆಚ್ಚ ೪,೫೦೦ ರೂಪಾಯಿ ಕಳೆದು ಒಂದು ವರ್ಷದಲ್ಲಿ ೫,೫೦೦ ರೂಪಾಯಿ ನಿವ್ವಳ ಲಾಭ ಬಂದಿರುವುದು ವರದಿಯಾಗಿದೆ. ಇಂಥ ಜನಪರ ಸಂಶೋಧನ ಸಂತತಿ ವ್ಯಾಪಕವಾಗಬೇಕು. ನಮ್ಮದೇ ಆದ ಈ ಹಳ್ಳಿಯ ಜೀವನರೂಢಿ ಪುನರುತ್ಥಾನವಾಗಿ ರೂಢಮೂಲವಾಗಲು ಮೊದಲಲ್ಲಿ ಅಗತ್ಯಕ್ಕೆ ತಕ್ಕಂತೆ ಗಿಡ ಬಿತ್ತನೆ ಹಾಗೆಯೇ ಅದು ಬೆಳೆದು ಬೇರು ಬಿಟ್ಟು ಎದ್ದು ನಿಲ್ಲುವವರೆಗೂ ರಕ್ಷಣೆಗೆ ಕೃಷಿ ಮತ್ತು ಅರಣ್ಯ ಇಲಾಖೆಗಳ ಅಷ್ಟಿಷ್ಟು ಬೆಂಬಲ ಹಣಕಾಸು ಬೇಕು. ಈಗ ಅನೇಕ ಹೆಸರುಗಳಿಂದ ಹರಿಯುತ್ತಿರುವ ಬೊಕ್ಕಸದ ಸಂಪತ್ತು ಒಬ್ಬೊಬ್ಬ ರೈತನನ್ನೂ ನೆಲೆಸಿಸುವ ಅಭಿವೃದ್ಧಿ ಕಾರ್ಯಕ್ರಮಕ್ಕೆ ವಿನಿಯೋಗವಾಗಬೇಕು.

**ಪ್ರೊ|| ಬಿ. ವಿ. ವೆಂಕಟರಾವ್**
ವಿಶ್ರಾಂತ ಪ್ರಾಧ್ಯಾಪಕರು, ಕೃಷಿ ವಿಶ್ವವಿದ್ಯಾನಿಲಯ,
ಅಧ್ಯಕ್ಷರು: ಪರಿಸರ ಪ್ರಜ್ಞಾ ಪ್ರತಿಷ್ಠಾನ, ೭೮, ೩ನೇ ಅಡ್ಡರಸ್ತೆ,
ಗವಿಪುರಂ ಬಡಾವಣೆ, ಬೆಂಗಳೂರು - ೫೬೦ ೦೧೯



ಶ್ರೀ ಲಕ್ಷ್ಮಣ್ ಅವರು ಬರೆದಿರುವ ಆತ್ಮಕಥೆಯ ಹೆಸರು ಸಂಬೋಳಿ. ಲಕ್ಷ್ಮಣ್ ತಮ್ಮ ಬಾಲ್ಯದ ದಿನಗಳನ್ನು ಕಳೆದಿರುವುದು ಇಂದಿನ ದಟ್ಟ ಕಾಂಕ್ರಿಟ್ ಕಟ್ಟಡಗಳ ಬೆಂಗಳೂರಿನ ಮಧ್ಯ ಕಳೆದುಹೋಗಿರುವ ಕತ್ತರಗುಪ್ಪೆಗೂ ಕಲ್ಲಸಂದ್ರಕ್ಕೂ ನಡುವೆ ಇದ್ದ ತಪ್ಪಟ್ಟಿಯಪ್ಪನ ತ್ವಾಟ ಎನ್ನುವ ಒಂದು ಸ್ಥಳ ಎಂದರೆ ಆಶ್ಚರ್ಯವಾಗುತ್ತದೆ. ಲಕ್ಷ್ಮಣ್ ಅವರ ಆತ್ಮ ಕತೆಯನ್ನು ಓದುತ್ತಾ ಹೋದಂತೆ ಮನಸ್ಸು ತಳಮಳಗೊಳ್ಳುತ್ತದೆ. ಇಂದಿನ ಬೆಂಗಳೂರಿನ ನಡುವೆ ಹಾಸಿಕೊಂಡಿದ್ದ ಈ ಹಳ್ಳಿಗಳಲ್ಲಿ ಹಸಿವು ಮತ್ತು ಅಸ್ಪೃಶ್ಯತೆ ಇಷ್ಟೊಂದು ಕ್ರೂರವಾಗಿ ತಾಂಡವವಾಡುತ್ತಿತ್ತು ಎಂದರೆ ನಿಜವಾಗಿಯೂ ನೋವಾಗುತ್ತದೆ.

''ಕೀಳು ಜಾತಿ''ಯಲ್ಲಿ ಹುಟ್ಟಿದ ಒಂದೇ ಕಾರಣಕ್ಕಾಗಿ ಲಕ್ಷ್ಮಣ್ ತನ್ನ ಬಾಲ್ಯದ ದಿನಗಳಿಂದ ಇಂದಿನವರೆಗೂ ಹಾದಿ ಬೀದಿ ಮನೆ ಗುಡಿಸಲು ಕೊನೆಗೆ ಕಛೇರಿಗಳಲ್ಲೂ ಅಪನಿಂದನೆಗೆ ಒಳಗಾಗಿ ಮನುಷ್ಯರನ್ನು ಕಂಡರೆ ಹಾವು ತುಳಿದವರಂತೆ ಮೆತ್ತಗಾಗಿ ದೂರ ನಿಲ್ಲುವುದನ್ನು ನಾವು ಕಾಣಬಹುದಾಗಿದೆ. ಒಂದು ಕಡೆ ಲಕ್ಷ್ಮಣ್ ಅವರ ಜೊತೆ ಜೊತೆಗೆ ಕೆಲಸ ಮಾಡುವ ಕೊರಮ ಜಾತಿಗೆ ಸೇರಿದ ಗೆಳೆಯ ಕಛೇರಿಯಲ್ಲಿ ಚೆನ್ನಾಗಿ ಜೊತೆಯಲ್ಲಿದ್ದು ತೊಂದರೆಯಾದಾಗ ಲಕ್ಷ್ಮಣ್ ಅವರಲ್ಲಿ ಹಣವನ್ನು ಪಡೆದುಕೊಳ್ಳುತ್ತಾನೆ. ಅದೇ ಗೆಳೆಯ ಹುಡುಗಿಯನ್ನು ನೋಡಲು ಹೋದಾಗ ಲಕ್ಷ್ಮಣ್ ಅವರನ್ನು ಜೊತೆಗೆ ಕರೆದುಕೊಂಡು ಹೋಗುತ್ತಾನೆ. ಅಲ್ಲಿ ಹುಡುಗಿಯ ಮನೆಯಲ್ಲಿ ಇಬ್ಬರನ್ನೂ ಊಟಕ್ಕೆ ಆಹ್ವಾನಿಸಿದಾಗ ಹೊರಕ್ಕೆ ಎದ್ದುಬಂದ ಗೆಳೆಯ ಒಳಗಿರುವವನು ಮಾದಿಗ ಅವನ ಜೊತೆಗೆ ಊಟಕ್ಕೆ ಕುಳಿತುಕೊಳ್ಳುವುದು ಬೇಡ ಎಂದು ಹೇಳಿ ಊಟ ಮಾಡದೆ ಹೊರಟುಹೋಗುತ್ತಾನೆ.

**ಸಂಬೋಳಿ**

ಲಕ್ಷ್ಮಣ್

ಆನಂದಕಂದ ಗ್ರಂಥಮಾಲೆ,
ಮಲ್ಲಾಡಿಹಳ್ಳಿ - ೫೭೭ ೫೩೧

ಪುಟ : ೧೩೧ ರೂ. ೧೦೦

ಇನ್ನೊಂದು ಕಡೆ ಶಾಲೆಯಲ್ಲಿ ಕೆಲಸ ಮಾಡುತ್ತಿದ್ದ ಶಾಲೆ ಸಿಬ್ಬಂದಿ ಬೀಗರ ಊಟಕ್ಕೆ ಲಕ್ಷ್ಮಣ್‌ನನ್ನು ಆಹ್ವಾನಿಸುತ್ತಾರೆ. ಅಲ್ಲಿ ಊಟ ಮಾಡಿದ ಕಾರಣಕ್ಕೆ ಲಕ್ಷ್ಮಣ್ ಅಟೆಂಡರ್ ಕೆಲಸವನ್ನು ಕಳೆದುಕೊಳ್ಳುತ್ತಾನೆ. ಹೀಗೆ ಅನೇಕ ಘಟನೆಗಳು ಲಕ್ಷ್ಮಣ್ ಅವರ ಆತ್ಮಕತೆಯಲ್ಲಿ ಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ಸ್ವಾತಂತ್ರ್ಯ ಬಂದು ೫೫ ವರ್ಷಗಳಾದರೂ ನಮ್ಮ ದೇಶದಲ್ಲಿ, ಅದರಲ್ಲೂ ಹಳ್ಳಿಗಳಲ್ಲಿ, ಜಾತಿ, ಅಸ್ಪೃಶ್ಯತೆ ಸ್ವಲ್ಪವೂ ಕಡಿಮೆಯಾಗಿಲ್ಲ ಎನ್ನುವುದು ಇಲ್ಲಿ ಸಾಬೀತಾಗುತ್ತದೆ. ಲಕ್ಷ್ಮಣ್ ಅವರು ತಮ್ಮ ಬಾಲ್ಯದಿಂದ ಇಂದಿನವರೆಗೂ ಅನುಭವಿಸುತ್ತಿರುವ ಅಪಮಾನ, ನೋವು, ಹಸಿವು ಕೃತಿಯ ಉದ್ದಕ್ಕೂ ನಮ್ಮನ್ನು ಕಾಡುತ್ತಾ ಹೋಗುತ್ತದೆ.

ಇದರ ನಡುವೆ ಉತ್ತಮ ಜಾತಿಯಲ್ಲಿನ ಉತ್ತಮ ಮನಸ್ಸುಳ್ಳ ಮನುಷ್ಯರು ಕೆಲವರು ಅಲ್ಲಲ್ಲಿ ಕಾಣಿಸಿಕೊಳ್ಳುವುದನ್ನು ಲಕ್ಷ್ಮಣ್ ಉಲ್ಲಾಸವಾಗಿ ದಾಖಲಿಸುತ್ತಾ ಹೋಗುವುದು ಸ್ವಲ್ಪಮಟ್ಟಿಗಾದರೂ ಓದುಗರಿಗೆ ಸಮಾಧಾನ ತರಿಸುತ್ತದೆ. ಎಲ್ಲವನ್ನೂ ಮುಚ್ಚುಮರೆಯಿಲ್ಲದೆ ದಾಖಲಿಸುವ ಲಕ್ಷ್ಮಣ್ ಶಾಲೆಯ ಆವರಣದಲ್ಲಿ ಕುಳಿತು ತನ್ನ ಸಹಪಾಠಿಗಳು, ಆಟದಲ್ಲಿ ತೊಡಗಿರುವುದನ್ನು ನೋಡುತ್ತಾ, ಮೈದಾನದಲ್ಲಿ ಆಟವಾಡುವುದನ್ನು ನೋಡಿ ತಾನು ಹೋಗಿ ಅವರ ಜೊತೆಗೆ ಆಡಬೇಕೆನಿಸುತ್ತದೆ. ಆದರೆ ಹಸಿವಿನಿಂದ ಏಳಲಾರದೆ ನಿತ್ರಾಣನಾಗಿರುತ್ತಾನೆ. ಅದೇ ರೀತಿಯ ಪ್ರಸಂಗವನ್ನು ಒಂದು ಕಡೆ ಲಕ್ಷ್ಮಣ್ ಹೀಗೆ ವಿವರಿಸುತ್ತಾರೆ.

– ಹೊಟ್ಟೆ ಲಾವ್‌ಲಾವ್ ಅನ್ತಿತ್ತು. ರಾತ್ರೆ ಬರೇ ನೀರ್ಕುಡ್ಕಂಡು ಮನಿಕೊಂಡಿದ್ದೆ. ಹೊಟ್ಟೆ ಹಸಿವಿಗೆ ನಿದ್ದೆ ಯದರ್ಕಂಡಿತ್ತು. ಹಸಿವಿನಿಂದ ಬಳಲಿ ಆಯಾಸಗೊಂಡಿದ್ದೆ. ಹಾಳಾದ ಚಳಿಗೆ ಎಷ್ಟೇ ಗೂಡರಿಸ್ಕಂಡು ಮನಿಕಂಡಿದ್ರೂ ಮೈನಡುಗ್ತಿತ್ತು. ಸರೋತ್ನಾಗೆ ಹೊಟ್ಟೆ ಒಳ್ಗಡೆ ಸಂಕಟ ಸುರ್ವಾಗಿತ್ತು. ಅಳಲೂ ಶಕ್ತಿ ಇಲ್ದ ಒಳ್ಳಾಡ್ತಿದ್ದೆ. ನನ್ನಮ್ಮ ನನ್ಗೆ ನೀರ್ಕುಡಿಸಿದ್ರು. ಇದ್ಕಿದ್ದಂಗೆ ಹೊಟ್ಟೆ ಒಳ್ಗೆ ತೊಳಸ್ತಿತ್ತು. ವಾಂತಿ ಬರ್ಲಿಲ್ಲ. ಸಂಕಟ ಜಾಸ್ತಿಯಾಗಿ ಪ್ರಾಣ ಹೋದಂಗಾಗ್ತಿತ್ತು. ಅರ್ಧ ಜ್ಞಾನ ತಪ್ಪಂಗಾಗ್ತಿತ್ತು. ಕಣ್ಗಳು ಮಂಜು ಮಂಜಾಗಿದ್ದವು.

''ಅಯ್ಯೋ ದೇವ್ರೇ ನನ್ಕಂದಮ್ಮ ಹೊಟ್ಟೆಗಿಲ್ದೆ ಸತ್ತೋತಾ ಅದಲ್ಲಪ್ಪಾ, ಪರ್ಮಾತ್ಮ ಇಗೇನ್ಮಾಡ್ಲಪ್ಪಾ'' ತಲೆ ತಲೆ ಚೆಚ್ಕೊಂಡು ನನ್ನಮ್ಮ ಅಳ್ತಿತ್ತು. ನನ್ನಪ್ಪ ಯಾರ್ಗೂ ಏನೂ ಹೇಳ್ದೀರಾ, ಕೇಳ್ದೀರಾ ಸುರಿವ ಮಳೆ ಕತ್ಲಾಗೇನೇ ಆಚ್ಗೋಗಿದ್ರು. ಎಷ್ಟೋ ಹೊತ್ತು ಆದ್ಮೇಲೆ ಎರಡ್ ಕೈಯಾಗೂ ಎರಡ್ಕಟ್ಟು ತೆನೆ ಹಿಡ್ಕಂಡು ಬಂದ್ರು. ''ತೆನೆ ಕಾಸಿ ಉಚ್ಕೊಡ್ತೀನಪ್ಪಾ ತಿಂದು ನೀರ್ಕುಡಿವಂತೆ'' ನನ್ನಮ್ಮ ನನ್ಗೆ ಸಮಾಧಾನ ಹೇಳ್ತು.

ಇದು ಲಕ್ಷ್ಮಣ್ ಅವರು ತಮ್ಮ ಕೃತಿಯ ಉದ್ದಕ್ಕೂ ಉಪಯೋಗಿಸಿರುವ ಅಪ್ಪಟ ಗ್ರಾಮೀಣ ಉಪಭಾಷೆ. ಒಟ್ಟಿನಲ್ಲಿ ಸಂಬೋಳಿಯ ಆತ್ಮಕಥೆ ಬರೆದಿರುವ ಲಕ್ಷ್ಮಣ್ ಅವರು ಎಷ್ಟೇ ಅಪಮಾನ ಅನ್ಯಾಯಗಳನ್ನು ಅನುಭವಿಸಿದ್ದರೂ ಎಲ್ಲಿಯೂ ಸಂಯಮವನ್ನು ಕಳೆದುಕೊಳ್ಳುವುದಿಲ್ಲ. ದಲಿತ ಸಾಹಿತ್ಯ ಇಕ್ಕಿರ್ಲ... ವದೀರ್ಲ... ಎನ್ನುವ ಘರ್ಷಣೆಯ ಪರ್ವವನ್ನು ಕಳೆದುಕೊಂಡು ಇತ್ತೀಚೆಗೆ ಮೌನವಾಗಿ ತನ್ನೊಳಗೆ ತಾನೇ ರೋದನೆ ಮಾಡಿಕೊಳ್ಳುತ್ತ ಅನಾವರಣಗೊಳ್ಳುತ್ತಿರುವುದನ್ನು ಸಂಬೋಳಿಯಲ್ಲಿ ನೋಡಬಹುದು. ಮರಾಠಿ ಸಾಹಿತ್ಯದಲ್ಲಿ ಬರುವಂತೆ ಕನ್ನಡದಲ್ಲಿ ದಲಿತರ ಆತ್ಮಕಥೆಗಳು ಏಕೆ ಬರುತ್ತಿಲ್ಲ ಎನ್ನುವ ಪ್ರಶ್ನೆಗೆ ಉತ್ತರ ಈಗೀಗ ದೊರಕುತ್ತಿದೆ ಎಂದರೆ ತಪ್ಪಾಗಲಾರದು. ಕೃತಿಯನ್ನು ಓದಿ ಮುಗಿಸಿದ ಮೇಲೆ ಒಂದು ಅನುಮಾನ ಬರುತ್ತದೆ.

ಲಕ್ಷ್ಮಣ್ ಅವರು ಈ ಕೃತಿಯನ್ನು ಬರೆಯುವುದಕ್ಕೆ ಮುಂಚೆ ಸಾಕಷ್ಟು ಚೆಕ್ಕದಾಗಿ ಚೊಕ್ಕದಾಗಿ ಬರೆಯಬೇಕು ಎನ್ನುವ ಮುಂದಾಲೋಚನೆಯಿಂದಲೋ ಏನೋ ಸಾಕಷ್ಟು ಅನುಭವಗಳನ್ನು ಮೊಟಕುಗೊಳಿಸಿಬಿಟ್ಟಿದ್ದಾರೇನೋ ಎನ್ನುವ ಅನುಮಾನ ಮೂಡುತ್ತದೆ. ಬುದ್ಧಿಜೀವಿಗಳು, ಸಾಹಿತ್ಯ ಪ್ರೇಮಿಗಳು, ದಲಿತ ಸಾಹಿತ್ಯದಲ್ಲಿ ಆಸಕ್ತಿ ಇರುವವರೆಲ್ಲ ಈ ಕೃತಿಯನ್ನು ಒಮ್ಮೆ ಓದಬೇಕಾಗಿದೆ.


ಎಂ. ವೆಂಕಟಸ್ವಾಮಿ
೫೭ಎ, ಸಾಯಿಲೋಟಸ್ ಬಡಾವಣೆ, ಸುಬ್ರಹ್ಮಣ್ಯಪುರ ಪೋಸ್ಟ್, ಬೆಂಗಳೂರು - ೫೬೦ ೦೬೧

# ಪ್ರತಿಭಾ ಪುರಸ್ಕಾರ

**ಶಾ**ಲಾ ಮತ್ತು ಕಾಲೇಜು ವಿದ್ಯಾರ್ಥಿಗಳನ್ನು ಅವರು ಪರೀಕ್ಷೆಗಳಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಪುರಸ್ಕರಿಸುವ ಕಾರ್ಯಕ್ರಮಗಳು ಎಲ್ಲೆಡೆ ಕಂಡುಬರುತ್ತಿವೆ.

ಇಂತಹ ಕಾರ್ಯಕ್ರಮಗಳನ್ನು ಪ್ರತಿಭಾ ಪುರಸ್ಕಾರವೆಂದು ಕರೆಯುವುದು ವಾಡಿಕೆಯಾಗಿದೆ. ಪ್ರತಿಭೆ ಎಂಬ ಶಬ್ದಕ್ಕೆ ಬೇರೆಯೇ ಅರ್ಥವಿದೆ ಮತ್ತು ವ್ಯಾಖ್ಯಾನವಿದೆ. ವಿದ್ಯಾರ್ಥಿಯೊಬ್ಬನಲ್ಲಿ ಯಾವುದಾದರೊಂದು ಕ್ಷೇತ್ರದಲ್ಲಿ ಪ್ರತಿಭೆಯ ಚಿಗುರು ಗುರುತಿಸಿದರೆ, ಆ ಪ್ರತಿಭೆ ಅವನ ಹೆತ್ತವರಿಗೆ ಕೆಲವೊಮ್ಮೆ ಅನಪೇಕ್ಷಿತ ಎಂದು ಕಂಡುಬರಬಹುದು. ಅಂತಹ ಸಂದರ್ಭಗಳಲ್ಲಿ ಅದನ್ನು ಹತ್ತಿಕ್ಕುವಂತೆ ಅವರು ಗುರುಗಳಿಗೆ ಆಗ್ರಹ ಮಾಡುವ ಆಶ್ಚರ್ಯಜನಕ ಸನ್ನಿವೇಶವನ್ನು ನಾವು ವಿವೇಚಿಸಬಹುದು. ಉದಾಹರಣೆಗಾಗಿ ಆಟೋಟ, ಯಕ್ಷಗಾನ ಬಯಲಾಟ, ನಟನೆ. ಇಂತಹ ಆಸಕ್ತಿಗಳು ಆ ಪ್ರತಿಭೆಯಲ್ಲಿ ಮೂಡಿಬಂದು, ಆ ಗೀಳಿನಲ್ಲಿ ಸಿಲುಕಿಕೊಂಡ ಅವರು ತಮ್ಮ ಪಾಠವನ್ನು ನಿರ್ಲಕ್ಷಿಸಿ ತಮ್ಮ ವ್ಯಾವಹಾರಿಕ ಅಥವಾ ವೃತ್ತಿಪರ ಜೀವನವನ್ನು ವ್ಯರ್ಥಗೊಳಿಸುವಂತಹ ಪರಿಸ್ಥಿತಿಯನ್ನು ತಲುಪಬಹುದೆಂಬ ಭೀತಿ ಆ ಆಗ್ರಹಕ್ಕೆ ಕಾರಣವಾಗುತ್ತದೆ. ಅಂತಹ ಕ್ಷೇತ್ರಗಳಲ್ಲಿ ಪ್ರತಿಭಾವಂತರೆಂದು ಕಾಣಿಸಿಕೊಂಡು ಮುಂದೆ ಐಷಾರಾಮ ಜೀವನವನ್ನು ಸಾಗಿಸುವವರು ಅಪರೂಪ, ಬದಲಾಗಿ ದಾನಿಗಳ ಅನುದಾನಕ್ಕಾಗಿ ಭಿಕ್ಷಾಪಾತ್ರೆಯನ್ನು ಹಿಡಿಯುವವರು ಸಾಮಾನ್ಯ. ಈ ಪ್ರತಿಭೆಯಲ್ಲಿ ಕ್ರಿಕೆಟ್ ಸಹ ಸೇರಿದೆ. ಆ ಕ್ಷೇತ್ರದಲ್ಲಿ ಆಸಕ್ತಿ ತೋರಿಸಿದ ಸಚಿನ್ ತೆಂಡುಲ್ಕರ್‌ನಂತಹ ಅದ್ಭುತ ಸಾಧಕ, ಚಲನಚಿತ್ರ ಕ್ಷೇತ್ರದ 'ಬಿಗ್ ಬಿ' ಎಂದೆನಿಸಿಕೊಂಡ ಬಚ್ಚನ್ ಅಥವಾ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿರುವ ಶಿವರಾಮ ಕಾರಂತರಂತೆ ತಮ್ಮ ಕಲಾ ಪ್ರತಿಭೆಯನ್ನು ಜೀವನೋಪಾಯವನ್ನಾಗಿಸುವಷ್ಟು ಮಟ್ಟಕ್ಕೇರಿಸಿ ಮಿನುಗುವವರು ಅಪರೂಪ. ಹಾಗೆಂದು ತಮ್ಮ ಆಸಕ್ತಿಯ ಪ್ರವೃತ್ತಿಯನ್ನು ತಮ್ಮ ಮನೋರಂಜನೆಗಾಗಿಯೋ ಅಥವಾ ಸ್ವಾಸ್ಥ್ಯಕ್ಕಾಗಿಯೋ ಮಿತವಾಗಿ ಪೋಷಿಸಿ ಅದನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಂಡು, ತಮ್ಮ ಜೀವನೋಪಾಯಕ್ಕೆ ಬೇರೆಯೇ ದಾರಿಯನ್ನು ಅನುಸರಿಸಿದ ವಿವೇಕಿಗಳೂ ಬಹುಮಂದಿ ಇದ್ದಾರೆ. ಆಸಕ್ತಿಯು ಪ್ರವೃತ್ತಿಯಾಗಗೊಡದೆ ವೃತ್ತಿಪರವಾಗಿರಿಸಬೇಕು. ಇದು ಎಲ್ಲರಿಂದಲೂ ಸಾಧ್ಯವಿಲ್ಲ.

ಪ್ರತಿಭೆಗೆ ಜ್ಞಾನ, ಅರಿವು, ತಿಳುವಳಿಕೆ ಎಂಬ ಅರ್ಥವೂ ಇದೆ. ಈ ಅರ್ಥದಲ್ಲಿ ವಿದ್ಯಾರ್ಥಿಗಳ ಯೋಗ್ಯತೆಯನ್ನು ಅವರ ವೃತ್ತಿಪರ ಜೀವನಕ್ಕೆ ಪೂರಕವಾದ ವಿಜ್ಞಾನ, ಗಣಿತ ಮುಂತಾದ ಕ್ಷೇತ್ರಗಳಲ್ಲಿ ಮಾಪನ ಮಾಡಿ, ಅವರಿಗೆ ಪುರಸ್ಕಾರವನ್ನು ನೀಡಲಾಗುತ್ತಿದೆ.

ಪುರಸ್ಕಾರ ಕಾರ್ಯಕ್ರಮಗಳನ್ನು ಸಾಮಾನ್ಯವಾಗಿ ವಿದ್ಯಾಸಂಸ್ಥೆಗಳು, ಸಮಾಜ ಸೇವಾ ಸಂಘಟನೆಗಳು ಅಲ್ಲದೆ ಈಗ ಬ್ಯಾಂಕುಗಳು ಮತ್ತು ಹಣಕಾಸು ಸಂಸ್ಥೆಗಳು ಕೂಡಾ ಆಯೋಜಿಸುತ್ತಿವೆ, ಇಲ್ಲವೆ ಆಶ್ರಯದಾತರಾಗುತ್ತಾರೆ. ಅದು ಅವರ ಪ್ರಚಾರಕ್ಕೆ ಒಂದು ವೇದಿಕೆಯೂ ಆಗುತ್ತದೆ. ಇದರಿಂದಾಗಿ ಅವು ತಾವು ಮುಂದು ತಾವು ಮುಂದು ಎಂದು ಬರುತ್ತಿದ್ದು ಅಂತಹ ಕಾರ್ಯಕ್ರಮಗಳು ಪತ್ರಿಕೆಗಳಲ್ಲಿ ವರದಿಯಾಗುತ್ತಿವೆ. ವಿದ್ಯಾರ್ಥಿಗಳು ಪಡೆದ ಅಂಕಗಳೇ ಪುರಸ್ಕಾರದ ಮಾನದಂಡವಾಗಿರುವುದರಿಂದಾಗಿ ಪ್ರತಿಭಾವಂತರ ಆಯ್ಕೆಯ 'ಲಾಬಿಯಿಂಗ್'ಗೆ ಎಡೆ ಇಲ್ಲದಿರುವುದು ಸುತ್ತ್ಯ.

ಇಂತಹ ಸಂದರ್ಭಗಳಲ್ಲಿ ವೇದಿಕೆಯಲ್ಲಿರುವವರು ಅದೇ ಸಂಸ್ಥೆಗಳ ವ್ಯಕ್ತಿಗಳು ಆಗಿರುತ್ತಾರೆ. ಆಗ ಆ ಗಣ್ಯವ್ಯಕ್ತಿಗಳಿಂದ ವಿದ್ಯಾರ್ಥಿಗಳಿಗೆ ಮಾರ್ಗದರ್ಶನವನ್ನು ನಿರೀಕ್ಷಿಸಲಾಗುತ್ತಿದೆ. ತಮ್ಮ ಸಾಧನೆಗಳ ಯಶೋಗಾಥೆಯನ್ನು ಹಾಡುವ ಮತ್ತು ತಮ್ಮ ವರ್ಚಸ್ಸನ್ನು ಹೆಚ್ಚಿಸುವ ಕ್ರಿಯೆಯಲ್ಲಿ ತೊಡಗಿರುವ ಆ ವ್ಯಕ್ತಿಗಳಿಂದ ವಿದ್ಯಾರ್ಥಿಗಳ ನಿರೀಕ್ಷೆ ಹುಸಿಯಾಗುವ ಸಂಭವವೇ ಹೆಚ್ಚು. ಯಾರಾದರೊಬ್ಬ ಮಹಾಪುರುಷರ ಸಾಧನೆಯನ್ನು ಪ್ರಶಂಸಿಸುತ್ತಾ ''ನೀವು ಅವರಂತೆ ಆಗಲು ಪ್ರಯತ್ನಿಸಿರಿ, ಅದಕ್ಕಾಗಿ ಚೆನ್ನಾಗಿ ಓದಿ, ಹೆಚ್ಚು ಅಂಕ ಪಡೆಯಿರಿ; ಸಾಧಿಸಿದರೆ ಸಂಬಳ ನುಂಗಬಹುದು'' ಎಂಬಿತ್ಯಾದಿ ಸವಕಲು ನುಡಿ, ಚರ್ವಿತ ಚರ್ವಣವನ್ನು ಪದೇ ಪದೇ ಕೇಳುತ್ತಿರುವ ವಿದ್ಯಾರ್ಥಿಗಳು 'ಬೋರ್' ಆಗುತ್ತಾರೆ ಮತ್ತು ಬಾಯಾಕಳಿಸುತ್ತಾರೆ. ಆಗ ಅವರಿಗೆ ಅಂತಿಮವಾಗಿ ಆಗುವ ಲಾಭ ಜೇಬಿನಲ್ಲಿ ಪ್ರಶಸ್ತಿಯ ರೂಪದಲ್ಲಿ ದೊರೆತ ಒಂದೆರಡು ನೋಟುಗಳನ್ನು ತುಂಬಿಸಿದ ಲಕೋಟೆ, ಲಘು ಫಲಾಹಾರ ಮತ್ತು ತಾವು ಎಲ್ಲರ ಮುಂದೆ ಕಾಣಿಸಿಕೊಂಡೆವೆಂಬ ತೃಪ್ತಿ ಮಾತ್ರ. ಕಲಿಕೆ ಮುಂದುವರಿಸಲು ಸರಿಯಾದ ಮಾರ್ಗದರ್ಶನ ಸಿಕ್ಕಿದೆಯೇ ಎಂಬುದು ಪ್ರಶ್ನಾರ್ಥಕ ಚಿಹ್ನೆಯಾಗಿಯೇ ಉಳಿಯಬಹುದು.

ಹೆಚ್ಚು ಅಂಕಗಳನ್ನು ಪಡೆಯುವ ಉದ್ದೇಶ ಯಾವ ವಿದ್ಯಾರ್ಥಿಗಿಲ್ಲ? ಎಲ್ಲರಿಗೂ ಇದೆ. ನೇರ ಸಿಗದಿದ್ದವರು ಅಡ್ಡದಾರಿಯನ್ನು ಹಿಡಿಯುತ್ತಿರುವ ಪ್ರಕರಣಗಳೂ ಕಂಡುಬರುತ್ತಿವೆ. ಓದದವರಾರು ? ಎಷ್ಟು ಓದಿದರೂ ಪಾಠ ತಲೆಗೆ ಹಿಡಿಯುವುದಿಲ್ಲ ಎಂದು ಕೊರಗುವ ವಿದ್ಯಾರ್ಥಿಯ ಸಮಸ್ಯೆಗೆ ಪರಿಹಾರವೇನು ? ಓದಿ ಓದಿ ಮರುಳಾದ ಕೂಚುಭಟ್ಟ ಎಂಬಂತೆ ಒಬ್ಬನಾದರೆ, ಪರೀಕ್ಷೆಯಲ್ಲಿ ಉತ್ತಮ ಅಂಕಗಳನ್ನು ಪಡೆಯದಿದ್ದರೆ ಮನೆಯಿಂದ ಹೊರಗೆ ದಬ್ಬುತ್ತೇನೆಂಬ ತಂದೆಯ ಬೆದರಿಕೆಗೊಳಗಾದ ಮಗನು ಅಂಕಪಟ್ಟಿಯನ್ನು ತರಲೆಂದು ಶಾಲೆಗೆ ಹೋಗಿ ಅದನ್ನು ಅಲ್ಲಿ ನೋಡಿ ಭಯಭೀತನಾಗಿ ಮನೆಗೆ ಹಿಂತಿರುಗದವನು ಇನ್ನೊಬ್ಬನಾಗುತ್ತಾನೆ; ನೇಣು ಹಾಕಿಕೊಂಡವನು ಮತ್ತೊಬ್ಬನು. ಈ ತರದ ಅಪ್ರಬುದ್ಧ ವಿದ್ಯಾರ್ಥಿಗಳ ಕಲಿಕೆಯ ಸಮಸ್ಯೆ ಏನು ಎಂಬುದನ್ನು ಅರ್ಥ ಮಾಡದೆ, ಅದರ ನಿವಾರಣೆಯಾಗದೆ, ಹೆಚ್ಚು ಅಂಕಗಳಿಗಾಗಿ ಅವರ ಮೇಲೆ ಒತ್ತಡ ಹೇರುವುದು ಅಪಾಯಕಾರಿ. ವಿದ್ಯಾರ್ಥಿಗಳ ಕಲಿಕೆಯ ಗುಣಮಟ್ಟವನ್ನು ಹೆಚ್ಚಿಸುವ ರಚನಾತ್ಮಕವಾದ ಮಾರ್ಗೋಪಾಯಗಳೇನಾದರೂ ಇವೆಯೇ ಎಂಬ ಅವರ ಮತ್ತು ಆ ಕಾರ್ಯಕ್ರಮಗಳಿಗೆ ಆಹ್ವಾನಿತರಾಗುವ ಹೆತ್ತವರ ನಿರೀಕ್ಷೆಯತ್ತ ಗಮನ ಹರಿಸುವ.

**ಉಪನ್ಯಾಸಕರ ಉಪನ್ಯಾಸವನ್ನು 'ಬಂಕ್' ಮಾಡುವುದು ಬುದ್ಧಿವಂತಿಕೆಯಲ್ಲ**

ಪಾಠವನ್ನು ಹತ್ತು ಸಲ ಓದುವುದಕ್ಕಿಂತ ಒಮ್ಮೆ ಬರೆಯುವುದು ಹೆಚ್ಚು ಫಲಕಾರಿ ಎಂಬ ಮಾತಿದೆ. ಇದು ಸತ್ಯವೇ, ಆದರೆ ಅದನ್ನು ಮೀರಿದ ಮತ್ತೊಂದು ಮಾತಿದೆ. ಪಾಠವನ್ನು ಹತ್ತು ಸಲ ಬರೆಯುವುದಕ್ಕಿಂತ ಉಪಾಧ್ಯಾಯರು ಕ್ಲಾಸಿನಲ್ಲಿ ಮಾಡುತ್ತಿರುವ ಪಾಠವನ್ನು ಒಮ್ಮೆ ಗಮನವಿಟ್ಟು ಆಲಿಸುವುದು ಹೆಚ್ಚು ಪ್ರಯೋಜನಕಾರಿ ಎಂಬುದು. ಆದುದರಿಂದ ವಿದ್ಯಾರ್ಥಿಗಳು ಉಪನ್ಯಾಸಕರ ಲೆಕ್ಚರನ್ನು ಎಂದೂ 'ಬಂಕ್' ಮಾಡಬಾರದು. ಇದು ಬುದ್ಧಿವಂತಿಕೆಯಲ್ಲ. ಉಪಾಧ್ಯಾಯರು ಪಾಠ ಮಾಡುತ್ತಿರುವಾಗ ಅವರ ಹಾವಭಾವಗಳು, ಸ್ವರ ಭಾರ, ಒತ್ತುಗಳನ್ನು ಗಮನಿಸಿ ಕೇಳಿದಾಗ ವಿಷಯ ಮನದಟ್ಟಾಗುತ್ತದೆ. ಕರಿಹಲಗೆಯ ಮೇಲೆ ಆಗಾಗ್ಗೆ ಅವರು ಬರೆಯುತ್ತಿರುವ ಬರಹ, ರೇಖಾಚಿತ್ರಗಳು ಕಲಿಕೆಯನ್ನು ಸಂಪನ್ನಗೊಳಿಸುತ್ತವೆ. ಪಾಠ ಮುಗಿದ ನಂತರವೂ ಉಪಾಧ್ಯಾಯರ ಮಾತುಗಳು ಸ್ಮೃತಿಪಟಲದಲ್ಲಿ ಪ್ರತಿಧ್ವನಿಸುತ್ತಿರುತ್ತವೆ. ಕಲಿಕೆಯ ಅತಿ ಮುಖ್ಯ ಸಾಧನ ಉಪನ್ಯಾಸ ಶ್ರವಣ. ಆ ಅಮೂಲ್ಯವಾದ ಅವಕಾಶವನ್ನು ಕ್ಯಾಂಟೀನಿನಲ್ಲಿದ್ದು, ಹುಡುಗ/ಹುಡುಗಿಯರನ್ನು ಚುಡಾಯಿಸುತ್ತಾ ಅಥವಾ ಉಪನ್ಯಾಸಕರನ್ನು ಲೇವಡಿ ಮಾಡುತ್ತ ಕಳೆದುಕೊಳ್ಳಬಾರದೆಂದು ವಿದ್ಯಾರ್ಥಿಗಳಿಗೊಂದು ಕಿವಿಮಾತು.

ದಕ್ಷ ಉಪನ್ಯಾಸಕರು ಉಪನ್ಯಾಸ ಮಾಡುವ ಮುಂಚೆ ತಯಾರಿಕೆ ಮಾಡುತ್ತಾರೆ. ಅದೇ ತರಹ ವಿದ್ಯಾರ್ಥಿಗಳೂ ಪಠ್ಯಪುಸ್ತಕವನ್ನು ಮುಂಚಿತವಾಗಿ ಓದಿ ತಮಗೆ ವಿವರಣೆ ಬೇಕಾದ ಕ್ಲಿಷ್ಟ ವಿಷಯಗಳ ಪಟ್ಟಿ ಮಾಡಬೇಕು. ಆಗ ನಿರೀಕ್ಷಿಸುತ್ತಿರುವ ಉತ್ತರವನ್ನು ಉಪನ್ಯಾಸದಲ್ಲಿ ಗುರುತಿಸುವುದು ಸುಲಭವಾಗುತ್ತದೆ. ಈಗ 'ಗೈಡು'ಗಳು ಬಳಕೆಯಲ್ಲಿವೆ. 'ಗೈಡ್ಸ್' ಪಠಣ ಮಾಡಿದ ವಿದ್ಯಾರ್ಥಿಯು ಅದರಲ್ಲಿದ್ದ ಪ್ರಶ್ನೆಯೇ ಬಂದರೆ ಅದನ್ನು ಸರಿಯಾಗಿ ಉತ್ತರಿಸಬಹುದು. ಆದರೆ ವಿಷಯದ ಪೂರ್ವಾಪರವನ್ನು ತಿಳಿಯದ ವಿದ್ಯಾರ್ಥಿಗೆ ಅದೇ ಪ್ರಶ್ನೆಯನ್ನು ಸ್ವಲ್ಪ ಹಿಂದುಮುಂದಾಗಿ ಕೇಳಿದರೆ ಪ್ರಶ್ನೆ ಗೊಂದಲಮಯವಾಗುತ್ತದೆ. ಇದರ ನಿವಾರಣೆಗೆ ಒಂದೇ ಉಪಾಯ. ಪಠ್ಯಪುಸ್ತಕವನ್ನು ಒಮ್ಮೆ ಆಮೂಲಾಗ್ರವಾಗಿ ಉಪಪಠ್ಯ ರೂಪದಲ್ಲಿ ಓದುವುದು.

**ಸಾಮಾನ್ಯರೆಂದು ಕಂಡುಬರುವ ವಿದ್ಯಾರ್ಥಿಗಳೇ ಸಮಾಜದ ಬೆನ್ನೆಲುಬು**

ವಿದ್ಯಾರ್ಥಿಗಳ ಹೆತ್ತವರು ಹೀಗೆ ಮಾತನಾಡುವುದು ಸಾಮಾನ್ಯ. ''ಕಲಿಯುವ ಮಕ್ಕಳಿಗೆ ಎಲ್ಲಿದ್ದರೇನು ? ಹೇಗಿದ್ದರೇನು ?'' ಹೀಗೆನ್ನುತ್ತಾ ಅವರು ತಮ್ಮ ಮಕ್ಕಳ ಗೋಜಿಗೆ ಹೋಗದೆ ಹಾಗೆಯೇ ಬಿಟ್ಟುಬಿಡುತ್ತಾರೆ. ''ಯೋಗ್ಯತೆ ಇದ್ದರೆ ಮಗ ಕಲಿತಾನು'' ಎಂದು ಹೇಳಿ ತಮ್ಮ ಕೈ ತೊಳೆದುಕೊಳ್ಳುತ್ತಾರೆ. ಈ ಮಾತಿನಲ್ಲಿ ಸತ್ಯಾಂಶ ವಿದ್ದರೂ, ಅವರನ್ನು ಹಾಗೆಯೇ ಬಿಟ್ಟುಬಿಡುವುದು ಬೇಜವಾಬ್ದಾರಿಯಾಗಿದೆ. ಸ್ವಪ್ರೇರಣೆಯಿಂದ ಮತ್ತು ತಮ್ಮ ಬುದ್ಧಿವಂತಿಕೆಯಿಂದ ಕಲಿತು ಪ್ರತಿಭಾವಂತರಾಗುವವರು

ಟಿ. ಸಿ. ಶ್ರೀಯಾನ್

# ಕರ್ನಾಟಕ ಸರ್ಕಾರ

## 55ನೇ ಗಣರಾಜ್ಯೋತ್ಸವ

### ಅಂದು ಭವ್ಯ ಭಾರತದ ಭವಿಷ್ಯದ ಯೋಜನೆ
### ಇಂದು ಆಧುನಿಕ ಜಗತ್ತಿನ ಅಭಿವೃದ್ಧಿಶೀಲತೆಗೆ ಮಾದರಿ ಕರ್ನಾಟಕ

ಇಂದು ನಮ್ಮ ಭಾರತ ದೇಶದ 55ನೇ ಗಣರಾಜ್ಯೋತ್ಸವ ಸಂಭ್ರಮ. ವೈವಿಧ್ಯತೆಗಳ ನೆಲೆವೀಡಾದ ಭಾರತ, ರಾಷ್ಟ್ರಕವಿ ಕುವೆಂಪು ಅವರ ಆಶಯದಂತೆ **ಸರ್ವ ಜನಾಂಗದ ಶಾಂತಿಯ ತೋಟ**ವಾಗಲು ಸರ್ವಸಮ್ಮತ ರಾಜ್ಯಾಂಗವನ್ನು ರೂಪಿಸಿ, ಪ್ರಜಾಪ್ರಭುತ್ವ ಹಾಗೂ ಪ್ರಗತಿಗೆ ಮಾರ್ಗದರ್ಶನ ಮಾಡಿದ ಮಹನೀಯರನ್ನು ಸ್ಮರಿಸುವ ಸಂದರ್ಭ. ಅದರ ಫಲವಾಗಿ ಇಂದು ಇಡೀ ದೇಶದಲ್ಲೇ ಕರ್ನಾಟಕ ವಿವಿಧ ರಂಗಗಳಲ್ಲಿ ಸಾಧಿಸಿದ ತನ್ನ ಮಹತ್ತರ ಸಾಧನೆಗಳಿಂದಾಗಿ ಮುಂಚೂಣಿಯಲ್ಲಿದೆ.

ಕಳೆದ 4 ವರ್ಷಗಳಲ್ಲಿ ಸರ್ಕಾರದ ಯೋಜನಾಬದ್ಧ ಕಾರ್ಯ ಚಟುವಟಿಕೆ ಮತ್ತು ಪಾರದರ್ಶಕ ಆಡಳಿತ ವಿಧಾನಗಳಿಂದಾಗಿ ಎಲ್ಲರ ನೋಟ ಈಗ ಕರ್ನಾಟಕದತ್ತ ನೆಟ್ಟಿದೆ. ಈ ಅಪೂರ್ವ ಸಾಧನೆ ಇಡೀ ದೇಶವೇ ಹೆಮ್ಮೆ ಪಡುವಂತಾಗಿದೆ.

50 ಲಕ್ಷಕ್ಕೂ ಹೆಚ್ಚು ಶಾಲಾ ಮಕ್ಕಳಿಗೆ ಮಧ್ಯಾಹ್ನ ಬಿಸಿಯೂಟದ ಮಾದರಿ ಕಾರ್ಯಕ್ರಮ **ಅಕ್ಷರ ದಾಸೋಹ**, 12 ಲಕ್ಷಕ್ಕೂ ಹೆಚ್ಚು ಮಹಿಳೆಯರಿಗೆ ಆರ್ಥಿಕ ಸ್ವಾವಲಂಬನೆ, ಸ್ವಾತಂತ್ರ್ಯಕ್ಕಾಗಿ ಕಾರಣವಾದ **ಸ್ತ್ರೀ ಶಕ್ತಿ**, ರೈತರ ಹಿತ ರಕ್ಷಣೆಯ **ಬೆಳೆ ವಿಮೆ**, 3322 ಕೆರೆಗಳ ಜೀರ್ಣೋದ್ಧಾರ, ವಸತಿರಹಿತರಿಗಾಗಿ 8 ಲಕ್ಷ ಮನೆಗಳ ನಿರ್ಮಾಣ, ಮಾಸಿಕ ಕೇವಲ 5 ರೂ. ವಂತಿಗೆಯಲ್ಲಿ ಅತ್ಯಾಧುನಿಕ ವೈದ್ಯಕೀಯ ಸೌಲಭ್ಯದ **ಯಶಸ್ವಿನಿ** ಹಾಗೂ ಕಡಿಮೆ ವೆಚ್ಚದಲ್ಲಿ ದೂರ ಸಂವೇದಿ ಸಂಪರ್ಕ ಜಾಲದ ಚಿಕಿತ್ಸಾ ಸೌಲಭ್ಯ. ಕೊಳಚೆ ಪ್ರದೇಶಗಳ ನಿವಾಸಿಗಳ ಜೀವನಮಟ್ಟದ ಉನ್ನತಿಯ **ನಿರ್ಮಲ ಜ್ಯೋತಿ** ಇವು ಕರ್ನಾಟಕದಲ್ಲಿ ಜನರ ಜೀವನ ಮೇಲ್ಮಟ್ಟಕ್ಕೇರಲು ಕಾರಣವಾದ ಕೆಲವು ಅಪೂರ್ವ ಯೋಜನೆಗಳು.

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಕೃಷಿ, ಆಹಾರ ಘಟಕ ಹಾಗೂ ಇತರ ಉದ್ದಿಮೆಗಳ ಸಾಧನೆ ಮತ್ತು ಸೌಲಭ್ಯಗಳಿಂದಾಗಿ ವಿಶ್ವವೇ ಇಂದು ಕರ್ನಾಟಕದತ್ತ ನೋಡುತ್ತಿದೆ.

 ಕರ್ನಾಟಕ ವಾರ್ತೆ

ಶೇ. ೫ ಮಂದಿ ಇರಬಹುದು. ಅಂತೆಯೇ ಮಕ್ಕಳಲ್ಲಿ ಶತದಡ್ಡರೂ ಇದ್ದಾರೆ. ಅವರಿಗೆ ಕೊಟ್ಟ ಬೋಧನೆ ಗೋರ್ಕಲ್ಲಿಗೆ ನೀರೆರೆದಂತೆ ಎಂಬಂತೆ ಕಂಡುಬಂದರೂ, ಅವರಲ್ಲಿಯೂ ಸುಪ್ತ ಪ್ರತಿಭೆ ಇದೆ. ಅದು ಯಾವುದಾದರೊಂದು ಕ್ಷೇತ್ರದಲ್ಲಿ ತನ್ನದೇ ಆದ ರೀತಿಯಲ್ಲಿ ಅನಾವರಣಗೊಳ್ಳುವ ಸಾಧ್ಯತೆ ಇದೆ. ಅಂಥವರ ಸಂಖ್ಯೆ ಶೇ. ೫ ರಷ್ಟಿರಬಹುದು. ಒಟ್ಟು ಈ ೧೦ ಮಂದಿಗಳ ಮಧ್ಯೆ ಇರುವವರು ಸಾಮಾನ್ಯರು. ಇವರ ಸಂಖ್ಯೆ ಶೇ. ೯೦ರಷ್ಟು ಆಗುತ್ತದೆ ಎಂದೆಣಿಸಿಕೊಳ್ಳೋಣ. ಇವರನ್ನು 'ನಾರ್ಮಲ್' ಎಂದು ಕರೆಯಬಹುದು. ಆದರೆ ಈ ೯೦ ಮಂದಿಯೇ ಸಮಾಜದ ಬೆನ್ನೆಲುಬು. ನಾವು ಶೇ. ೯೦ರ ಸಮೂಹದಲ್ಲಿರುವ ಈ ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ಕಾಳಜಿ ಹೊಂದಬೇಕಾಗಿದೆ. ಇವರಿಗೆ ಕಲಿಯಲು ಪ್ರೇರಣೆ, ಸಲಕರಣೆ, ಅನುಕೂಲತೆಗಳನ್ನು ಒದಗಿಸ ಬೇಕಾಗಿದೆ. ಕೆಲವರಿಗೆ ತೋರಿಸಿಕೊಟ್ಟರೆ ಸಾಕು ಮತ್ತು ಕೆಲವರಿಗೆ ಹೇಳಿಕೊಡಬೇಕು. ಈ ಎರಡನೇ ವರ್ಗದ ವಿದ್ಯಾರ್ಥಿಗಳಲ್ಲಿಯೂ ಅಪ್ರತಿಮ ಪ್ರತಿಭಾವಂತರು ಎದ್ದುಬರಬಹುದು.

**ಶಬ್ದೋಚ್ಚಾರಗಳು**

ಒಬ್ಬ ವಿದ್ಯಾರ್ಥಿಯ ಶಬ್ದೋಚ್ಚಾರವು ಆತನ ಕಲಿಕೆಯ ಗುಣಮಟ್ಟವನ್ನು ಬಯಲು ಮಾಡುತ್ತದೆ. ಕಲಿಕೆ ಗುರೂಪದೇಶವೋ, ಸ್ವಾಧ್ಯಾಯವೋ ಎಂಬುದನ್ನು ಗುರುತಿಸಬಹುದು. ಪರಭಾಷೆಯ ಶಬ್ದಗಳ ಉಚ್ಚಾರವು ಬರಹಕ್ಕೆ (ಸ್ಪೆಲ್ಲಿಂಗಿಗೆ) ಅನುಗುಣವಾಗದೆ ಇರಬಹುದು. ಉದಾಹರಣೆಗೆ ಇಂಗ್ಲಿಷ್ ಭಾಷೆಯ ಶಬ್ದಗಳು. ಹಾಗೆಯೇ ಕೆಲವು ವ್ಯಕ್ತಿಗಳ ಮತ್ತು ಸ್ಥಳಗಳ ಹೆಸರುಗಳು ಕೂಡಾ. ''ರೋಮ್‌ನಲ್ಲಿರುವಾಗ ರೋಮನರಂತೆ ಇರಿ'' ಎಂಬ ಗಾದೆ ಇದೆ. ಅಂತೆಯೇ ಬೇರೆ ಬೇರೆ ದೇಶಗಳ ಜನರೊಂದಿಗಿರುವಾಗ ಅವರಂತೆ ಮಾತನಾಡಿದರೆ ಅವರ ಆತ್ಮೀಯತೆಗೆ ಪಾತ್ರರಾಗುತ್ತೇವೆ. ಸರಿಯಾದ ಶಬ್ದೋಚ್ಚಾರ ಉಪನ್ಯಾಸಕರ ಉಪನ್ಯಾಸವನ್ನು ಕೇಳುತ್ತಿರುವ ಸಂದರ್ಭದಲ್ಲಿಯೇ ಕಲಿಯುವುದು ಸುಲಭದಾರಿಯಾಗಿದೆ. ಪುಸ್ತಕಗಳಲ್ಲಿ ಮತ್ತು ವೃತ್ತಪತ್ರಿಕೆಗಳಲ್ಲಿ ಬರುವ ಹೊಸ ಶಬ್ದಗಳನ್ನೂ ಬರಹದ ಅನುಸಾರ ಉಚ್ಚರಿಸಿದರೆ ಅನ್ಯರ ನಗೆಪಾಟಲಿಗೆ ಒಳಗಾಗಬಹುದು. ಆಂಗ್ಲಭಾಷೆಯ ಶಬ್ದಗಳ ಸರಿಯಾದ ಉಚ್ಚಾರ ಶಬ್ದಕೋಶವನ್ನು ನೋಡಿಯೂ ಕಲಿಯಬಹುದು. ಆದುದರಿಂದ ಪ್ರತಿಯೊಂದು ಹೊಸ ಶಬ್ದವನ್ನು ಬಳಸುವ ಮುನ್ನ ಶಬ್ದಕೋಶವನ್ನು ನೋಡಿ ಅದರ ಅರ್ಥ ವಿವಿಧ ಪ್ರಯೋಗಗಳನ್ನು ತಿಳಿದುಕೊಳ್ಳಬೇಕು ಮತ್ತು ಅದರ ಸರಿಯಾದ ಉಚ್ಚಾರವನ್ನು ಕಲಿಯಬೇಕು. ಸರಿಯಾದ ಉಚ್ಚಾರ ಕಲಿಯುವ ಇನ್ನೊಂದು ವಿಧಾನ ಆಕಾಶವಾಣಿಯ ವಾರ್ತೆಯನ್ನು ಕೇಳುವುದು. ವಾರ್ತೆಯನ್ನು ಬಿತ್ತರಿಸುವವರಿಗೆ ಶಬ್ದಗಳನ್ನು ನಿರ್ದಿಷ್ಟವಾದ ರೂಪದಲ್ಲಿ ಉಚ್ಚರಿಸಬೇಕೆಂಬ ಆದೇಶವಿದೆ. ಎಫ್. ಎಮ್. ರೇಡಿಯೋ ಪ್ರಸಾರದಲ್ಲಿ ಮಾತು ಸ್ಪಷ್ಟವಾಗಿ ಕೇಳಿಬರುತ್ತದೆ.

**ಪ್ರಾತಃಕಾಲ ಅಭ್ಯಾಸ ಮಾಡಲು ಅನುಕೂಲ**

ವಿದ್ಯಾರ್ಥಿಗಳು ದಿನದ ತಮ್ಮ ಮೊದಲ ಕೆಲಸ ಓದನ್ನಾಗಿಸಬೇಕು. ಅದೇ ಪ್ರಾತಃಕಾಲ. ಗುಲ್ಲು ಗದ್ದಲದಿಂದ ದೂರವಿರುವುದು, ಏಕಾಂತ (ಪ್ರತ್ಯೇಕ ಕೋಣೆ) ಇವು ಏಕಾಗ್ರತೆಗೆ ಅನುಕೂಲ. ಬಳಲಿದ ಮನಸ್ಸು ಗ್ರಹಣ ಶಕ್ತಿಗೂ, ಓದುತ್ತಿರುವಾಗ ಬೇರೆ ಕಡೆ ಗಮನ ಹರಿಸುವ ಪ್ರವೃತ್ತಿ ಏಕಾಗ್ರತೆಗೂ ಪ್ರತಿಕೂಲ.

**ಆಸಕ್ತಿಯುಳ್ಳ ವಿದ್ಯಾರ್ಥಿಗಳು ಯಾರು ?**

ಒಂದು ತರಗತಿಯ ದೃಶ್ಯ ಹೀಗಿದೆ. ಉಪಾಧ್ಯಾಯರು ಪಾಠ ಮಾಡುತ್ತಿರುವಾಗ ಶಾಲೆಯ ಗಂಟೆ ಬಾರಿಸುತ್ತದೆ. ಅದರ ಸಂಕೇತ ಅಂದಿನ ಮಟ್ಟಿಗೆ ಶಾಲೆ ಮುಗಿಯಿತು ಎಂದಿರಬಹುದು ಅಥವಾ ಉಪಾಧ್ಯಾಯರಿಗೆ ಮತ್ತೊಂದು ತರಗತಿಗೆ ಹೋಗಿರುವುದೂ ಆಗಿರಬಹುದು. ಅವರು ಅಲ್ಲಿಂದ ಹೊರಡುತ್ತಿರುವಾಗ ಕೆಲವು ಮಕ್ಕಳು ಅವರನ್ನು ಹಿಂದೆ ಹಾಕಿ ಓಡುವವರಿದ್ದಾರೆ. ಆದರೆ ಇನ್ನು ಒಬ್ಬಿಬ್ಬರು ನಿರಾಸೆ ಹೊಂದಿದವರಾಗಿ ''ಈ ಒಳ್ಳೆಯ ಪಾಠ ಇಷ್ಟರಲ್ಲಿಯೇ ಮುಗಿಯಿತೇ ? ನನಗೆ ಇನ್ನೂ ಕೆಲವು ವಿಷಯಗಳನ್ನು ತಿಳಿಯುವುದಿತ್ತು'' ಎಂದಂದುಕೊಂಡು, ಕರಿಹಲಗೆಯ ಮೇಲೆ ಬರೆದದ್ದನ್ನು ತಪ್ಪದೆ ನಕಲು ಮಾಡುತ್ತಾ, ಉಪಾಧ್ಯಾಯರು ಏನೆಲ್ಲಾ ಹೇಳಿದ್ದಾರೆಂದು ನೆನವರಿಸುತ್ತಾ ಅಲ್ಲಿಯೇ ಸ್ವಲ್ಪ ಕಾಲ ಕಳೆಯುವವರಿದ್ದಾರೆ. ಇಂಥವರು ನಿಜವಾಗಿಯಾದರೂ ಕಲಿಕೆಯಲ್ಲಿ ಆಸಕ್ತಿ ಉಳ್ಳವರು. ಉಪಾಧ್ಯಾಯರ ಮಟ್ಟಿಗೆ ಆಸಕ್ತಿ ಹೊಂದಿದ ವಿದ್ಯಾರ್ಥಿಗಳನ್ನು ಗುರುತಿಸಲು ಇದೊಂದು ಸುಲಭ ವಿಧಾನ. ಹೀಗೆ ಆಸಕ್ತಿ ಹೊಂದಿರುವ ವಿದ್ಯಾರ್ಥಿಗಳು ಜ್ಞಾನಾರ್ಜನೆಗೆ ಏನು ಮಾರ್ಗ ? ಹೆತ್ತವರು ವಿದ್ಯಾವಂತರಾಗಿದ್ದರೆ ಅವರಿಗೆ ಮನೆಯಲ್ಲಿ ಪಾಠ ಹೇಳಿಕೊಡಬಹುದು. ಹಣವುಳ್ಳವರು 'ಟ್ಯುಟೋರಿಯಲ್'ಗೆ ಕಳಿಸಬಹುದು. ಏನೂ ಇಲ್ಲದವರ ಬಗ್ಗೆ ಸಮಾಜದ ಸೇವಾ ಸಂಸ್ಥೆಗಳು ಕಾಳಜಿ ವಹಿಸಬೇಕಾಗಿದೆ. ಅಂತೂ ಕಲಿಯುವ ಆಸಕ್ತಿ ಇದೆ, ಕಲಿಸುವವರಿಲ್ಲ ಎಂಬ ಸ್ಥಿತಿ ತೀರ ಕರುಣಾಜನಕವಾದದ್ದು. ಇದು ಹಸಿವು ಉಂಟು, ಅನ್ನ ಇಕ್ಕುವವರಿಲ್ಲ ಎಂಬ ಅಳಲಿಗೆ ಸಮಾನ.

**ಟಿ. ಸಿ. ಶ್ರೀಯಾನ್**
ಮಾರಿಗುಡಿ ರಸ್ತೆ, ಸುರತ್ಕಲ್, ಮಂಗಳೂರು - ೫೭೫ ೦೧೪

## ಸಾದರ-ಸ್ವೀಕಾರ

**ಹಾರಾಟದ ಕಥೆ** *ಎಫ್. ಸಿ. ಚೇಗರೆಡ್ಡಿ*
**ಪುಟ : ೩೬** **ಬೆಲೆ : ರೂ. ೧೦**

**ಮಾಡಿ ಆಡು** *ಟಿ. ಎ. ಪ್ರಶಾಂತ ಬಾಬು, ನಾಗರಾಜಯ್ಯ*
**ಪುಟ : ೩೬** **ಬೆಲೆ : ರೂ. ೧೦**

**ಕಥೆಗಳು** (ಮಕ್ಕಳು ಮತ್ತು ಶಿಕ್ಷಕರು)
**ಪುಟ : ೩೬** **ಬೆಲೆ : ರೂ. ೧೦**

**ಅಸಮಾನ್ಯರ ಜೀವನದ ಸ್ವಾರಸ್ಯಗಳು** *ಈ. ಬಸವರಾಜು*
**ಪುಟ : ೩೬** **ಬೆಲೆ : ರೂ. ೧೦**

**ಏಕೆಂದು... ಏಕೆಂದು...**
*ಜಿ. ವಿನುತ, ಪಿ. ಕೆ. ಅಬ್ದುಲ್ ಲತೀಫ್*
**ಪುಟ : ೩೬** **ಬೆಲೆ : ರೂ. ೧೦**
ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ಭಾರತ ಜ್ಞಾನ ವಿಜ್ಞಾನ ಸಮಿತಿ, ಕರ್ನಾಟಕ**
ಭಾರತ ವಿಜ್ಞಾನ ಮಂದಿರ, ಬೆಂಗಳೂರು-೫೬೦ ೦೧೨

**ಪ್ರಸ್ತುತ** (ಕವನ ಸಂಕಲನ) *ಯು. ಕೆ. ವಿ. ಆಚಾರ್ಯ*
**ಪುಟ : ೬೪** **ಬೆಲೆ : ರೂ. ೩೦**
**ಪುಸ್ತಕ ನಿಧಿ,** ಲಕ್ಷ್ಮೀ ಸದನ, ಗಾವಳಿ, ಹಳ್ಳಾಡಿ-ಹರ್ಕಾಡಿ ಅಂಚೆ, ಕುಂದಾಪುರ ತಾ॥ - ೫೭೬ ೨೧೦

**ಪವಾಡ ಗುಟ್ಟು ಬಯಲು** (ವೈಚಾರಿಕ ಕೃತಿ) ಎಸ್. ರೇವಣ್ಣ
**ಪುಟ : ೪೮** **ಬೆಲೆ : ರೂ. ೩೦**
**ನವ್ಯ ಪ್ರಕಾಶನ,** ಅಣ್ಣೂರು, ಭಾರತೀನಗರ ಅಂಚೆ
ಮದ್ದೂರು ತಾಲೂಕು, ಮಂಡ್ಯ ಜಿಲ್ಲೆ - ೫೭೧೪೩೦

**ಮನವೆಂಬ ಮರ್ಕಟ** (ಸೂಕ್ತಿ, ಲೇಖನ ಸಂಗ್ರಹ)
*ಸಂ : ಟಿ. ವಿ. ವೆಂಕಟರಮಣಯ್ಯ*
**ಪುಟ : ೧೧೮** **ಬೆಲೆ : ರೂ. ೫೦**

**ಸಮಾನಾರ್ಥಕ ಕನ್ನಡ-ಇಂಗ್ಲಿಷ್ ಗಾದೆಗಳು**
*ಸಂ : ಟಿ. ವಿ. ವೆಂಕಟರಮಣಯ್ಯ*
**ಪುಟ : ೮೬** **ಬೆಲೆ : ರೂ. ೩೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಟಿ. ವಿ. ವೆಂಕಟರಮಣಯ್ಯ,** ಇಡಬ್ಲ್ಯುಎಸ್ ೨೧೮,
ಕೆಎಚ್‌ಬಿ ಕಾಲೋನಿ ೨ನೇ ಹಂತ, ೫ನೇ ಕ್ರಾಸ್
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

**ಮಹಾದರ್ಶನ** (ಎರಡು ದಶಕದ ಕವಿತೆಗಳು)
*ರಾಮಗಿರಿ ರವೀಂದ್ರ*
**ಪುಟ : ೧೩೬** **ಬೆಲೆ : ರೂ. ೮೦**
**ನಿರ್ಮಿತಿ ಪ್ರಕಾಶನ,** ೪೩, ೪ನೇ ಕ್ರಾಸ್
೬ನೇ ಮೆಯಿನ್, ೩ನೇ ಬ್ಲಾಕ್
ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

**ಸಂದೇಶ** (ಕಾವ್ಯ) *ಭಾರತೀಪುತ್ರ*
**ಪುಟ : ೨೬** **ಬೆಲೆ : ರೂ. ೩೫**

ರಸಗೀತೆ (ಕವನ ಸಂಕಲನ) *ಭಾರತೀಪುತ್ರ*
**ಪುಟ : ೩೬** **ಬೆಲೆ : ರೂ. ೩೦**
**ಭಾರತೀಯ ಸಾಹಿತ್ಯ,** ಹಳೇ ಅಂಚೆ ಕಛೇರಿ ರಸ್ತೆ
ನಾಗಮಂಗಲ - ೫೭೧ ೪೩೨

**ಕೃಷ್ಣಾರ್ಪಣ !?** (ಲೇಖನಗಳ ಸಂಕಲನ)
*ಶ್ರೀರಾಮ ದಿವಾಣ*
**ಪುಟ : ೭೨** **ಬೆಲೆ : ರೂ. ೪೦**
**ದಿವಾಣಶ್ರೀ ಪ್ರಕಾಶನ,** ಕನ್ನರ್ಪಾಡಿ ದೇವಸ್ಥಾನದ ಬಳಿ,
ಅಂಚೆ : ಕಡೆಕಾರ್, ಉಡುಪಿ - ೫೭೬ ೧೦೩

**ಶತಮಾನದ ರಾಷ್ಟ್ರಕವಿ** (ಲೇಖನ ಸಂಗ್ರಹ)
*ವಿವಿಧ ಲೇಖಕರು*
**ಪುಟ : ೪೮** **ಬೆಲೆ : ರೂ. ೨೫**
**ಅನ್ವೇಷಣೆ ಪ್ರಕಾಶನ,** ವಿಜಯನಗರ, ಬೆಂಗಳೂರು-೪೦

ಬಯಲು ಬಯಲಾದ ರೇಖೆಗಳು (ಚಿತ್ರ ಸಂಪುಟ)
*ಅಂದಾನಿ*
**ಪುಟ : ೧೨೦** **ಬೆಲೆ : ರೂ. ೪೩೫**
**ನೀಲಂಗಲ್ ಪಬ್ಲಿಕೇಷನ್ಸ್,** ಎಚ್. ನಂ. ೧೦/೫/೪,
ನೀಲಂಗಲ್, ಗುಲ್ಬರ್ಗಾ - ೫೮೫ ೧೦೩ (ಕರ್ನಾಟಕ)





## ಶಬ್ದ ಕಣ್ಣಿನ ನಡುವೆ (ಕವನ ಸಂಕಲನ)

ಸ. ರಘುನಾಥ

**ಪುಟ : ೮೨** **ಬೆಲೆ : ರೂ. ೬೦**

**ಶುಭದ ಪ್ರಕಾಶನ**, ಜರಗನಹಳ್ಳಿ , ಜೆ. ಪಿ. ನಗರ ಅಂಚೆ, ಬೆಂಗಳೂರು - ೫೬೦ ೦೭೮

ಕನ್ನಡ ಕಾವ್ಯಾಸಕ್ತರಿಗೆ ಪರಿಚಿತರಾದ ಸ. ರಘುನಾಥರ ನಾಲ್ಕನೆಯ ಕವನ ಸಂಕಲನ. ಇಲ್ಲಿನ ಹೆಚ್ಚಿನ ಎಲ್ಲ ಪದ್ಯಗಳನ್ನೂ ತುಂಬ ಸಾವಧಾನದಿಂದಲೇ ಓದಿ ಅರ್ಥೈಸಬೇಕಾಗಿದೆ. ನವ್ಯದ ಶೈಲಿಯೆಂದು ಗುರುತಿಸಬಹುದಾದ ಈ ಪದ್ಯಗಳು ಸ್ವಲ್ಪ ಬಿಗುವನ್ನೂ ಒಗಟನ್ನೂ ಒಡಲಲ್ಲಿ ಹಿಡಿದಿಟ್ಟುಕೊಂಡು ಒಡೆದು ನೋಡಿದರೆ ಅರ್ಥವಾಗಬಲ್ಲವು. ಹೊಸ ಹೊಸ ಪ್ರಯೋಗಗಳಿಂದ ಕಾವ್ಯವನ್ನು ಆಸ್ವಾದಿಸುವವರಿಗೆ ಸಾಕಷ್ಟು ವೈವಿಧ್ಯತೆಯನ್ನು ಇವು ನೀಡುತ್ತವೆ.



## ಜಾಗೃತಿ (ಕಾದಂಬರಿ)

ಕೆ. ಚಿನ್ನಪ್ಪ ಭಾರತಿ ಅನು : ಸುಶೀಲಾ

**ಪುಟ : ೨೧೫** **ಬೆಲೆ : ರೂ. ೧೨೫**

**ಅಧ್ಯಯನ ಪ್ರಕಾಶನ**, ಪಂಡಿತ ಸಾರ್ವಜನಿಕ ಗ್ರಂಥಾಲಯ ಕಟ್ಟಡ, ಶಿರಸಿ, ಉತ್ತರ ಕನ್ನಡ - ೫೮೧ ೪೦೧

ತಮಿಳಿನ ಕಾದಂಬರಿಯೊಂದರ ಕನ್ನಡಾನುವಾದ. ಐದು ಭಾರತೀಯ ಭಾಷೆಗಳಲ್ಲದೆ ಇಂಗ್ಲಿಷ್‌ನಲ್ಲಿಯೂ ಭಾಷಾಂತರ ಗೊಂಡ ಈ ಕೃತಿ ಮುಖ್ಯವಾಗಿ ಗುಡ್ಡಗಾಡು ಜನಾಂಗವೊಂದರ ಕ್ರಾಂತಿಕಾರಿ ಕಥೆಯನ್ನು ಹೇಳುತ್ತದೆ. ನಾಗರಿಕತೆಯಿಂದ ಬಹುದೂರ ತಮ್ಮ ಪಾಡಿಗೆ ಬದುಕುತ್ತಿರುವ ಜನರಿಗೆ ಅಧಿಕಾರಶಾಹಿಯಿಂದ ಎದುರಾಗುವ ಕಿರುಕುಳದ ಚಿತ್ರಣವಿದೆ. ಶೋಷಿತ ವರ್ಗಗಳ ಹೊಸ ಪೀಳಿಗೆ ಅನ್ಯಾಯದ ವಿರುದ್ಧ ಸಿಡಿದು ಹೋರಾಟಗಾರರಾಗಿ ರೂಪುಗೊಂಡಿರುವುದು ಕಾದಂಬರಿಯ ವಸ್ತು. ಶ್ರಮಜೀವಿ - ಅಧಿಕಾರಶಾಹಿ ವರ್ಗಗಳ ಮುಖಾಮುಖಿ.



## ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ

ಎಂ. ಎಚ್. ನಾಗರಾಜು

**ಪುಟ : ೩೦೫** **ಬೆಲೆ : ರೂ. ೨೦೦**

**ಅನಿಕೇತನ ಪ್ರಕಾಶನ**, 'ಅಮ್ಮ', ಉಪ್ಪಾರಹಳ್ಳಿ ಮುಖ್ಯರಸ್ತೆ, ರಿಂಗ್ ರಸ್ತೆ ಹತ್ತಿರ, ಗೆದ್ದಲಹಳ್ಳಿ, ತುಮಕೂರು-೫೭೨೧೦೫

ಇದೊಂದು ಜನಾಂಗೀಯ ಇತಿಹಾಸದ ಅಧ್ಯಯನ. ಪ್ರಾಚೀನ ಕಾಲದಿಂದಲೇ ಜನರು ಒಂದು ಪ್ರದೇಶದಿಂದ ಇನ್ನೊಂದೆಡೆಗೆ ಅನೇಕ ಕಾರಣಗಳಿಗಾಗಿ ವಲಸೆ ಹೋಗುತ್ತಿದ್ದರು. ತಮಗನುಕೂಲವಾದಲ್ಲಿ ಭೌಗೋಳಿಕವಾಗಿ ನೆಲೆನಿಂತು ಸಾಕಷ್ಟು ಸಾಂಸ್ಕೃತಿಕ - ಐತಿಹಾಸಿಕ ದಾಖಲೆ ನಿರ್ಮಿಸಿ ತಮ್ಮ ಹಿರಿಮೆ ತೋರಿದ್ದಾರೆ. ಪ್ರಸ್ತುತ ಪುಸ್ತಕದಲ್ಲಿ ಕುಂಚಿಟಗ ಜನಾಂಗದ ಮೂಲವನ್ನು ಶೋಧಿಸುತ್ತ ಸಾಕಷ್ಟು ಮಾಹಿತಿ ಸಂಗ್ರಹಿಸಿದ್ದಾರೆ. ಉಪಸಂಸ್ಕೃತಿ ಒಳಪಂಗಡಗಳನ್ನು ಅಧ್ಯಯನ ಮಾಡುವವರಿಗೆ ಒಂದು ಕೈಪಿಡಿಯಂತಿದೆ. ಆ ಜನಾಂಗದ ಪ್ರಮುಖರನ್ನೂ ಪರಿಚಯಿಸಲಾಗಿದೆ.



## ನೆನಪಿನ ಸುರುಳಿ ತೆರೆದಾಗ

ಎಚ್. ಎಸ್. ದೊರೆಸ್ವಾಮಿ

**ಪುಟ : ೧೯೬** **ಬೆಲೆ : ರೂ. ೭೫**

**ಸಾಹಿತ್ಯ ಮಂದಿರ**, ೧೮/ಬಿ, ೭ನೇ ಅಡ್ಡರಸ್ತೆ, ಎನ್. ಆರ್. ಕಾಲೋನಿ, ಬೆಂಗಳೂರು - ೫೬೦ ೦೧೯

ಸರಳ ಜೀವನವನ್ನು ಆಯ್ದುಕೊಂಡ ಹಿರಿಯ ಗಾಂಧೀವಾದಿ ಶ್ರೀ ಎಚ್. ಎಸ್. ದೊರೆಸ್ವಾಮಿ ಸೇವಾ ಮನೋಭಾವನೆಯ ನಿಸ್ವಾರ್ಥ ವ್ಯಕ್ತಿ. ಕ್ಷುದ್ರ ರಾಜಕಾರಣ – ಅಧಿಕಾರ ಲಾಲಸೆಯನ್ನು ಹತ್ತಿರವೂ ಸುಳಿಯದಂತೆ ದೂರಕ್ಕಟ್ಟಿದವರು. ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಅವರು ಹಣವನ್ನು ಕೈಬಿಟ್ಟು ನಿರ್ಮಲ ಚಾರಿತ್ರ್ಯವನ್ನು ಗಳಿಸಿದವರು. ಬಾಲ್ಯದಿಂದಲೂ ನಡೆದ ಅನೇಕ ಘಟನೆಗಳನ್ನಿಲ್ಲಿ ಸ್ಮರಿಸುತ್ತಾ ಹೋರಾಟ ಚಳುವಳಿಗಳಲ್ಲಿ ತಾವು ಸಾಗಿಬಂದ ರೀತಿಯನ್ನೂ ತಮ್ಮ ಒಡನಾಡಿಗಳನ್ನೂ ಪರಿಚಯಿಸಿದ್ದಾರೆ. ಸರಳತೆ, ಸಜ್ಜನಿಕೆ ಮತ್ತು ಆದರ್ಶದ ಪಾಠವೇ ಇಲ್ಲಿದೆ.



## ಪುರಾಣ ಮತ್ತು ವಾಸ್ತವ (ಲೇಖನಗಳು)

ಡಿ. ಡಿ. ಕೊಸಾಂಬಿ ಅನು : ಟಿ. ಎಸ್. ವೇಣುಗೋಪಾಲ್, ಶೈಲಜಾ

**ಪುಟ : ೧೭೨** **ಬೆಲೆ : ರೂ. ೧೨೫**

**ಚಿಂತನ ಉತ್ತರ ಕನ್ನಡ**, ಪಂಡಿತ ಸಾರ್ವಜನಿಕ ಗ್ರಂಥಾಲಯ, ಹಳೆ ಬಸ್‌ಸ್ಟ್ಯಾಂಡ್ ಹತ್ತಿರ, ಶಿರಸಿ, ಉತ್ತರ ಕನ್ನಡ

ಭಾರತೀಯ ಇತಿಹಾಸ ತತ್ವಶಾಸ್ತ್ರಗಳನ್ನು ಆಳವಾಗಿ ಅಭ್ಯಾಸ ಮಾಡಿ ಚರಿತ್ರೆಯನ್ನು ಅರ್ಥೈಸುವಲ್ಲಿ ಹೊಸದಿಕ್ಕು ತೋರಿದ ಶ್ರೇಷ್ಠ ವಿದ್ವಾಂಸರು ಶ್ರೀ ಡಿ. ಡಿ. ಕೊಸಾಂಬಿ. ಚರಿತ್ರೆಯು ಹಾದುಹೋದ ಪ್ರತಿಹಂತದ ಗುರುತುಗಳನ್ನೂ ಎಚ್ಚರಿಕೆಯಿಂದ ವಿಶ್ಲೇಷಿಸುತ್ತ ಭಾರತೀಯ ಪುರಾಣಗಳ ಭೌತಿಕ ನೆಲೆಯನ್ನು ಶೋಧಿಸುವ ಅವರ ದೃಷ್ಟಿಕೋನ ಅನನ್ಯವಾಗಿದೆ. ಚರಿತ್ರೆ ಅಥವಾ ಅಲ್ಲಿ ಉಲ್ಲೇಖಿಸಲ್ಪಟ್ಟ ಸಮಾಜ ಕೇವಲ ಮೇಲ್ವರ್ಗ ಮತ್ತು ಆಳುವವರದ್ದು ಮಾತ್ರವಾಗಿರದೆ ಶ್ರೀಸಾಮಾನ್ಯನೂ ಅದರಲ್ಲಿ ಸೇರಿರುತ್ತಾನೆಂಬ ಸತ್ಯದ ಅರಿವು ಮೂಡಿಸುತ್ತದೆ.



## ಗತಿ – ಚಿತ್ರ (ಕವನ ಸಂಕಲನ)

ಪ್ರಮೀಳಾ ಚೊಕ್ಕಾಡಿ

**ಪುಟ : ೪೪** **ಬೆಲೆ : ರೂ. ೪೦**

**ಇಂಚರ ಪ್ರಕಾಶನ**, ನಂ. ೧೬೭, ೧೦ನೇ ಮೈನ್, ೩ನೇ ಫೇಸ್, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೫೮

ಹಳ್ಳಿಯ ಸುಂದರ ಭಾವನೆಗಳನ್ನು ನೆನಪಿಸುವ ಇಲ್ಲಿನ ಕವನಗಳಲ್ಲಿ ಹೆಣ್ಣಿನ ಕನಸು ಮತ್ತು ಹಾರೈಕೆಗಳು ಹಾಸುಹೊಕ್ಕಾಗಿ ಹೆಣೆದುಕೊಂಡಿವೆ. ಉದಯೋನ್ಮುಖ ಪ್ರತಿಭೆಯೊಂದು ಉತ್ಸಾಹ - ಆಸಕ್ತಿಗಳಿಂದ ಬದುಕನ್ನು ಸೂಕ್ಷ್ಮವಾಗಿ ಅವಲೋಕಿಸುತ್ತ ಗತಿಸುತ್ತಿರುವ ಕಾಲದೊಂದಿಗೆ ತನ್ನ ಅನಿಸಿಕೆಯನ್ನು ಬೆರೆಸುತ್ತಿದೆ. ಚಿಕ್ಕ-ಚೊಕ್ಕ ಮೂವತ್ತೊಂದು ಕವಿತೆಗಳ ಸಂಕಲನ. ನೇರ ಮಾತಿನೊಂದಿಗೆ ನಿಮ್ಮನ್ನು ಸ್ವಾಗತಿಸುತ್ತಾ ಆತ್ಮೀಯ ಸಂಬಂಧವೊಂದರ ಪರಿಚಯ ನೀಡುತ್ತದೆ. ಸಂಕಲನದ ಗಮನಾರ್ಹ ಕವನ "ಹಳ್ಳಿಯ ಹೂಗಳು" ಓದಿ ನೋಡಿ.



## ಶ್ರೀಲಂಕಾ : ಒಂದು ಸುಂದರ ದ್ವೀಪ ರಾಷ್ಟ್ರ

ಯಾಕೂಬ್ ಖಾದರ್ ಗುಲ್ವಾಡಿ

**ಪುಟ : ೯೨** ಬೆಲೆ : ರೂ. ೪೦

**ಪುಸ್ತಕ ನಿಧಿ** , ಲಕ್ಷ್ಮೀ ಸದನ, ಗಾವಳಿ, ಪೋಸ್ಟ್ ಹಲ್ಯಾಡಿ - ೫೭೬ ೨೧೦, ಕುಂದಾಪುರ

ಕ್ರಿಕೆಟ್ ಚೆಂಡು - ಬ್ಯಾಟ್‌ನೊಂದಿಗೆ ಕ್ರೀಡಾಪಟುವಾಗಿ ಶ್ರೀಲಂಕಾ ಸಂದರ್ಶಿಸಿದ ಯಾಕೂಬ್ ಅವರು ಬರುವಾಗ ಪೆನ್ನು - ಹಾಳೆ ಹಿಡಿದು ಪ್ರವಾಸ ಕಥನವನ್ನೂ ಬರೆದು ಮುಗಿಸಿರುವ ಅಪರೂಪದ ಬರಹಗಾರ. ಸುಂದರ ದ್ವೀಪ ಶ್ರೀಲಂಕಾ ಬಗ್ಗೆ ಸ್ವಾರಸ್ಯವಾಗಿ ಮೂಡಿಬಂದ ಈ ನಿರೂಪಣೆ ಇತರ ಪ್ರವಾಸಿಗಳಿಗೂ ಸಾಕಷ್ಟು ಮಾಹಿತಿ ಒದಗಿಸುತ್ತದೆ. ಜೊತೆಗೆ ಈ ರಾಷ್ಟ್ರವನ್ನು ನೋಡುವ ಬಯಕೆ ಉಂಟಾಗುತ್ತದೆ. ಕೇವಲ ಹದಿನೇಳು ದಿನಗಳ ಅಲ್ಪಕಾಲದ ವಾಸ್ತವ್ಯದಲ್ಲಿ ಸಂಪಾದಿಸಿದ ವಿವರ ಈ ಪುಟ್ಟ ಪುಸ್ತಕದಲ್ಲಿ ದಾಖಲಾಗಿದೆ. ಬರವಣಿಗೆಯ ಉತ್ಸಾಹವೂ ಪುಟಿಯುವ ಚೆಂಡಿನಂತೆಯೇ ಇದೆ.



## ಅಸ್ಪೃಶ್ಯತಾ ನಿರ್ಮೂಲನ (ವಿಚಾರ ಸಾಹಿತ್ಯ)

ಎ. ಆರ್. ನಾರಾಯಣಘಟ್ಟ

**ಪುಟ : ೮೦** **ಬೆಲೆ : ರೂ. ೩೦**

**ಗೀತಾ ಕುಟೀರ**, ೭೦, ರತ್ನ ವಿಲಾಸ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦೦೦೪

ಕಳೆದ ಶತಮಾನದಲ್ಲಿ ಗಾಂಧೀಜಿ - ಅಂಬೇಡ್ಕರ್ ಅಸ್ಪೃಶ್ಯತೆಯ ನಿರ್ಮೂಲನೆಗೆ ಸಾಕಷ್ಟು ಶ್ರಮಿಸಿದ್ದಾರೆ. ವರ್ಣವ್ಯವಸ್ಥೆಯ ಉಳಿಕೆಯಾದ ಜಾತಿಪದ್ಧತಿ ಇರುವವರೆಗೂ ಇದರ ನಿವಾರಣೆ ಸುಲಭವೇನಲ್ಲ. ಈ ಸಾಮಾಜಿಕ ಪಿಡುಗನ್ನು ಸ್ವಲ್ಪ ವಿಸ್ತಾರವಾಗಿ ಈ ಕೃತಿಯಲ್ಲಿ ವಿಶ್ಲೇಷಿಸಲಾಗಿದೆ. ಶತಮಾನಗಳಿಂದ ಬೇರುಬಿಟ್ಟಿರುವ ಈ ಪದ್ಧತಿಯನ್ನು ಮನಃಪರಿವರ್ತನೆಯ ಮೂಲಕ ಮಾತ್ರ ಹೋಗಲಾಡಿಸಬಹುದೆಂದು ಲೇಖಕರ ಅಭಿಮತ. ನಿತ್ಯ ವ್ಯವಹಾರಗಳಲ್ಲಿ ಸಡಿಲಿಕೆಯಿದ್ದರೂ ಧಾರ್ಮಿಕ - ವೈಯಕ್ತಿಕವಾಗಿ ಉಳಿದುಕೊಂಡ ಬಗ್ಗೆ ಲೇಖನಗಳಿವೆ.

**– ಇಂದಿರಾ ಕುಮಾರಿ**

ರೇಖಾ [illegible]ನಾಥ್

# ರಾಷ್ಟ್ರಕ್ಕೇ ಪಿತನಾದ ಗಾಂಧೀಜಿ ಎಂತಹ ಪತಿ ?

ಅಂದು ಗಾಂಧೀಜಿಯ ಜನ್ಮದಿನ. ಸೇವಾಗ್ರಾಮದಲ್ಲಿ ಪ್ರಾರ್ಥನಾ ಸಮಯ. ಗಾಂಧೀಜಿಯ ಭಾಷಣಕ್ಕಾಗಿ ಊರಿನ ಜನ ಹಾಗೂ ಆಶ್ರಮವಾಸಿಗಳು ಸೇರಿದ್ದರು. ಕಸ್ತೂರಿ ಬಾ ಅಲ್ಲೊಂದು ಸಣ್ಣ ಮಣ್ಣಿನ ಹಣತೆ ಹಚ್ಚಿದ್ದರು. ಅದರ ಬತ್ತಿಗೆ ತುಪ್ಪ ಹಾಕಿದ್ದರು. ದೀಪವನ್ನು ಗಮನಿಸಿದ ಬಾಪೂ,

''ಯಾರು ಈ ದೀಪವನ್ನು ತಂದವರು ?'' ಎಂದರು.

''ನಿಮ್ಮ ಜನ್ಮದಿನಕ್ಕಾಗಿ ನಾನೇ ಹಳ್ಳಿಯಿಂದ ತಂದೆ'' ಎಂದರು ಕಸ್ತೂರಿ ಬಾ.

''ನನ್ನ ಜನ್ಮದಿನವನ್ನು ಉತ್ತಮ ಕೆಲಸಕ್ಕಾಗಿ ಮುಡಿಪಾಗಿಡಬಹುದಿತ್ತು. ನಮ್ಮ ಸುತ್ತಲ ಜನ ಒಣರೊಟ್ಟಿಗೂ ಗತಿಯಿಲ್ಲದೆ, ರೈತ ಹೊಟ್ಟೆಗೆ ಪರದಾಡುತ್ತಿರುವಾಗ ಆಶ್ರಮದಲ್ಲಿ ತುಪ್ಪವನ್ನು ಈ ರೀತಿ ದುರ್ವಿನಿಯೋಗಿಸಬಹುದೆ ? ಇದಕ್ಕಿಂತ ಕೆಟ್ಟದ್ದು ಬೇರೊಂದಿಲ್ಲ. ಇಷ್ಟು ವರ್ಷಗಳು ನನ್ನ ಜೊತೆಗಿದ್ದು ನೀನು ಕಲಿತಿದ್ದು ಇದೇ ಏನು ?'' ಎಂದು ಎಲ್ಲರೆದುರಿಗೆ ಕಸ್ತೂರಿ ಬಾರನ್ನು ತರಾಟೆಗೆ ತೆಗೆದುಕೊಂಡರು.

ಮಹಾತ್ಮನಿಗೆ ಬೇಕಾದ್ದು ಸಾಮಾಜಿಕ ಕಳಕಳಿಯ, ಅರಿವು ಬೆಳೆಸಿಕೊಂಡ ಹೆಂಡತಿ ! ಕಸ್ತೂರಿ ಬಾ ಇಂತಹ ಮಹಾತ್ಮನ ಹೆಂಡತಿಯಾಗಿ ಇದ್ದಿದ್ದು ೬೨ ವರ್ಷ !

ಬನಿಯಾ ಜಾತಿಗೆ ಸೇರಿದ, ಪೋರ್‌ಬಂದರ್‌ನ ವರ್ತಕ ಗೋಕುಲ್‌ದಾಸ್ ಮೆಕನ್‌ಜಿಯ ಮಗಳು ಕಸ್ತೂರಿ ಬಾಗೆ ಕರಮ್‌ಚಂದ್ ಗಾಂಧಿಯ ಮಗ ಮೋಹನದಾಸನ ಜೊತೆ ನಿಶ್ಚಿತಾರ್ಥವಾದಾಗ ಏಳು ವರ್ಷ ! ಅದು ಮದುಮಕ್ಕಳ ಗಮನಕ್ಕೇ ಬಾರದ ಹಿರಿಯರ ನಡುವಿನ ಒಪ್ಪಂದ. ಮನೆಯವರ ಪ್ರೀತಿಯ 'ಮೊಹಾನಿಯಾ'ನಿಗಿದು ಮೂರನೆಯ ನಿಶ್ಚಿತಾರ್ಥ ! ಮುಂಚಿನ ಎರಡು ನಿಶ್ಚಿತಾರ್ಥ ಹುಟ್ಟಿದ ಕೂಸುಗಳೊಡನೆ ನಡೆದಿತ್ತು. ಆ ಮಕ್ಕಳು ಅಂಬೆಗಾಲಿಡುವಾಗಲೇ ಸಾವನ್ನಪ್ಪಿದ್ದರಿಂದ ಮೂರನೆಯ ನಿಶ್ಚಿತಾರ್ಥ ಕಸ್ತೂರಿ ಬಾಳೊಂದಿಗೆ ನಡೆಯಿತು. ಏಳನೆ ವರ್ಷದಲ್ಲಿ ಮಾಡಿದ್ದ ನಿಶ್ಚಿತಾರ್ಥ, ಆರು ವರ್ಷಗಳ ನಂತರ ಹದಿಮೂರು ವರ್ಷದ ಶಾಲಾಬಾಲಕ ಮೋಹನದಾಸನಿಗೆ ಮದುವೆಗೆ ಕೆಲವು ದಿನಗಳ ಮುನ್ನ ತಿಳಿಸಲಾಯಿತು. ಆಗ ಕಸ್ತೂರಿ ಬಾಗೆ ಸಹ ಹದಿಮೂರು ವರ್ಷ.

ತಮ್ಮ ಮದುವೆಯ ಬಗೆಗೆ ನಲವತ್ತು ವರ್ಷಗಳ ನಂತರ ಗಾಂಧೀಜಿ ಹೀಗೆ ಬರೆಯುತ್ತಾರೆ : ''ಮದುಮಕ್ಕಳಾಗಿದ್ದ ನಾವು ನಂತರ ವಿವಾಹಿತ ಮಕ್ಕಳಾಗಿದ್ದೆವು. ಅದರಂತೆಯೇ ನಡೆದುಕೊಳ್ಳುತ್ತಿದ್ದೆವು. ನಾನು ಅವಳ ಮೇಲೆ ಅಧಿಕಾರ ಚಲಾಯಿಸುವ ಗಂಡನ ಪಟ್ಟ ಗಿಟ್ಟಿಸಿಕೊಳ್ಳುವಲ್ಲಿ ತಡಮಾಡಲೇ ಇಲ್ಲ. ಜೊತೆಗೆ ವಯೋಮಾನ ಸಹಜ ಹೊಟ್ಟೆ ಕಿಚ್ಚಿದ್ದುದರಿಂದ ಅವಳಿಗೆ ಎಲ್ಲಿಗೆ ಹೋಗಲೂ ಅನುಮತಿ ಕೊಡುತ್ತಿರಲಿಲ್ಲ. ಹೀಗಾಗಿ ಹದಿಮೂರು ವರ್ಷದ ಹೆಂಡತಿ ಆಡಲು ಹೊರಗೆ ಹೋಗಬೇಕಾದರೆ ಹದಿಮೂರು ವರ್ಷದ ಮೋಹನದಾಸನನ್ನು ಕೇಳಬೇಕಿತ್ತು. ಹೆಚ್ಚಾಗಿ ಅವಳಿಗೆ ಸಿಗುತ್ತಿದ್ದುದು 'ನಕಾರ!' ನನ್ನ ನಿರ್ಬಂಧಗಳು ಒಂದು ರೀತಿಯಲ್ಲಿ 'ಸೆರೆಮನೆ' ವಾಸದಂತಾಗುತ್ತಿದ್ದುದರಿಂದ, ಹುಡುಗಿ ಕಸ್ತೂರಿ ಬಾ ನನ್ನ ಕಟ್ಟುಪಾಡಿಗೆ ಸೊಪ್ಪು ಹಾಕದೆ ಯಾವಾಗ ಬೇಕಿದ್ದರೂ, ಎಲ್ಲಿಗೆ ಬೇಕಾದರೂ ಹೋಗುತ್ತಿದ್ದಳು. ಚಿಕ್ಕ ಗಂಡನಿಗೆ ಇಂತಹ ವಿರೋಧ ಹೆಚ್ಚಾಗಿ ಇಬ್ಬರೂ ದಿನಗಟ್ಟಲೆ ಮಾತು ಬಿಡುತ್ತಿದ್ದೆವು. ರಾತ್ರಿ ಹೊತ್ತು ನನಗೆ ಕಳ್ಳರ, ದೆವ್ವದ ಹಾಗೂ ಹಾವುಗಳ ಭಯವಿದ್ದುದರಿಂದ ಬಾಗಿಲಿಂದ ಹೊರಗೆ ಹೋಗುತ್ತಿರಲಿಲ್ಲ. ಕೋಣೆಯಲ್ಲಿ ದೀಪವಿಲ್ಲದೆ ಮಲಗುತ್ತಿರಲಿಲ್ಲ. ಒಂದು ರೀತಿಯಲ್ಲಿ ಹೇಡಿಯಂತಿದ್ದ ನನಗೆ ಇದ್ಯಾವುದರ ಬಗೆಗೂ ಹೆದರಿಕೆಯಿಲ್ಲದ ಅವಳನ್ನು ಕಂಡರೆ, ನಾಚಿಕೆ, ಕೀಳರಿಮೆ ಉಂಟಾಗುತ್ತಿತ್ತು.'' ಹೀಗೆ ನೆನಪಿಸಿಕೊಳ್ಳುವ ಗಾಂಧೀಜಿ ಅಂದಿನ 'ಬಾಲ್ಯವಿವಾಹ'ವನ್ನು 'ಕ್ರೂರ ಪದ್ಧತಿ' ಎಂದು ಹೇಳುತ್ತಾ ''ದೇಶದ ಸಮಾಜ ಸುಧಾರಕರಿಗೆ ಒತ್ತಾಸೆಯಾಗಿ ನಿಂತ ಬ್ರಿಟಿಷ್ ಸರ್ಕಾರ ಕನಿಷ್ಠ ವಿವಾಹಾರ್ಹ ವಯಸ್ಸನ್ನು ಏರಿಸಿತು'' ಎನ್ನುತ್ತಾರೆ.

ಗಾಂಧೀಜಿಗೆ ವೈದ್ಯನಾಗಬೇಕೆಂಬ ಹಂಬಲ. ಶಾಕಾಹಾರಿ ಬನಿಯಾ ಜಾತಿಗೆ ಸೇರಿದ ಗಾಂಧೀಜಿಯವರ ಮನೆಯವರಲ್ಲಿ ಸತ್ತ ದೇಹಗಳನ್ನು ಕತ್ತರಿಸಲು ವಿರೋಧವಿತ್ತು. ಹೀಗಾಗಿ ಹಿರಿಯರ ಹಾದಿ ಹಿಡಿದು ವಕೀಲ ವೃತ್ತಿಗಾಗಿ ಓದು ಮುಂದುವರಿಸಿದರು. ಆದರೆ ಅವರಿಗೆ ಲಂಡನ್‌ನಲ್ಲಿ ಶಿಕ್ಷಣ ಪಡೆಯುವ ಮಹದಾಕಾಂಕ್ಷೆ! ಹೆಂಡತಿಯ ಒಡವೆಗಳನ್ನು ಒತ್ತೆಯಿಟ್ಟು ಎರಡು-ಮೂರು ಸಾವಿರ ಹೊಂದಿಸಿಕೊಂಡರು. ಇಂಗ್ಲೆಂಡಿಗೆ ತೆರಳುವ ಮುನ್ನ ಕಸ್ತೂರಿ ಬಾಗೆ ಹಿರಿಯ ಮಗ ಹೀರಾಲಾಲ್ ಹುಟ್ಟಿದನು. ಚಿಕ್ಕ ವಯಸ್ಸಿನ ಬಾಣಂತಿ ಕಸ್ತೂರಿ ಬಾಗೆ ಗಾಂಧೀಜಿಯ ಇಂಗ್ಲೆಂಡ್ ಪ್ರವಾಸ ದೀರ್ಘಕಾಲವಾದರೂ, ಆರೋಗ್ಯಕರ ಅಗಲಿಕೆಯಾಗಿತ್ತು.

೨೮ ವರ್ಷದ ಕಸ್ತೂರ್ಬಾ ಬಾಳನ್ನು ಮಕ್ಕಳಾದ ಹೀರಾಲಾಲ್, ಮಣಿಲಾಲ್‌ರೊಂದಿಗೆ ದಕ್ಷಿಣ ಆಫ್ರಿಕಾಕ್ಕೆ ಕರೆಸಿಕೊಂಡರು. ಉತ್ತಮ ವಕೀಲರಾಗಿದ್ದ ಗಾಂಧಿ ತಮ್ಮೊಳಗಿದ್ದ ವೈದ್ಯನಾಗಬೇಕೆಂಬ ಆಸೆಯನ್ನು ಬಿಟ್ಟುಕೊಟ್ಟಿರಲಿಲ್ಲ. ಹೀಗಾಗಿ ಪ್ರಕೃತಿ ಚಿಕಿತ್ಸೆ, ಆಯುರ್ವೇದ ಚಿಕಿತ್ಸೆಗಳ ಬಗೆಗೆ ಜ್ಞಾನ ಸಂಪಾದಿಸಿ ರೋಗಿಗಳ ಮೇಲೆ ಪ್ರಯೋಗಿಸುತ್ತಿದ್ದರು. ಎಷ್ಟೋ ಬಾರಿ ರಕ್ತಹೀನತೆ, ರಕ್ತಸ್ರಾವದಿಂದ ಬಳಲುತ್ತಿದ್ದ ಹೆಂಡತಿ, ಟೈಫಾಯ್ಡ್‌ಗೆ ಈಡಾಗಿದ್ದ ಮಗ ಇವರ ಪ್ರಯೋಗಕ್ಕೆ ಒಳಗಾಗಿದ್ದಾರೆ. ಶಿಶು ಜನನದ ಬಗೆಗೆ ಓದಿ ತಿಳಿದು, ನಾಲ್ಕನೇ ಮಗ ದೇವದಾಸ್‌ನ ಹೆರಿಗೆಯ 'ಸೂಲಗಿತ್ತಿ'ಯಾಗಿಬಿಟ್ಟರು. ಮೂರನೆ ಮಗ ರಾಮ್‌ದಾಸ್ ಹುಟ್ಟಿದಾಗ ಬಾಣಂತಿ-ಮಗುವಿನ ಶುಶ್ರೂಷೆ ತಾವೇ ಮಾಡುತ್ತಿದ್ದರು.

ಕಸ್ತೂರ್ಬಾಗೆ ಆಫ್ರಿಕಾದಲ್ಲಾಗಲೀ, ಸೇವಾಗ್ರಾಮದಲ್ಲಾಗಲೀ ಎಂದೂ ತಾನು, ತನ್ನ ಗಂಡ ತನ್ನ ಮಕ್ಕಳು ಎಂಬ 'ನನ್ನ ಸಂಸಾರ'ದಂತಹ ಬದುಕಿರಲಿಲ್ಲ. ಎಲ್ಲ ಕಡೆ ಬಂದು ಹೋಗುವ ಜನರ ಛತ್ರ. ಅಡುಗೆ ಮನೆ ನಿತ್ಯ ದಾಸೋಹ. ಜಾತಿ ವರ್ಗಗಳಿಂದ ಅತೀತವಾದ ಪರಿವಾರದೊಂದಿಗೆ ಬದುಕು. ಮಾನವ ಸಹಜವಾದ ವೈಯಕ್ತಿಕ ಬದುಕಿನ ಆಸೆ-ಆಕಾಂಕ್ಷೆಗೆ ಎಡೆಯೇ ಇಲ್ಲ. ಬಂಧುಗಳು, ಸ್ನೇಹಿತರು, ಸಮಾನ ಮನಸ್ಕರು, ಸಹೋದ್ಯೋಗಿಗಳು, ದೀನ ದಲಿತರು, ರೋಗಿಗಳು, ಕಾರ್ಮಿಕರು, ರಾಜಕೀಯ ವ್ಯಕ್ತಿಗಳು ಎಲ್ಲರೂ ಬಂದುಹೋಗುವ ಆ ಮನೆ ಒಂದು ರೀತಿ ಬಿಡುವಿಲ್ಲದ ರೈಲ್ವೆ ನಿಲ್ದಾಣದಂತೆ. ಆದರೆ ಎಲ್ಲರಿಗೂ ಊಟ ವಸತಿ ಒದಗಿಸುವ ಭರದಲ್ಲಿ ಹೈರಾಣಾಗುತ್ತಿದ್ದ ಕಸ್ತೂರ್ಬಾ ಅನೇಕ ವೇಳೆ ರಕ್ತಹೀನತೆ, ಬಲಹೀನತೆಯೊಂದಿಗೆ ಬಳಲಿದ್ದಾರೆ. ಅಡುಗೆ ಮನೆಯಲ್ಲಿ ನೆರವಾಗುತ್ತಿದ್ದ ಗಾಂಧೀಜಿ ಆರೋಗ್ಯ ಕಳೆದುಕೊಂಡ ಕಸ್ತೂರ್ಬಾರ ಶುಶ್ರೂಷೆ ಸಹ ಮಾಡುತ್ತಿದ್ದರು. ಆದರೆ ಈ ತೊಳಲಿಕೆ, ಬಳಲಿಕೆಗೆ ಕಾರಣವಾದ ಸಾರ್ವಜನಿಕ ಬದುಕನ್ನು ಬಿಟ್ಟುಕೊಡುವಲ್ಲಿ ಮಾತ್ರ ರಾಜಿಯಾಗುತ್ತಿರಲಿಲ್ಲ.

ಆಗಿಂದಾಗ್ಗೆ ಅನಿರೀಕ್ಷಿತವಾಗಿ ಗಾಂಧೀಜಿ ಕಾರ್ಯರೂಪಕ್ಕಿಳಿಸುತ್ತಿದ್ದ ಹೊಸ ಹೊಸ ಯೋಚನೆ-ಯೋಜನೆ, ದಿಢೀರನೆ ಮಾಡುತ್ತಿದ್ದ ಉಪವಾಸ ಸತ್ಯಾಗ್ರಹ, ಮನೆಯಲ್ಲಿ ಟಾಸ್ಕ್ ಮಾಸ್ಟರ್‌ನಂತೆ ಹೇರುತ್ತಿದ್ದ ರೀತಿ-ರಿವಾಜುಗಳಿಗೆ ತನ್ನನ್ನು ಅಳವಡಿಸಿಕೊಳ್ಳಲು ಕಸ್ತೂರ್ಬಾ ಹೆಣಗುತ್ತಿದ್ದರು, ಆದರೆ ಗೊಣಗುವಂತಿರಲಿಲ್ಲ, ಅದರಲ್ಲೂ ಆಫ್ರಿಕಾದಲ್ಲಿ ಇದ್ದಷ್ಟೂ ದಿನ ಅವರಿಗೆ ವಿಧೇಯತೆಯೆಂಬುದು ಅವಶ್ಯಕತೆ. ನಂತರ ತನ್ನದೇ ದೇಶವಾದ ಭಾರತದಲ್ಲಿ ಗಾಂಧೀಜಿಗೆ ಸಿಕ್ಕ ಮನ್ನಣೆ-ಪುರಸ್ಕಾರದಿಂದಾಗಿ ಎಲ್ಲ ಕಷ್ಟ ಸಹಿಷ್ಣುತೆಗೆ ಸಹನೆ-ಸಹಕಾರವೆಂಬ ಅರ್ಥ ಸಿಗುತ್ತಿತ್ತು.

ದಕ್ಷಿಣ ಆಫ್ರಿಕಾದಲ್ಲೊಮ್ಮೆ ಸರ್ಕಾರ ಕ್ರೈಸ್ತ ವಿಧಿ ವಿಧಾನಗಳಲ್ಲಿ ಮದುವೆಯಾಗಿಲ್ಲದವರ ವೈವಾಹಿಕ ಸಂಬಂಧವನ್ನು 'ನ್ಯಾಯಬಾಹಿರ'ವೆಂದು ಕಾಯ್ದೆ ಜಾರಿಗೊಳಿಸಿತು. ಇದು ಭಾರತೀಯರ ಹಾಗೂ ಮುಸ್ಲಿಮರ ಆತ್ಮಗೌರವದ ಪ್ರಶ್ನೆಯಾಯಿತು. ಇದರ ವಿರುದ್ಧ ಹೋರಾಟ ನಡೆಸಲು ಯೋಚಿಸಿದ ಗಾಂಧೀಜಿ, ಮಹಿಳೆಯರನ್ನೇ ಹೋರಾಟದ ಮುಂಚೂಣಿಗೆ ತರುವ ಉಪಾಯ ಹೂಡಿದರು. ಆದರೆ ಜೈಲುವಾಸದ ಕಠಿಣ ಶಿಕ್ಷೆ ಸಹಿಸಲಾರದೆ ಮಹಿಳೆಯರು ಸರ್ಕಾರದ ಕ್ಷಮೆ ಯಾಚಿಸಿಬಿಟ್ಟರೆ ಕಾಯ್ದೆ ಬಲಗೊಳ್ಳುವುದೆಂದು ತಿಳಿದು, ಕಸ್ತೂರ್ಬಾರನ್ನು ಮುಂದೆ ಬಿಡಲು ನಿರ್ಧರಿಸಿದರು. ''ನೋಡು, ಸರ್ಕಾರದ ಈ ಕಾಯ್ದೆಯಿಂದಾಗಿ ಕಟ್ಟಿಕೊಂಡವರೆಲ್ಲ ಇಟ್ಟುಕೊಂಡವರೆಂದು ನಿರ್ಧರಿಸಿದಂತಾಯ್ತು. ಇದು ನಿಮ್ಮ ಸ್ವಾಭಿಮಾನದ ಪ್ರಶ್ನೆ. ನೀವುಗಳು ಇದನ್ನು ವಿರೋಧಿಸಬೇಕು. ಜೈಲುವಾಸ ಅನುಭವಿಸಬೇಕಾಗಿ ಬಂದರೆ ಹಿಂದೂ ಧರ್ಮದವರಾಗಿ ಸೀತೆ, ಚಂದ್ರಮತಿ, ದಮಯಂತಿಯಂತೆ ಕಷ್ಟ ಎದುರಿಸಬೇಕು'' ಎಂದು ಕಸ್ತೂರ್ಬಾರವರೇ ಸ್ವಯಂ ಇಚ್ಛೆಯಿಂದ ಜೈಲುವಾಸ ಅನುಭವಿಸುವಂತೆ ಮಾಡಿದರು. ಸಂಪೂರ್ಣ ಹದಗೆಟ್ಟ ಆರೋಗ್ಯದೊಂದಿಗೆ ಹೊರಬಂದ ಹೆಂಡತಿಗೆ ತಲೆ ಬಾಚುವುದನ್ನು ಮೊದಲ್ಗೊಂಡು ಎಲ್ಲ ರೀತಿಯ ಶುಶ್ರೂಷೆ ಮಾಡಿ ಜೀವ ಉಳಿಸಿಕೊಂಡರು.

ಒಮ್ಮೆ ಕಸ್ತೂರ್ಬಾರ ಹದಗೆಟ್ಟ ಆರೋಗ್ಯದಿಂದಾಗಿ, ವೈದ್ಯರು ಉಪ್ಪು, ಬೇಳೆ ಕಾಳುಗಳನ್ನು ವರ್ಜಿಸುವಂತೆ ಸಲಹೆಯಿತ್ತರು. ಇದನ್ನು ಪಾಲಿಸಲು ಗಾಂಧೀಜಿ ಹೆಂಡತಿಗೆ ಒತ್ತಾಯಿಸಿದಾಗ, ಕಸ್ತೂರ್ಬಾ ''ಹೇಳುವುದು ಸುಲಭ. ನೀವು ಬಿಟ್ಟು ನೋಡಿ. ಅದು ನಿಮಗಾಗದ ಕೆಲಸ'' ಎಂದರು. ಗಾಂಧೀಜಿ ''ನೀನು ತಪ್ಪು ತಿಳಿದಿದ್ದೀಯ. ಆರೋಗ್ಯ ದೃಷ್ಟಿಯಲ್ಲಿ ಬಿಡಬೇಕಾದರೆ ನಾನು ಖಂಡಿತ ಬಿಡುತ್ತೇನೆ. ಆದರೂ ಇಂದಿನಿಂದ ಒಂದು ವರ್ಷಕಾಲ ನಾನದನ್ನು ತಿನ್ನುವುದಿಲ್ಲ'' ಎಂದುಬಿಟ್ಟರು. ಇದರಿಂದಾಗಿ ಪರಿತಪಿಸಿದ ಕಸ್ತೂರ್ಬಾ, ಎಷ್ಟು ಬೇಡಿಕೊಂಡರೂ ಗಾಂಧೀಜಿ ತಮ್ಮ ನಿರ್ಧಾರ ಸಡಿಲಿಸಲಿಲ್ಲ. ಅವರ ಇಂತಹ ಹಠಮಾರಿತನ ಅನೇಕ ಬಾರಿ ಕಸ್ತೂರ್ಬಾರಿಗೆ ಕಣ್ಣೀರು ತರಿಸಿದ್ದುಂಟು.

ಕೊನೆಗೆ ದಕ್ಷಿಣ ಆಫ್ರಿಕಾ ಬಿಟ್ಟು ಬರುವಾಗ ಅಲ್ಲಿನ ಭಾರತೀಯ ಸಮುದಾಯ ಕಸ್ತೂರ್ಬಾಗೆ ಪ್ರೀತಿಯ ಕಾಣಿಕೆಯಾಗಿ ಬೆಲೆಯುಳ್ಳ ಚಿನ್ನದ ಒಡವೆ ಕೊಟ್ಟಿದ್ದರು. ಗಾಂಧೀಜಿ ಅವನ್ನು ಹಿಂದಿರುಗಿಸಲು ಒತ್ತಾಯಿಸಿದರು. ''ನಿನಗಿದನ್ನು ಕೊಟ್ಟಿರುವುದು ನನ್ನ ಸೇವೆಯಿಂದಾಗಿ. ಇದರ ಮೇಲೆ ನಿನಗೆ ಯಾವುದೇ ಹಕ್ಕಿಲ್ಲ'' ಎಂದರು ಗಾಂಧೀಜಿ. ''ನಿಮ್ಮ ಸೇವೆಯ ಹಿಂದೆ ನನ್ನ ಮೈಮುರಿವ ಶ್ರಮವಿದೆ'' ಎಂದು ಪ್ರತಿಪಾದಿಸಿದ ಕಸ್ತೂರ್ಬಾಗೆ ''ಸಮಾಜ ಸೇವಕನಾದವನು ಯಾವುದೇ ಬೆಲೆಯುಳ್ಳ ವಸ್ತುಗಳನ್ನು ಕಾಣಿಕೆಯಾಗಿ ಸ್ವೀಕರಿಸಬಾರದು'' ಎಂದು ಹೇಳಿ ಬಾಯಿಮುಚ್ಚಿಸಿದ್ದರು.

ಅಂದು ತನ್ನ ಒದಿಗೆ ತರುಣಿ ಕಸ್ತೂರ್ಬಾರ ಒಡವೆಗಳನ್ನು ಒತ್ತೆಯಿಟ್ಟ ಗಾಂಧೀಜಿ, ಇಂದು ಬೇರೆಯವರು ಕೊಟ್ಟ ಒಡವೆಗಳನ್ನು ಸಹ ಇಟ್ಟುಕೊಳ್ಳಲು ಬಿಡದೆ ಅಡ್ಡ ಬಂದಿದ್ದರು!

ನಂತರ ಭಾರತಕ್ಕೆ ಬಂದಿಳಿದ ಗಾಂಧೀಜಿ ರಾಜ್‌ಕೋಟ್‌ನಲ್ಲಿದ್ದ ತಮ್ಮ ಮನೆ ಮಾರಿ, ಸೇವಾಗ್ರಾಮದಲ್ಲಿ ಆಶ್ರಮವಾಸಿಗಳಾಗಿದ್ದರು. ಅಲ್ಲಿ ಊಟ, ತಿಂಡಿ, ಕಾಫಿ, ಬಟ್ಟೆ, ಸೋಪು, ಜಾಗ ಎಲ್ಲವೂ ಪಡಿತರ. ಕಸ್ತೂರ್ಬಾ ಮೊದಲ್ಗೊಂಡು ಎಲ್ಲರೂ ತಮ್ಮ ಪಾಲಿಗಾಗಿ ಅರ್ಜಿ ಗುಜರಾಯಿಸಿ ಗಾಂಧೀಜಿಯಿಂದ ಮಂಜೂರು ಮಾಡಿಸಿಕೊಳ್ಳಬೇಕಿತ್ತು. ನಿರ್ದೇಶಿತ ದಿನಚರಿ ಕರಾರುವಾಕ್ಕಾಗಿ ನಡೆಯಬೇಕು. ಒಮ್ಮೆ ಊರಿಗೆ ಹೊರಟ ಮಗನಿಗೆ ತಿಂಡಿ ತಯಾರಿಸಿಕೊಟ್ಟ ಕಸ್ತೂರ್ಬಾ, ಗಾಂಧೀಜಿಗೆ ಕಾಲೊತ್ತಲು ವಿಳಂಬ ಮಾಡಿದರು. ಮತ್ತೊಮ್ಮೆ ಮೊಮ್ಮಗಳಿಗೆ ನೇಯ್ದ ಎರಡು ಖಾದಿ ಸೀರೆಗಳನ್ನು ಆಶ್ರಮಕ್ಕೆ ಬಂದಾಗ ಇರಲೆಂದು ತೆಗೆದಿರಿಸಿದ್ದರು. ಎರಡರ ಬಗೆಗೂ ಪ್ರತಿಕ್ರಿಯಿಸಿದ ಬಾಪೂ ''ಇಲ್ಲಿ ನಿನ್ನ ಮಕ್ಕಳು, ನಿನ್ನವರು, ಬೇರೆಯವರು ಎಂಬ ಭೇದವಿರಕೂಡದು. ಇಡೀ ದೇಶ ನಮ್ಮ ಕುಟುಂಬ. ಇಡೀ ಜನ ನಮ್ಮ ಮಕ್ಕಳು. ನಾವು ರಾಜ್‌ಕೋಟ್‌ನಿಂದ ಇಲ್ಲಿಗೆ ಬಂದಿರುವುದು ದೇಶ ಸೇವೆಗೆ. ಈ ಆಶ್ರಮ ಸತ್ಯಾಗ್ರಹಿಗಳಿಗೆ ಸಂಬಂಧಿಸಿದ್ದು. ನಮಗಿಲ್ಲಿ ಯಾವುದೇ ಹಕ್ಕಿಲ್ಲ. ಇಡೀ ವಿಶ್ವ ನಮ್ಮನ್ನು ಗಮನಿಸುತ್ತಿದೆ. ಅಲ್ಲದೆ ನಮ್ಮಿಂದ ಮಹತ್ತರವಾದದ್ದನ್ನು ನಿರೀಕ್ಷಿಸುತ್ತಿದೆ'' ಎಂದು ಎಚ್ಚರಿಸಿದರು.

ಕಸ್ತೂರ್ಬಾಗೆ ನಾಲ್ಕು ಮಕ್ಕಳನ್ನು ಕೊಟ್ಟ ಗಾಂಧಿ ರಾಜಕೋಟ್‌ನಿಂದ ಆಶ್ರಮ ಸೇರುವಾಗ ಕಸ್ತೂರ್ಬಾರ ಅಭಿಪ್ರಾಯ, ಒಪ್ಪಿಗೆ ಪಡೆದಿದ್ದರೆ? ಆಯ್ಕೆಯ ಬದಿ ಯಾವಾಗಲೂ ಗಾಂಧಿಗೆ ಬಿಟ್ಟಿದ್ದು. ನಿಸರ್ಗದತ್ತ ತಾಯಿಯ ಹಂಬಲಕ್ಕೆ ಅಲ್ಲಿಂದೂ ಬೆಂಬಲವಿರಲಿಲ್ಲವೆಂದು ನಮ್ಮ ಮನಸ್ಸುಗಳು ಪ್ರಶ್ನಿಸುವುದಿಲ್ಲವೇ? ಇಂದಿಗೆ ಚಲಾವಣೆಯಲ್ಲಿಲ್ಲದ ಅಂದಿಗೆ ಕಾಲೋಚಿತವೆಂದು ಪರಿಗಣಿಸಿದ ಹೆಣ್ಣಿಗೆ ವಹಿಸಿದ್ದ ಆರು ಗುಣಗಳಲ್ಲಿ ಕಸ್ತೂರ್ಬಾ 'ಕಾರ್ಯೇಷು ದಾಸೀ, ಕ್ಷಮಯಾ ಧರಿತ್ರೀ, ಭೋಜ್ಯೇಷು ಮಾತಾ' ಅಂತೂ ಆಗಿದ್ದರು.

ಆಶ್ರಮದ ಖರ್ಚು ಉಳಿಸಲು, ಬಂದವರೆಲ್ಲ ತಮ್ಮ ಖರ್ಚನ್ನು ತಾವೇ ಭರಿಸುವಂತೆ ನಿಯಮ ವಿಧಿಸಲಾಯಿತು. ತಮ್ಮ ಸ್ವಂತ ಮಕ್ಕಳು ಬಂದಾಗಲೂ ಸಹ ಕಸ್ತೂರ್ಬಾ ನಿಯೋಜಿತ ಮ್ಯಾನೇಜರ ಹತ್ತಿರ ಖರ್ಚು ವೆಚ್ಚದ ಲೆಕ್ಕ ಒಪ್ಪಿಸಿ ಅವರಿಂದ ಹಣ ಪಡೆಯಲು ಹೇಳಬೇಕಿತ್ತು.

ಆಶ್ರಮದಲ್ಲಿ ಗಾಂಧೀಜಿಯವರೊಂದಿಗೆ ಚರ್ಚಿಸಲು ಬರುತ್ತಿದ್ದ ರಾಜೇಂದ್ರ ಪ್ರಸಾದ್, ಪಟೇಲ್, ನೆಹರೂ, ಮೌಲಾನಾ ಎಲ್ಲರೂ ಕಸ್ತೂರ್ಬಾರವರ ಆರೋಗ್ಯ ವಿಚಾರಿಸಿ, ಮಾತನಾಡಿಸಿ ಹೋಗುತ್ತಿದ್ದರು. ಹಿಂದಿರುಗುವಾಗ ಅವರುಗಳು ಮಾತನಾಡಿಸುತ್ತಿದ್ದ ಭಂಗಿಯಲ್ಲೇ ಗಾಂಧೀಜಿಯವರಿಂದ ಅವರುಗಳಿಗೆ ಖುಷಿ ಸಿಕ್ಕಿದೆಯೋ, ಬಿಸಿ ಮುಟ್ಟಿದೆಯೋ ಎಂಬುದು ಕಸ್ತೂರ್ಬಾರಿಗೆ ತಿಳಿದುಬಿಡುತ್ತಿತ್ತು. ಅನಿವಾರ್ಯವಾಗಿ ಕೆಲವರೊಡನೆ ಇಂಗ್ಲಿಷ್ ಮಾತನಾಡಬೇಕಾಗಿ ಬಂದರೆ, ಅವರ ಹರಕು-ಮುರುಕು ಇಂಗ್ಲಿಷ್ ಎಲ್ಲರನ್ನೂ ನಗೆಗಡಲಿನಲ್ಲಿ ಮುಳುಗಿಸುತ್ತಿತ್ತು. ಅವರ ಅತ್ಯಂತ ಪ್ರಿಯವಾದ ಆಟ ಕೇರಂ.

ಒಮ್ಮೆ ಆಶ್ರಮಕ್ಕೆ ಭೇಟಿಯಿತ್ತ ಜಿ. ಡಿ. ಬಿರ್ಲಾ ಅಲ್ಲಿನ ನರಹರಿ ಭಾಯಿಯೊಂದಿಗೆ ''ಇಲ್ಲಿ ಎಲ್ಲರೂ ತಲೆ ಕೆಟ್ಟವರೇ ಇದ್ದಾರೆ'' ಎಂದರಂತೆ. ''ಬಾಪೂ ಸಹ ?!'' ಎಂದರಂತೆ ನರಹರಿ ಭಾಯಿ. ''ತಲೆಕೆಟ್ಟವರ ಪಟ್ಟಿಯಲ್ಲಿ ಗಾಂಧಿಗೆ ಅಗ್ರಸ್ಥಾನ'' ಎಂದು ನಕ್ಕ ಬಿರ್ಲಾ ''ಕಸ್ತೂರ್ಬಾ ಹಾಗೂ ದುರ್ಗಾ ಬೆಹನ್ ಬಿಟ್ಟರೆ ನನಗಿನ್ಯಾರೂ ಒಳ್ಳೆಯ ಮತ್ತು ಬುದ್ಧಿವಂತ ಜನರಂತೆ ಕಾಣುವುದಿಲ್ಲ'' ಎಂದರಂತೆ.

ಒಂದು ವಾರ ಗಾಂಧೀಜಿಯೊಂದಿಗಿದ್ದ ಪಾಶ್ಚಾತ್ಯ ಪತ್ರಕರ್ತ ಲೂಯಿ ಫಿಷರ್ ಹೀಗೆ ದಾಖಲಿಸುತ್ತಾನೆ: ''ನಾನು ಅವರಿಬ್ಬರೂ ಮಾತನಾಡಿದ್ದನ್ನೇ ನೋಡಲಿಲ್ಲ. ಊಟ ಹಾಗೂ ಪ್ರಾರ್ಥನಾ ಸಮಯದಲ್ಲಿ ಕಸ್ತೂರ್ಬಾ ಮೌನವಾಗಿ ಗಾಂಧೀಜಿಯ ಎಡಭುಜದ ಹಿಂದೆ ಕುಳಿತು ಗಾಳಿ ಬೀಸುತ್ತಿದ್ದರು. ಅವರು ಸದಾ ಗಾಂಧೀಜಿಯೆಡೆಗೆ ನೋಡುತ್ತಿದ್ದರು.

ಆದರೆ, ಗಾಂಧೀಜಿ ಅವರೆಡೆಗೆ ನೋಡುತ್ತಿದ್ದುದು ವಿರಳ. ಆದರೂ ಕಸ್ತೂರಿ ಬಾ ತಮ್ಮ ಹತ್ತಿರ ಇರಬೇಕೆಂಬುದಿತ್ತು. ಪರಸ್ಪರ ಅರ್ಥಮಾಡಿಕೊಂಡಿದ್ದ ಅವರಿಬ್ಬರಲ್ಲಿ ಅತ್ಯುತ್ತಮ ಹೊಂದಾಣಿಕೆಯಿತ್ತು.''

ಗಾಂಧೀಜಿ-ಕಸ್ತೂರಿ ಬಾರ ದಾಂಪತ್ಯದ ಬದುಕಿನಲ್ಲಿ ಹಿರಿಯ ಮಗ ಹೀರಾಲಾಲ್ ತಂದ ಮಾನಸಿಕ ಕ್ಲೇಶ ಅಸಾಧಾರಣ. ಇಡೀ ದೇಶ ಗಾಂಧಿಯನ್ನು ಆರಾಧಿಸುತ್ತಿದ್ದರೆ, ಹೀರಾಲಾಲ್ ತಂದೆಯನ್ನು ಪರಮ ದ್ವೇಷಿಯಂತೆ ವಿರೋಧಿಸುತ್ತಿದ್ದ! ಸದಾ ಪಾನಮತ್ತನಾಗಿ ರಸ್ತೆಯ ಬದಿ ಬಿದ್ದಿರುತ್ತಿದ್ದ. ಕ್ಷಯರೋಗ ಪೀಡಿತನಾಗಿದ್ದ. ಹಣಕಾಸಿನ ವ್ಯವಹಾರದಲ್ಲಿ ವಂಚಕನಾಗಿದ್ದ. ತಂದೆಗೆ ನೋವಾಗಲೆಂದೇ ಇಸ್ಲಾಂಗೆ ಮತಾಂತರ ಗೊಂಡಿದ್ದ. ಇಂತಹ ಅವಮಾನಕರ ಹಾಗೂ ಆತಂಕಮಯ ನಡವಳಿಕೆಗಳು ಕಸ್ತೂರಿ ಬಾಗೆ ನುಂಗಲಾರದ ನೋವನ್ನು ತಂದಿತ್ತು. ತನ್ನ ಗಂಡನ ಗೌರವ, ಘನತೆ, ವಿಚಾರಗಳನ್ನು ಮುಂದಿಟ್ಟುಕೊಂಡು ಮಗನಿಗೆ ತಿಳಿಹೇಳುವ ದೀರ್ಘ ಕಾಗದ ಬರೆದಿದ್ದ ಕಸ್ತೂರಿ ಬಾರ ಮಾನಸಿಕ ಸ್ಥಿತಿಗೆ ಯಾವುದೇ ಮಾತೃ ಹೃದಯ ಮಿಡಿಯದಿರಲು ಸಾಧ್ಯವಿಲ್ಲ.

ಕೊನೆಗೆ ಅವರ ಅನಾರೋಗ್ಯ ತೀವ್ರವಾಗಿ ಹಾಸಿಗೆ ಹಿಡಿದು ಸಾವಿಗೆ ಮುಖ ಮಾಡಿ ಕುಳಿತಾಗ ಮಗ ಹೀರಾಲಾಲ್‌ನನ್ನು ಕಾಣಲು ಹಾತೊರೆದ ಕಸ್ತೂರಿ ಬಾರ ಕೊನೆಯ ದಿನಗಳೂ ಗಾಂಧೀಜಿಗೆ ಅಳಿಸಲಾಗದ ನೋವನ್ನು ತಂದಿತ್ತು. ಗಾಂಧೀಜಿಯ ಮಡಿಲಿನಲ್ಲೇ ತಾನು ಕೊನೆ ಉಸಿರೆಳೆಯಬೇಕೆಂಬ ಆಸೆ ಮಾತ್ರ ಕಸ್ತೂರಿ ಬಾಗೆ ಈಡೇರಿತು.

''ಇಡೀ ವಿಶ್ವದಲ್ಲಿ ನನ್ನ ಗಂಡನಂತಹವನು ಇನ್ನೊಬ್ಬನಿಲ್ಲ. ನನಗೇನಾದರೂ ಅತ್ಯುನ್ನತ ಮಾನ್ಯತೆ, ಮನ್ನಣೆ ಸಿಕ್ಕಿದ್ದರೆ ಅದು ನನ್ನ ಗಂಡನಿಂದಾಗಿಯೇ'' ಎಂದು ಹೇಳಿದ ಕಸ್ತೂರಿ ಬಾಗೆ, ಗಾಂಧೀ 'ತನ್ನ ಆಸ್ತಿ ಎಂಬುದಕ್ಕಿಂತ ಮನುಕುಲದ ಆಸ್ತಿ' ಎಂಬ ಮನವರಿಕೆಯಾಗಿತ್ತು.

ಮೈಸೂರಿನ ಅರಮನೆಯಲ್ಲಿ ಜಯಪುರದ ರಾಜ ಪುರೋಹಿತರೊಂದಿಗೆ ಸಮಾಲೋಚಿಸಿ ನಡೆದ ಮದುವೆ ಊರ್ಜಿತವಾಗಲಿಲ್ಲ, ಸದ್ಗತಿ ಕಾಣಲಿಲ್ಲ. ಲಂಡನ್ನಿನ ಅರಮನೆಯಲ್ಲಿ ಇಡೀ ವಿಶ್ವ ಬೆರಗಿನಿಂದ ನೋಡಿ ಸಂಭ್ರಮಿಸಿದ ಚಾರ್ಲ್ಸ್-ಡಯಾನಾ ಮದುವೆಯ ದುರ್ಗತಿಯನ್ನು ಅದೇ ಪ್ರೇಕ್ಷಕ ಸಮುದಾಯ ಕಂಡು ಧೃತಿಗೆಟ್ಟಿತು. ಆದರೆ ಅರಮನೆಗಳಲ್ಲಿ ಅಡಗಿದ್ದ ಆ ಅಭದ್ರತೆ, ಸದಾ ಸೆರೆಮನೆಯಲ್ಲೇ ಕಳೆದ ಗಾಂಧೀಜಿ -ಕಸ್ತೂರಿ ಬಾ ದಾಂಪತ್ಯಕ್ಕೆ ಮಾತ್ರ ಕಾಡದೆ ೬೨ ವರ್ಷಗಳ ಕಾಲ ಸುಭದ್ರವಾಗಿತ್ತು.

ರಾಷ್ಟ್ರಪಿತನಿಗೆ ಖಂಡಿತ ನಾವು 'ಆಭಾರಿ' ಎನ್ನುವ ಇಂದಿನ ಮಹಿಳೆಯರು, ಕಸ್ತೂರಿ ಬಾರ ಬದುಕು-ಬವಣೆ ಗಮನಿಸಿ ಪತಿಯಾಗಿ ಗಾಂಧಿ 'ಬಹುಭಾರ' ಎಂದೇವು!

**ರೇಣುಕಾ ಮಂಜುನಾಥ್**
೧೦೧೪, ೧೦ನೇ ಮೈನ್, ೧ನೇ ಬ್ಲಾಕ್, ಬಸವೇಶ್ವರನಗರ ೩ನೇ ಹಂತ, ಬೆಂಗಳೂರು - ೫೬೦ ೦೭೯

## ಅನಾಮಿಕನೊಬ್ಬನ ಅಳಲು

ನೀನಾದರೂ; ಹೇಳೇ ಸಖಿ, ಜೀವನ್ಮುಖಿ
ನನ್ನನ್ನು ಕಂಡು
ಈ ಜನ ಹೀಗೇಕೆ ವರ್ತಿಸುವರು
ಹಾವು ತುಳಿದಂತೆ ಬೆಚ್ಚುವರು
ಅರ್ಧಾಂಗ ವಾಯು ಬಡಿದಂತೆ
ಮುಖ ಸೊಟ್ಟಗೆ ಮಾಡುವರು.
ಬೆದರಿದ ಹರಿಣಿಯಾಗಿ –
ಬಾಗಿಲಲಿ ನಿಂತವರು, ಬಾಗಿಲನು ಹಾಕಿಕೊಳ್ಳುವರು.

ಎದುರಾದವರು –
ಪ್ರಾಣಿಗಳ ಕಂಡಂತೆ ಕಾಣುವರು
'ನನ್ನ ಮುಖ ನೋಡದಿರು'
'ನಿನ್ನ ಮುಖ ತೋರದಿರು' – ಎನ್ನುವರು.

ಕಂಬನಿ ತುಂಬಿದ ಕಂಗಳಲಿ
ಯೋಚಿಸುತ್ತ ನಡೆಯುತ್ತೇನೆ
ಶರಣರು, ಸಂತರು, ದಾಸರು ನಡೆದಾಡಿದ
ಇದೇ ನಾಡಿನೊಳಗೆ
ಎಲ್ಲರೂ ನಡೆದಾಡುವ, ಇದೇ ನೆಲದ
ಮೇಲೆ.

ನೆಲ ಕೇಳುವುದಿಲ್ಲ
ನನ್ನ ಮೇಲೇಕೆ ಕಾಲೂರಿ ನಡೆಯುತ್ತಿ ಎಂದು
ಹಗಲು ಬೆಳಗುವ ಸೂರ್ಯ ಅನ್ನುವುದೇ
ಇಲ್ಲ
ನನ್ನ ಬೆಳಕಿನಲ್ಲೇಕೆ ತಿರುಗುವಿ ನೀನು
ಇರುಳಿನಲ್ಲಿಯ ಚಂದ್ರ ಬಿಚ್ಚುವುದಿಲ್ಲ ತುಟಿ
ನನ್ನನ್ನೇಕೆ ನೋಡಿ,
ಸಂತಸದಲಿ ನಕ್ಕು ನಲಿಯುವಿ ನೀನು.

ಅನ್ನಲೇ ಇಲ್ಲ ಯಾವೊತ್ತು
ಬೀಸುವ ಗಾಳಿ, ತೇಲುವ ಮೋಡ
ಹರಿಯುವ ನದಿ, ಜಿನಗುವ ಝರಿ
ಗಿಡ, ಮರ, ಬಳ್ಳಿ, ಹೂ
ನಮ್ಮನ್ನೇಕೆ ಮುಟ್ಟುತ್ತಿ ನೀನು
ನಮ್ಮ ನೆರಳಿನಲ್ಲಿರುವ ಹಾರುವ ಹಕ್ಕಿ
ಜಿಗಿಯುವ ಜಿಂಕೆಗಳನ್ನೇಕೆ –
ನೋಡುತ್ತಿ ಎಂದು.
''ಮನೆಯೊಳಗೆ ಮನೆಯೊಡೆಯನಿದ್ದಾನೋ
ಇಲ್ಲವೋ''
ಬಾಗಿಲು, ಬಾಗಿಲು ಮುಂದೆ ಕಸ, ಕಡ್ಡಿ
ಬೆಳೆದಿದೆ

ಆದರೂ ಈ ಮನುಷ್ಯರು
ಹೀಗೇಕೆ ವರ್ತಿಸುವರು
ಮಣ್ಣು, ನೀರು, ಗಾಳಿ, ಬೆಳಕುಗಳ ಹೊತ್ತು
ಹುಟ್ಟಿಲ್ಲವೇ, ರಜದೊಳಗೆ ಇವರು.

ನೋಡಿಕೊಳ್ಳುವೆ ಒಮ್ಮೆ ನನ್ನನ್ನೇ ನಾನು
ಮಾಸಿದ ಬಟ್ಟೆ, ಕೆದರಿದ ಕೂದಲು
ಕುರುಚಲು ಗಡ್ಡ, ಮೀಸೆ
ನನ್ನ ಬಳಿ ಇಲ್ಲ, ಅಧಿಕಾರ, ಅಂತಸ್ತು, ಮಹಲು
ಕಾಂಟೆಸಾ ಕಾರು – ಬಾರು
ಅದಕ್ಕೆ ಇವರ ವರ್ತನೆ ಹೀಗೆ ಇರಬೇಕು
ನನ್ನನ್ನು ಕಂಡು ಓಡುತ್ತಿರಬೇಕು –
ನಾಗರ ಕಂಡಂತೆ ಇವರು.

ಇಲ್ಲದಿರೆ ಹೀಗೇಕೆ ವರ್ತಿಸುತ್ತಿದ್ದರು
ಹಣಿ ಹಣಿ ಜಜ್ಜಿಕೊಳ್ಳುತ್ತಿದ್ದರು.

ನೀನಾದರೂ; ಹೇಳೇ ಸಖಿ, ಮನುಷ್ಯಮುಖಿ
ಇದ್ದವರು, ಇರದವರು
ಸಾಯುವುದಿಲ್ಲವೇ ಇದೇ ನೆಲದ ಮೇಲೆ
ಕಣ್ಣಿದ್ದು, ಕಿವಿಯಿದ್ದು, ಶಬ್ದ, ನಿಶ್ಯಬ್ದಗಳಾಚೆ
ಹೀಗೇಕೆ ಕುಳಿತಿರುವಿ –
ನೀನೂ, ನಿಗೂಢ ಮೌನದೊಳಗೆ.

ನಿತ್ಯ ಕಟ್ಟೆಗೆ ಹುಳುವಾಗಿ ಕೊರೆಯುತ್ತಿವೆ
ಪ್ರಶ್ನೆ– ನೂರೆಂಟು.

ಮೇಲಿದ್ದರೂ ಕೆಳಗೆ ನೋಡುವ ಸೂರ್ಯ,
ಚಂದಿರರೇ
ಬೇರು ಮಣ್ಣೊಳಗಿದ್ದರೂ; ನೋಟ ಆಗಸಕೆ ಚೆಲ್ಲಿ
ಎಲ್ಲರಿಗೂ ಬೇಕಾಗಿ, ಎಲ್ಲರನೂ ಪ್ರೀತಿಸುವ
ಗಿಡ, ಮರ, ಬಳ್ಳಿ, ಹೂಗಳೇ
ಹೇಳಬೇಕೀಗ – ನೀವೇ ಉತ್ತರ
ಈಗ, ನೀವೇ ನನಗೆ ಬಲು ಹತ್ತಿರ

ಸತ್ಯಾನಂದ ಪಾತ್ರೋಟ
ಹೊಸ ಬಡಾವಣೆ, ಕಾರಿಹಳ್ಳ
ಬಾಗಲಕೋಟೆ - ೫೮೭ ೧೦೧

ಜಾತಿ ವ್ಯವಸ್ಥೆಯನ್ನು ಅರ್ಥೈಸುವ ಬಗೆಗೆ, ಇತಿಹಾಸದಲ್ಲಿ ಅದರ ಪಾತ್ರದ ಬಗೆಗೆ ಸಮಾಜಶಾಸ್ತ್ರಜ್ಞರು, ಇತಿಹಾಸಕಾರರಷ್ಟೇ ಅಲ್ಲ ಹಲವು ಸಾಮಾಜಿಕ ಕಳಕಳಿಯಿರುವವರೂ ಆಸಕ್ತಿ ತೋರಿದ್ದಾರೆ. ಈ ವ್ಯವಸ್ಥೆ ಆಧುನಿಕ ಮೌಲ್ಯಗಳಿಗೆ ತೀರ ವಿರುದ್ಧವಾದುದು ಎಂಬುದೇ ಬಹುಶಃ ಇದಕ್ಕೆ ಕಾರಣವಿರಬಹುದು. ಜಾತಿಪದ್ಧತಿಯನ್ನು ಅರ್ಥೈಸಲು ಪ್ರಯತ್ನಿಸುವವರ ಮುಖ್ಯ ಪ್ರಶ್ನೆ ಜಾತಿಪದ್ಧತಿ ಹಾಗೂ ವರ್ಣವ್ಯವಸ್ಥೆಯ ನಡುವೆ ಇರುವ ಸಂಬಂಧದ್ದಾಗಿರುತ್ತದೆ. ವರ್ಣವ್ಯವಸ್ಥೆಯ ಹುಟ್ಟಿನ ಬಗೆಗೆ ಪುರುಷಸೂಕ್ತ ವಿವರಣೆಯೊಂದನ್ನು ನೀಡುತ್ತದೆ. ಈ ಸೂಕ್ತ ಋಗ್ವೇದಕ್ಕೆ ನಂತರದಲ್ಲಿ ಸೇರಿಸಲಾಯಿತು ಎಂದು ಸ್ಪಷ್ಟವಾಗಿಯೇ ವಿದ್ವಾಂಸರು ಹೇಳಿದ್ದಾರೆ. ಇತಿಹಾಸಕಾರರಲ್ಲಿಯೂ ಈ ವ್ಯವಸ್ಥೆಯ ಹುಟ್ಟಿನ ಬಗೆಗೂ ಹಾಗೂ ಸಮಾಜದಲ್ಲಿ ಅದರ ಪಾತ್ರದ ಬಗೆಗೂ ಏಕಾಭಿಪ್ರಾಯವಿದ್ದಂತೆ ಕಾಣುವುದಿಲ್ಲ. ಉದಾಹರಣೆಗೆ, ಕೆಲ ಇತಿಹಾಸಕಾರರು, ಮನುಶಾಸ್ತ್ರದಲ್ಲಿನ ನಿಬಂಧನೆಗಳು ಎಷ್ಟರಮಟ್ಟಿಗೆ ವಾಸ್ತವವನ್ನು ಪ್ರತಿನಿಧಿಸುತ್ತವೆ ಎಂಬುದನ್ನು ಹೇಳುವುದು ಕಷ್ಟ; ಧಾರ್ಮಿಕ ಗ್ರಂಥಗಳು ಸೂಚಿಸುವ ಕಠಿಣತಮ ಸಾಮಾಜಿಕ ವ್ಯವಸ್ಥೆಗಿಂತ ಭಿನ್ನವಾಗಿ ಜಾತಿ ಎನ್ನುವುದು ಸ್ಥಿರವಾಗಿ ಇರಲೇ ಇಲ್ಲ; ಹೊಸ ಉಪಜಾತಿಗಳು ಸೃಷ್ಟಿಯಾಗುತ್ತಲೇ ಇದ್ದವು ಹಾಗೂ ಹಳೆಯವು ತಮ್ಮ ಅಸ್ತಿತ್ವವನ್ನು ಕಳೆದುಕೊಂಡು ಮೇಲಿನ ಅಥವಾ ಕೆಳಗಿನ ದರ್ಜೆಗೆ ಬರುತ್ತಿದ್ದವು ; ಎಂದು ಅಭಿಪ್ರಾಯಪಟ್ಟಿದ್ದಾರೆ. ಇನ್ನೂ ಕೆಲವರು, ಹಿಂದಿನ ಅವಧಿಯಲ್ಲಿ ರೂಪಿಸಲಾಗಿದ್ದ ನಾಲ್ಕು



# ರೋಮಿಲಾ ಥಾಪರ್ ಅವರ ವರ್ಣವ್ಯವಸ್ಥೆ ಹಾಗೂ ಸಾಮಾಜಿಕ ಚಲನೆ ಪ್ರಮೇಯ

ವರ್ಣಗಳ ಕರ್ತವ್ಯಗಳು ಮತ್ತು ಪರಸ್ಪರ ಸಂಬಂಧಗಳ ಕಟ್ಟುಪಾಡುಗಳನ್ನು ಬಹುತೇಕವಾಗಿ ಗುಪ್ತರ ಕಾಲದಲ್ಲಿಯೂ ಅನುಸರಿಸಿಕೊಂಡು ಬರಲಾಯಿತು, ಈ ವಿಚಾರದಲ್ಲಿ ಸಂದೇಹ ಬೇಡ ಎನ್ನುತ್ತಾರೆ. ಇತಿಹಾಸಕಾರರೂ ಜಾತಿಪದ್ಧತಿ ಹಾಗೂ ವರ್ಣವ್ಯವಸ್ಥೆಗಳೆರಡೂ ಒಂದೇ ಎಂದು ಬಳಸುತ್ತಾರೆನ್ನುವುದನ್ನು ಗಮನಿಸಬೇಕಾಗಿದೆ.

ವರ್ಣಸಿದ್ಧಾಂತದ ಪ್ರಕಾರ ವ್ಯಕ್ತಿಗಳಿಗಾಗಲೀ ಅಥವಾ ಜಾತಿ ಸಮುದಾಯಗಳಿಗಾಗಲಿ ಮೇಲ್ಚಲನೆಗೆ ಅವಕಾಶ ಇಲ್ಲವೆನ್ನುವಷ್ಟು ಕಡಿಮೆ. ಆದರೆ ವ್ಯಕ್ತಿಗಳಿಗೆ ಇಂತಹ ಮೇಲ್ಚಲನೆ ಸಾಧ್ಯವಿತ್ತೆಂದು ಹಲವು ವಿದ್ವಾಂಸರು ಭಾವಿಸುತ್ತಾರೆ. ಸಮುದಾಯಗಳಿಗೆ ಇಂತಹ ಚಲನೆಯ ಅವಕಾಶವಿತ್ತು ಎನ್ನುತ್ತಾರೆ ರೋಮಿಲಾ ಥಾಪರ್. ಈ ಬಗೆಗಿನ ತಮ್ಮ ಪ್ರಮೇಯದಲ್ಲಿ ಹಿಂದಿನ ಇತಿಹಾಸಕಾರರು ಪ್ರಶ್ನಿಸದೆ ಸ್ವೀಕರಿಸಿದ ಧರ್ಮಶಾಸ್ತ್ರಗಳು ವಾಸ್ತವ ಸಮಾಜದ ಕಾರ್ಯನಿರ್ವಹಣೆಯನ್ನು ವಿವರಿಸುತ್ತವೆ ಎನ್ನುವ ಗೃಹೀತವನ್ನು ಅವರು ತಿರಸ್ಕರಿಸುತ್ತಾರೆ. ಹಿಂದೆ ಇತಿಹಾಸಕಾರರು ಬಳಸಿದ ಗೃಹೀತಗಳ ಬಗೆಗೆ ಅವರು ಹೀಗೆ ಹೇಳುತ್ತಾರೆ: ಮೊದಲನೆಯದು ಭಾರತೀಯ ಸಮಾಜ ಅಧ್ಯಯನದ ಕಾಲದಾದ್ಯಂತ (ಥಾಪರ್‌ರ ಅಧ್ಯಯನದ ವ್ಯಾಪ್ತಿ ಪ್ರಾಚೀನ ಉತ್ತರ ಭಾರತ), ಕೆಲ ಸಣ್ಣಪುಟ್ಟ ಬದಲಾವಣೆಗಳು ಇದ್ದಾಗ್ಯೂ, ಸ್ಥಗಿತವಾಗಿತ್ತು ಎಂದು ಭಾವಿಸುವುದು; ಎರಡನೆಯದು, ಇದಕ್ಕೆ ಪೂರಕವಾಗಿ ಧರ್ಮಶಾಸ್ತ್ರಗಳ ಕಠಿಣತಮ ವರ್ಣ ನಿಯಮಗಳನ್ನು ಸಾಕ್ಷಿಯಾಗಿ ಬಳಸುವುದು; ಇನ್ನೊಂದು ಆನುಷಂಗಿಕ ಗೃಹೀತವೆಂದರೆ, ಧರ್ಮಶಾಸ್ತ್ರಗಳು ಸಮಾಜದ ಕಾರ್ಯನಿರ್ವಹಣೆಯನ್ನು ವಿವರಿಸುತ್ತವೆ ಎಂದು ಭಾವಿಸುವುದು. ಇಂದಿನ ಗೃಹೀತವೆಂದರೆ ಎಲ್ಲ ಸಮಾಜಗಳು ಬದಲಾಗುತ್ತವೆ ಎನ್ನುವ ಅವರು ಬದಲಾಗದ ಸ್ಥಗಿತ ಸಮಾಜದ ಪರಿಕಲ್ಪನೆಯನ್ನು ತಿರಸ್ಕರಿಸುತ್ತಾರೆ. ವರ್ಣವ್ಯವಸ್ಥೆ ಜಾತಿಪದ್ಧತಿಗೆ ಕೊಟ್ಟ ಸೈದ್ಧಾಂತಿಕ ಚೌಕಟ್ಟು ಎಂದು ಥಾಪರ್ ಭಾವಿಸುತ್ತಾರೆ.

ಮೇಲೆ ಸ್ಥಗಿತ ಸಮಾಜದ ಪರಿಕಲ್ಪನೆಯನ್ನು ಹೇಳಲಾಗಿದೆಯಲ್ಲವೆ ? ಈ ಸ್ಥಗಿತ, ಬದಲಾಗದ ಸಮಾಜದ ಪರಿಕಲ್ಪನೆ ಇತರ ಹಲವು ಇತಿಹಾಸದ ಪರಿಕಲ್ಪನೆಗಳಂತೆ ಯೂರೋಪ್ ಮೂಲದ್ದು. ಜೇಮ್ಸ್ ಮಿಲ್‌ನ ೧೮೧೭ರಲ್ಲಿ ಪ್ರಕಟವಾದ 'ಹಿಸ್ಟರಿ ಆಫ್ ಬ್ರಿಟಿಷ್ ಇಂಡಿಯಾ'ದಲ್ಲಿ ಇದು ಮೊದಲು ಪ್ರತಿಪಾದಿತವಾಯಿತು. ಮಿಲ್‌ನ ಪ್ರಕಾರ ಸಂಸ್ಕೃತಿಯ ಅಗತ್ಯ ಗುಣಗಳು ವೈಚಾರಿಕತೆ ಹಾಗೂ ವೈಯಕ್ತಿಕತೆಗಳು. ಸಂಸ್ಕೃತಿಯೊಂದು ಈ ಗುಣಗಳನ್ನು ಎಷ್ಟರಮಟ್ಟಿಗೆ ಪ್ರೋತ್ಸಾಹಿಸುತ್ತದೆ ಎನ್ನುವುದು ಅವನ ಮಾನದಂಡ. ಭಾರತೀಯ ನಾಗರಿಕತೆಯಲ್ಲಿ ಇವೆರಡನ್ನೂ ಕಾಣದ ಮಿಲ್ ವಿಮರ್ಶಾತ್ಮಕ ಧೋರಣೆ ಅನುಸರಿಸುತ್ತಾನೆ. ಭಾರತವನ್ನು ನಿರಂಕುಶ ಪ್ರಭುಗಳು ಆಳುವ, ಬದಲಾಗದ, ಸ್ಥಗಿತ ಸಮಾಜವೆಂದು ಮಿಲ್ ಭಾವಿಸುತ್ತಾನೆ. ಯೂರೋಪಿನ ಇತಿಹಾಸದ ಸಿದ್ಧಾಂತಗಳ ಮೇಲೆ ಪ್ರಭಾವ ಬೀರಿದ ಹೆಗೆಲ್‌ನ ಪ್ರಕಾರವಾದರೋ ನಿಜ ಇತಿಹಾಸ ದ್ವಂದ್ವಾತ್ಮಕ ಬದಲಾವಣೆ ಹಾಗೂ ಪ್ರಗತಿಯನ್ನು ಒಳಗೊಂಡದ್ದು. ಈ ಕಾರಣಕ್ಕೆ ಸ್ಥಗಿತ, ಬದಲಾಗದ ಭಾರತ, ಜಾಗತಿಕ ಇತಿಹಾಸದ ಪ್ರವಾಹದಿಂದ ಹೊರಗೆ ಉಳಿದುಬಿಡುತ್ತದೆ. ಹೀಗೆ ಬದಲಾಗದ, ಸ್ಥಗಿತ ಸಮಾಜ ಹಾಗೂ ಪೌರ್ವಾತ್ಯ ನಿರಂಕುಶ ಪ್ರಭುತ್ವಗಳ ಪರಿಕಲ್ಪನೆಯೊಂದು ಜನ್ಮ ತಳೆಯುತ್ತದೆ. ಸ್ಥಗಿತ ಸಮಾಜಕ್ಕೆ ಆಧಾರಸ್ತಂಭಗಳಾದ ಆರ್ಥಿಕವಾಗಿ ಬಹುತೇಕ ಸ್ವಯಂ ಸಂಪೂರ್ಣ ಹಳ್ಳಿಗಳು, ನಿರಂಕುಶ ಪ್ರಭುತ್ವ ಭಾರತೀಯ ಇತಿಹಾಸ ವಿಶ್ಲೇಷಣೆಯ ಭಾಗವಾಗುತ್ತವೆ. ಹಲವು ಯೂರೋಪಿಯನ್ ಇತಿಹಾಸಕಾರರು ಭಾರತೀಯ ಸಮಾಜವನ್ನು ವಿಶ್ಲೇಷಿಸುತ್ತಾ ಅದರ ಸ್ಥಗಿತ, ಬದಲಾಗದ ಗುಣದ ಬಗೆಗೆ ವರ್ಣನೆ ಮಾಡುವಾಗ್ಗೆ, ಧರ್ಮಶಾಸ್ತ್ರಗಳು ವಿವರಿಸುವ ಕಠಿಣತಮ ವರ್ಣವ್ಯವಸ್ಥೆಯನ್ನು ಜೊಟ್ಟು ಮಾಡಿ ತೋರಿಸುತ್ತಿದ್ದರು. ಈ ರೀತಿ ಸ್ಥಗಿತ ಸಮಾಜದ ಪರಿಕಲ್ಪನೆ ಇತಿಹಾಸ ಬರವಣಿಗೆಗಳ ಮೇಲೆ ೧೯ನೆಯ ಶತಮಾನದಾದ್ಯಂತ ಪ್ರಭಾವ ಬೀರುತ್ತದೆ. ಭಾರತದಂತಹ ಭಿನ್ನ ಮಾದರಿಯ ಸಮಾಜವನ್ನು ಅಂದಿನ ಯೂರೋಪಿನ ಸಾಮಾಜಿಕ ವಿಕಾಸ ಪರಿಕಲ್ಪನೆಗೆ ಹೊಂದಿಸಲು ಸಾಧ್ಯವಾಗುತ್ತಿರಲಿಲ್ಲ. ಅಂತಹ ಸಮಾಜವನ್ನು ಬದಲಾವಣೆಗಳಿಲ್ಲದ ಸ್ಥಗಿತ ಸಮಾಜ ಎಂದು ಊಹಿಸುವುದು ಹೊಂದಾಣಿಕೆಯ ಸುಲಭ ದಾರಿಗಳಲ್ಲೊಂದು. ಆ ಪೂರ್ವಸೂರಿಗಳಿಗೆ ಪೂರ್ತಿ ನ್ಯಾಯವನ್ನು ಒದಗಿಸಬೇಕಾದರೆ ಇತಿಹಾಸದ ಅಧ್ಯಯನದ ಬಗೆಗೆ ಆಧುನಿಕ ನಿಲುವುಗಳು ರೂಪತಳೆಯುತ್ತಿದ್ದ ಕಾಲವದು ಎಂಬ ವಾಸ್ತವವನ್ನು ಗುರುತಿಸಬೇಕು.

ಭಾರತೀಯ ಇತಿಹಾಸಕಾರರು ಇತಿಹಾಸವನ್ನು ಮರುವಿಶ್ಲೇಷಣೆಗೆ ಒಳಪಡಿಸುತ್ತಾರಾದರೂ, ಸ್ಥಗಿತ ಸಮಾಜದ ಪರಿಕಲ್ಪನೆಯೊಳಗಿನ ವರ್ಣಪರಿಕಲ್ಪನೆಯನ್ನು ಉಳಿಸಿಕೊಳ್ಳುತ್ತಾರೆ. ಇಂತಹ ಗೃಹೀತದಲ್ಲಿ, ಧರ್ಮಶಾಸ್ತ್ರಗಳಲ್ಲಿ ಉಲ್ಲೇಖಿಸಲಾದ ಪ್ರಮಾಣಗಳಿಗಿಂತ ಭಿನ್ನವಾದ ನಡೆವಳಿಕೆಗಳನ್ನು ವಿಶಿಷ್ಟ ಅಥವಾ ಅಪರೂಪದ ನಡೆವಳಿಕೆಗಳು ಎಂದು ಪರಿಗಣಿಸಲಾಗುತ್ತದೆ. ಧಾರ್ಮಿಕೇತರ ಮೂಲಗಳ ಈ ಭಿನ್ನ ನಡೆವಳಿಕೆಗಳ ಸಾಕ್ಷಿಗಳೇ ಪರ್ಯಾಯ ಪ್ರಮೇಯವೊಂದನ್ನು ರೂಪಿಸಲು ಅವಕಾಶ ಮಾಡಿಕೊಡುತ್ತವೆ. ಪ್ರಾರಂಭದಲ್ಲಿ ವರ್ಣ ವ್ಯವಸ್ಥೆಯು ಶ್ರಮವಿಭಜನೆಯಾಗಿರಬಹುದಾದರೂ ಶೀಘ್ರದಲ್ಲಿಯೇ ಅದು ಜಾತಿವ್ಯವಸ್ಥೆಯ ಸ್ವರೂಪ ಪಡೆಯಿತು ಎನ್ನುತ್ತಾರೆ ಥಾಪರ್ ಜಾತಿ ವ್ಯವಸ್ಥೆಯನ್ನು ಒಂದರ ಕೆಳಗೆ ಒಂದು ಶ್ರೇಣೀಕರಿಸಲ್ಪಟ್ಟ ವರ್ಣಗಳು ಎಂದು ಭಾವಿಸುವುದಕ್ಕಿಂತ ಪ್ರತಿ ವರ್ಣವೂ ತನ್ನದೇ ಧಾರ್ಮಿಕ, ಕರ್ತವ್ಯ ನಿರ್ವಹಣೆಯ ಆಧಾರದ ಮೇಲೆ ಶ್ರೇಣೀಕೃತ ಸ್ವತಂತ್ರ ಘಟಕ ಎಂದು ಭಾವಿಸುವುದು ಹೆಚ್ಚು ಸೂಕ್ತ, ಎಂದವರು ಸೂಚಿಸುತ್ತಾರೆ.

ಬಿ. ಎಂ. ಪ್ರದೀಪ್

ಧರ್ಮಶಾಸ್ತ್ರಗಳು ವಿವರಿಸುವ ಈ ವರ್ಣವ್ಯವಸ್ಥೆ ತೀರ ಕಠಿಣತಮ ಸಾಮಾಜಿಕ ವ್ಯವಸ್ಥೆಯನ್ನು ನಿರೂಪಿಸುತ್ತದೆ. ಈ ವ್ಯವಸ್ಥೆಯ ಪ್ರಕಾರ ವರ್ಣದ ಪ್ರತಿ ಸದಸ್ಯನೂ ಹುಟ್ಟಿನಿಂದಲೇ ಅದರ ಸದಸ್ಯತ್ವವನ್ನು ಪಡೆಯುತ್ತಾನೆ. ಒಳ ವೈವಾಹಿಕ ಸಂಬಂಧ, ಸಾಂಸ್ಕೃತಿಕ ನಡವಳಿಕೆ, ಹಂಚಿಕೊಳ್ಳುವಿಕೆ ಇದರ ಪ್ರಮುಖ ಗುಣಲಕ್ಷಣಗಳು. ಮೇಲು, ಕೀಳು ಹಾಗೂ ಶುದ್ಧ, ಅಶುದ್ಧ ಪರಿಕಲ್ಪನೆಗಳು ಇದರ ಭಾಗ. ನಾಲ್ಕು ವರ್ಣಗಳು (ನಂತರ ಐದನೆಯದು) ಭಿನ್ನ ಭಿನ್ನ ಕಟ್ಟಳೆಗಳಿಗೆ ಒಳಪಟ್ಟಿರುತ್ತವೆ. ಧರ್ಮಶಾಸ್ತ್ರಗಳು ಈ ಕಟ್ಟು ಕಟ್ಟಳೆಗಳನ್ನು ವಿವರಿಸುತ್ತವೆ. ಸಾಮಾಜಿಕ ವಿಭಜನೆ ಕೇವಲ ನಾಲ್ಕು ವರ್ಣಗಳಿಗೆ ಸೀಮಿತವಾಗಿಲ್ಲ. ಇದನ್ನು ಧರ್ಮಶಾಸ್ತ್ರಗಳು ವರ್ಣಸಂಕರದ ಮೂಲಕ ವಿವರಿಸುತ್ತವೆ. ಮೂಲ ನಾಲ್ಕು ವರ್ಣಗಳ ವಿಭಿನ್ನ ಸಂಕರದಿಂದ ಈ ಮಿಶ್ರವರ್ಣಗಳ ಉಗಮವನ್ನು ವಿವರಿಸಲಾಗಿದೆ. ನಿರ್ವಿವಾದವಾಗಿ ಇದೊಂದು ಶ್ರೇಣೀಕೃತ, ಕಠಿಣತಮ ಸಾಮಾಜಿಕ ವ್ಯವಸ್ಥೆ ಆದರೆ ಚಲನೆ ಈ ವ್ಯವಸ್ಥೆಗೆ ಹೊರತಾಗಿಲ್ಲ. ಕೆಳ ಚಲನೆಗೆ ಸಾಕಷ್ಟು ಅವಕಾಶ ಗಳಿರುತ್ತವೆ. ಸನ್ಯಾಸಿಯಾಗುವ ಮೂಲಕ ಸಮಾಜದ ಹೊರಗೆ ಹೋಗುವುದು ಅಥವಾ ಮುಂದಿನ ಜನ್ಮದಲ್ಲಿ ಹೆಚ್ಚಿನ ವರ್ಣ ಪಡೆಯಲು ಪ್ರಯತ್ನಿಸುವುದು, ಮೇಲ್ಚಲನೆಗೆ ಇವೆರಡೇ ಲಭ್ಯ ಮಾರ್ಗಗಳು. ಎರಡನೆಯದು, ಕರ್ಮ ಸಿದ್ಧಾಂತದ ಮಹತ್ವ ಹೆಚ್ಚಿಸುತ್ತದೆ.

ಧರ್ಮಶಾಸ್ತ್ರಗಳು ವಿವರಿಸುವ ವರ್ಣವ್ಯವಸ್ಥೆ ನಾಲ್ಕು ಬೃಹತ್ ವಿಂಗಡಣೆಗಳನ್ನು ಒಳಗೊಂಡಿದೆ. ಸಂಕೀರ್ಣ ವಾಸ್ತವವನ್ನು ವಿವರಿಸಲು ಧರ್ಮಶಾಸ್ತ್ರಗಳು ವರ್ಣಸಂಕರದ ಮೊರೆ ಹೋಗುತ್ತವೆ. ಮಾದರಿ ಧರ್ಮಶಾಸ್ತ್ರಗಳಲ್ಲಿ ಒಂದಾದ ಮನು ಧರ್ಮಶಾಸ್ತ್ರದಲ್ಲಿ ಸೂಚಿಸುವಂತೆ ಸಂಕರ ವರ್ಣಗಳು ಹಲವು ಸಲ ವೃತ್ತಿನಿರತ ಗುಂಪುಗಳಾಗಿದ್ದವು. ಹಾಗೆಯೇ, ಸುಲಭವಾಗಿ ಆರ್ಯ ಸಮಾಜದಲ್ಲಿ ಹಿಂಗಿಸಿಕೊಳ್ಳಲಾಗದ ಬುಡಕಟ್ಟು ಗಳನ್ನೂ ಒಳಗೊಂಡಿದ್ದವು. ಬ್ರಾಹ್ಮಣ ಗಂಡು ಹಾಗೂ ವೈಶ್ಯ ಹೆಣ್ಣಿನ ಸಂಬಂಧದಿಂದಾಗಿ ಹುಟ್ಟಿದ ಸಂತತಿ ಎಂದು ಅಂಬಷ್ಠರ ಬಗೆಗೆ ಧರ್ಮಶಾಸ್ತ್ರ ವರ್ಣಿಸಿದರೆ ಪುರಾಣಗಳು ಈ ಅಂಬಷ್ಠ ಬುಡಕಟ್ಟು ಆಣವ ಕ್ಷತ್ರಿಯರಿಂದ ಹುಟ್ಟಿತು ಎನ್ನುತ್ತವೆ. ಹಾಗೆಯೇ ನಿಷಾದರ ಹುಟ್ಟನ್ನು ಧರ್ಮಶಾಸ್ತ್ರವೊಂದು ಬ್ರಾಹ್ಮಣ ಗಂಡು ಹಾಗೂ ಶೂದ್ರ ಹೆಣ್ಣಿನ ಸಂಬಂಧದ ಮೂಲಕ ವಿವರಿಸುತ್ತದೆ. ಜೊತೆಗೆ ನಿಷಾದ, ಶೂದ್ರ ಎರಡೂ ನೆರೆಹೊರೆಯ ಬುಡಕಟ್ಟು ಗಳೆಂದು ಹೇಳುತ್ತದೆ. ಇದೇ ಧರ್ಮಶಾಸ್ತ್ರಗಳಲ್ಲಿನ ವಿವರಣೆಯಲ್ಲಿ ಶೂದ್ರ ತಂದೆ ಅಥವಾ ತಾಯಿ ಇರಬೇಕಾದ ಅಗತ್ಯವನ್ನೂ ಸೂಚಿಸುತ್ತದೆ. ಹಲವು ಹತ್ತು ಸಂಕರ ವರ್ಣಗಳ ಬಗೆಗೆ ಧರ್ಮಶಾಸ್ತ್ರಗಳು ಕೊಡುವ ಇಂತಹ ವಿವರಣೆಗಳನ್ನು ಬಾಲಿಶ ಎಂದು ಹಲವರು ತಿರಸ್ಕರಿಸಿದ್ದಾರೆ. ಭಿನ್ನ ಸಾಮಾಜಿಕ ಗುಂಪುಗಳಿಗೆ ಧಾರ್ಮಿಕ ಸ್ಥಾನಮಾನ ನೀಡುವ ಅಗತ್ಯ ಧರ್ಮಕ್ಕೆ ಉಂಟಾಗುತ್ತದೆ ಎಂಬುದರ ಮೂಲಕ ಇಂತಹ ಶ್ರೇಣೀಕರಣದ ಪ್ರಯತ್ನ ವನ್ನು ವಿವರಿಸಲು ಬಹುಶಃ ಸಾಧ್ಯವಾಗಬಹುದು. ವರ್ಣವ್ಯವಸ್ಥೆಯು ಶ್ರೇಣೀಕೃತ ಸಾಮಾಜಿಕ ಗುಂಪುಗಳ ಮೇಲೆ ಹೇರಲ್ಪಟ್ಟ ಕರ್ತವ್ಯ ನಿರ್ವಹಣೆಯೇ ಆಗಿದ್ದಲ್ಲಿ ವರ್ಣಗಳ ಮಧ್ಯೆ (ಶುದ್ಧವಾಗಲಿ, ಮಿಶ್ರವಾಗಲಿ) ವ್ಯತ್ಯಾಸವು ಸ್ಪಷ್ಟವಾಗಿರಬೇಕಿತ್ತು ಎನ್ನುತ್ತಾರೆ ಥಾಪರ್.

ಭಾರತೀಯ ಸಮಾಜ ಅಧ್ಯಯನಕ್ಕೆ ಧರ್ಮಶಾಸ್ತ್ರಗಳು ನೀಡುವ ಧಾರ್ಮಿಕ ಸ್ಥಾನಮಾನವಷ್ಟೇ ಸಾಕಾಗುವುದಿಲ್ಲ. ವಾಸ್ತವ ರಾಜಕೀಯ - ಆರ್ಥಿಕ ಸ್ಥಾನಮಾನಗಳು ಸಹ ಮುಖ್ಯವಾಗುತ್ತವೆ. ಹಾಗೆಯೇ, ಈ ಸ್ಥಾನಮಾನಗಳನ್ನು ಆ ಜನಸಮುದಾಯಗಳು ಹೇಗೆ ಪಡೆದವು ಎಂಬುದು ಸಹ, ಎನ್ನುತ್ತಾರೆ ಥಾಪರ್. ಹೀಗಾಗಿ ಧಾರ್ಮಿಕ ಸ್ಥಾನಮಾನ ಹಾಗೂ ವಾಸ್ತವ ಸಾಮಾಜಿಕ ಸ್ಥಾನಮಾನ ಎಂದು ಒಡೆದು ನೋಡುವುದು ಅನಿವಾರ್ಯವಾಗುತ್ತದೆ. ಇಂತಹ ವಿಭಜನೆಯ ಪ್ರಯತ್ನದ ಸಮಸ್ಯೆಯೆಂದರೆ, ಇವೆರಡರ ಮಧ್ಯೆ ವಿಭಜನಾ ರೇಖೆ ಯಾವಾಗಲೂ ಸ್ಪಷ್ಟವಾಗಿಲ್ಲದಿರುವುದು ಹಾಗೂ ಧರ್ಮಶಾಸ್ತ್ರಗಳು ಧಾರ್ಮಿಕ ಸ್ಥಾನಮಾನದ ಬಗೆಗೆ ಮಾತ್ರ ಕಾಳಜಿ ವಹಿಸುತ್ತವೆ ಎನ್ನುವುದು. ಧರ್ಮ ತಾನು ಕೊಡುವ ಸ್ಥಾನಮಾನ, ವಾಸ್ತವ ಸಾಮಾಜಿಕ ಸ್ಥಾನಮಾನ ಏನೇ ಇರಲಿ, ಸ್ಥಿರವೆಂದು ಭಾವಿಸುವುದು ಬೇರೆಯದೇ ಸಮಸ್ಯೆಯನ್ನು ತಂದೊಡ್ಡುತ್ತದೆ. ಈ ಕಾರಣಕ್ಕೆ ಭಾರತೀಯ ಸಂದರ್ಭದಲ್ಲಿ ಸಾಮಾಜಿಕ ಚಲನೆ ಎಂದರೆ ವಾಸ್ತವ ಸಾಮಾಜಿಕ ಸ್ಥಾನಮಾನದ ಬದಲಾವಣೆ ಒಂದೇ ಅಲ್ಲ, ಧಾರ್ಮಿಕ ಸ್ಥಾನಮಾನವನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನ ಅಥವಾ ಶ್ರೇಣೀಕರಣದ ತಿರಸ್ಕರಣೆಯ ಪ್ರಯತ್ನವೂ ಆಗಿರಬಹುದು ಎನ್ನುತ್ತಾರೆ ಥಾಪರ್.




ಕಾಲಾಂತರದಲ್ಲಿ ನಡೆದ ಹಲವು ಬದಲಾವಣೆಗಳು ಹೇಗೆ ಜಾತಿಗಳಲ್ಲಿ ಚಲನೆ ಸೂಚಿಸುತ್ತವೆ ಎಂಬುದರೆಡೆ ಗಮನ ಸೆಳೆಯುತ್ತಾರೆ ಥಾಪರ್. ಬ್ರಾಹ್ಮಣ, ಕ್ಷತ್ರಿಯರ ನಡುವಿನ ಬಿಕ್ಕಟ್ಟಿನ ಬಗೆಗೆ ಪುರಾಣಗಳು ಉಲ್ಲೇಖಿಸುತ್ತವೆಯಲ್ಲವೆ ? ಮೂಲತಃ ಈ ಬಿಕ್ಕಟ್ಟು ಧಾರ್ಮಿಕ, ಆಧ್ಯಾತ್ಮಿಕ ಹಾಗೂ ಲೌಕಿಕ ಅಧಿಕಾರದ ಹಂಚಿಕೆಯದಾಗಿತ್ತು. ರಾಜವ್ಯವಸ್ಥೆಯ ಪರಿಧಿಯಲ್ಲಿಯೇ ಈ ಸಂಬಂಧ ಸ್ಪಷ್ಟ ವ್ಯಾಖ್ಯಾನ ಪಡೆಯಿತು. ರಾಜಕೀಯ ಅಧಿಕಾರ ಪಡೆಯುವುದು ಕೇವಲ ಕ್ಷತ್ರಿಯರಿಗೇ ಮೀಸಲಾಗಿರಲಿಲ್ಲವಾದ್ದರಿಂದ ರಿಯಾಯಿತಿಯೊಂದರ ಅಗತ್ಯ ಉಂಟಾಯಿತು. ಈ ನವ ಹೊಂದಾಣಿಕೆ ರಾಜಕೀಯ ಅಧಿಕಾರ ಪಡೆದವರು ತಮ್ಮನ್ನು ತಾವು ಕ್ಷತ್ರಿಯರೆಂದು ಘೋಷಿಸಿಕೊಳ್ಳುವುದರಲ್ಲಿ ಪರಿಸಮಾಪ್ತಿಯಾಯಿತು. ಬ್ರಾಹ್ಮಣರಿಗೆ ಇರುವ ಮಹತ್ವ ಇಂತಹ ಘೋಷಣೆಗಳಿಗೆ ವಂಶಾವಳಿಗಳನ್ನು ರಚಿಸುವ ಮೂಲಕ ರಾಜನ ಸ್ಥಾನ ಪಡೆದವರಿಗೆ ಧಾರ್ಮಿಕ ನ್ಯಾಯಬದ್ಧತೆಯನ್ನು ಒದಗಿಸಿಕೊಡುವುದು. ಹಿಂದೆ ವಂಶಾವಳಿಗಳನ್ನು, ಪುರಾಣಗಳನ್ನು ರಚಿಸುವ ಕಾರ್ಯ ಸೂತರದಾಗಿದ್ದು, ಇದು ಆ ಕಾಲಕ್ಕಾಗಲೇ ಬ್ರಾಹ್ಮಣರದಾಗಿ ಬದಲಾಗಿತ್ತು. ಅದರೊಂದಿಗೆ ಬಹುಶಃ ಸೂತರ ಧಾರ್ಮಿಕ ಸ್ಥಾನಮಾನವೂ ಕೆಳಗಿಳಿಯಿತು. ಕ್ರಿ.ಪೂ. ೪ನೆಯ ಶತಮಾನದಿಂದ ಕ್ರಿ.ಶ. ೪ನೆಯ ಶತಮಾನದವರೆಗೂ ರಾಜ್ಯಾಧಿಕಾರವನ್ನು ಪಡೆದವರಿಗೆ ಈ ಬಗೆಗೆ ಇದ್ದ ಅನಾಸಕ್ತಿಯಿಂದಾಗಿಯೇ ಪುರಾಣಗಳು ನಂದರ, ಮೌರ್ಯರ ಕೀಳು ಮೂಲದ ಬಗೆಗೆ ಉಲ್ಲೇಖಿಸುತ್ತವೆ. ನಿಧಾನವಾಗಿ ವಿಕಾಸವಾದ ಈ ನವ ಹೊಂದಾಣಿಕೆ ಗುಪ್ತರ ನಂತರದ ಕಾಲದಲ್ಲಿ ಸ್ಪಷ್ಟರೂಪ ಪಡೆಯಿತು. ಇಲ್ಲಿಂದ ಮುಂದೆ ಬಹುತೇಕ ಎಲ್ಲಾ ರಾಜರುಗಳು ತಮ್ಮದು ಕ್ಷತ್ರಿಯ ಮೂಲವೆಂದೂ ತಮ್ಮ ಪೂರ್ವಜರು ಚಂದ್ರವಂಶಕ್ಕೋ, ಸೂರ್ಯವಂಶಕ್ಕೋ ಸೇರಿದವರೆಂದೂ ವಂಶಾವಳಿ ಪಡೆದು ಕ್ಷತ್ರಿಯ ಮಾನ್ಯತೆ ಪಡೆಯತೊಡಗಿದರು. ರಾಜ್ಯಾಧಿಕಾರ ಪಡೆದವರಿಗೆ ಸುಲಭವಾಗಿ ಹೆಚ್ಚಿನ ಧಾರ್ಮಿಕ ಸ್ಥಾನಮಾನ ಲಭಿಸುತ್ತಿತ್ತು ಎಂಬುದನ್ನು ಇತರ ಇತಿಹಾಸಕಾರರೂ ಏಕೀಭವಿಸಿದ್ದಾರೆ. ವರ್ಣ ಹಾಗೂ ಜಾತಿಯ ಶ್ರೇಣೀಕರಣ ತಪ್ಪು ಹಾದಿಗೆ ಎಳೆಯುತ್ತದೆ ಎನ್ನುವ ಎಸ್. ಸಿ. ದುಬೆ, ರಾಜಕೀಯ ಅಧಿಕಾರ ಪಡೆದವರು ಹೆಚ್ಚಿನ ಧಾರ್ಮಿಕ ಹಾಗೂ ಸಾಮಾಜಿಕ ಸ್ಥಾನಮಾನ ಪಡೆಯಲು ಎಲ್ಲ ಕಾಲಕ್ಕೂ ಸಾಧ್ಯವಿತ್ತು ಎನ್ನುತ್ತಾರೆ. ಒಂಬತ್ತನೆಯ ಶತಮಾನದ ಮೇಧಾತಿಥಿಯು ತನ್ನ ಮನು ಧರ್ಮಶಾಸ್ತ್ರದ ಮೇಲಿನ ಟಿಪ್ಪಣಿಯಲ್ಲಿ ರಾಜಕೀಯ ಅಧಿಕಾರ ಯಾರಾದರೂ ಪಡೆಯಲು ಸಾಧ್ಯವಿತ್ತು ಎನ್ನುವ ಅಭಿಪ್ರಾಯವನ್ನು ಥಾಪರ್ ಉಲ್ಲೇಖಿಸುತ್ತಾರೆ. ಈ ಧಾರ್ಮಿಕ ಮಾನ್ಯತೆಯ ಇನ್ನೊಂದು ಪರಿಣಾಮವೆಂದರೆ ಹುಟ್ಟಿನಿಂದಲೇ ಈ ಸ್ಥಾನಮಾನ ಪಡೆದುದಾಗಿ ಸಾಧಿಸುವ ಅಗತ್ಯ ಉಂಟಾಗುವುದು. ಅಸ್ಥಿರ ರಾಜಕೀಯ ಸ್ಥಿತಿಯಲ್ಲಿ ರಾಜಕೀಯ ಅಧಿಕಾರ ಪಡೆಯುವ ವೇಗವೂ ಹೆಚ್ಚು. ಇಂತಹ ರಾಜರು ಎಷ್ಟು ವೇಗವಾಗಿ ರಾಜಕೀಯ ಅಧಿಕಾರ ವನ್ನು ಪಡೆಯುತ್ತಾರೆಯೋ ಅಷ್ಟೇ ವೇಗವಾಗಿ ತಮ್ಮ ಕೀಳು ಮೂಲವನ್ನು ತೋರಿಸುತ್ತದೆ ಎಂದು ಭಾವಿಸಿದ ಮಾಹಿತಿಗಳನ್ನು ಹತ್ತಿಕ್ಕುವ ಅಗತ್ಯವೂ ಉಂಟಾಗುತ್ತದೆ.

ಡಿ. ಡಿ. ಕೋಸಾಂಬಿಯವರು ಹಿರಣ್ಯಗರ್ಭದ ಮೂಲಕ ಹೆಚ್ಚಿನ ವರ್ಣದ ಸ್ಥಾನಮಾನ ಕೊಡುವ ಸಾಧ್ಯತೆಯನ್ನು ಉಲ್ಲೇಖಿಸುತ್ತಾರೆ. ವ್ರಾತ್ಯಸ್ತೋಮ ಸಹ ಇಂತಹ ಒಂದು ಮಾರ್ಗ ತೆರೆಯುತ್ತದೆ ಎಂದು ಕೆಲವರು ಭಾವಿಸುತ್ತಾರೆ. ಹೀಗೆ ವಂಶಾವಳಿಗಳ ರಚನೆಯ ಮೂಲಕವೋ ಅಥವಾ ಇತರ ಮಾರ್ಗದಲ್ಲಿಯೋ ಹೆಚ್ಚಿನ ಧಾರ್ಮಿಕ ಸ್ಥಾನಮಾನ ಪಡೆದ ರಾಜರುಗಳು ಧರ್ಮಶಾಸ್ತ್ರಗಳಲ್ಲಿನ ಮಾದರಿ ಕ್ಷತ್ರಿಯರಾಜನನ್ನು ಅನುಕರಿಸುವ ಪ್ರಯತ್ನ ಮಾಡುತ್ತಿದ್ದರು (ಕನಿಷ್ಠ ಸೈದ್ಧಾಂತಿಕವಾಗಿ ಯಾದರೂ). ಹೀಗೆ ವರ್ಣ ವ್ಯವಸ್ಥೆಯ ಪಾಲನೆಯ ಘೋಷಣೆ. ಅಶ್ವಮೇಧಯಾಗಗಳು ಇಂತಹ ಅನುಕರಣೆಯ ಮಾದರಿಗಳಾದವು. ಬ್ರಾಹ್ಮಣ ರಾಜರುಗಳೆಂದು ಗುರುತಿಸಲ್ಪಟ್ಟ ಸಾತವಾಹನರು ವರ್ಣಸಂಕರ ತಡೆಗಟ್ಟಿದುದಾಗಿ ಘೋಷಿಸಿ ಕೊಳ್ಳುತ್ತಾರೆ. ಆದರೆ, ಕ್ಷತ್ರಿಯರೆಂದು ಘೋಷಿಸಿ ಕೊಂಡ ಶಕರೊಂದಿಗೆ ವೈವಾಹಿಕ ಸಂಬಂಧ ಬೆಳೆಸಲು ಇದು ಅಡ್ಡಿಯಾಗುವುದಿಲ್ಲ, ಬಹುಶಃ ಈ ಕಾರಣಕ್ಕೆ ಕೆಲ ಇತಿಹಾಸಕಾರರು ಅವರನ್ನು ವೃಷಲ ಎಂದು ಕರೆದಿದ್ದಿದೆ. ವೃಷಲದ ಅರ್ಥ ಕೀಳೆಂದೇ ಆಗಿತ್ತು. ವ್ರಾತ್ಯರೆಂದು ಕರೆಯಬಹುದಾದ ಶಕರು

ತಮ್ಮನ್ನು ತಾವು ಕ್ಷತ್ರಿಯರೆಂದು ಘೋಷಿಸಿಕೊಂಡಿದ್ದೊಂದೇ ಅಲ್ಲ, ಸಂಸ್ಕೃತಕ್ಕೂ ಇನ್ನಿಲ್ಲದ ಮಹತ್ವ ಕೊಟ್ಟರು. ಅಲ್ಲಿಯವರೆಗೂ ಬಳಸುತ್ತಿದ್ದ ಪ್ರಾಕೃತದಿಂದ ಸಂಸ್ಕೃತಕ್ಕೆ ಬದಲಾಗುವ ಪ್ರಕ್ರಿಯೆ ಪ್ರಾರಂಭವಾಗುವುದು ಬಹುಶಃ ಇಲ್ಲಿಂದಲೇ. ಇಂತಹ ವ್ರಾತ್ಯ ಕ್ಷತ್ರಿಯರೋ ಅಥವಾ ಶೂದ್ರರೋ ಎಂದು ಕರೆಯಲಾದ ರಾಜರುಗಳೇ ಮುಂದಿನ ರಾಜರಿಗೆ ಮಾರ್ಗದರ್ಶಕರಾಗುವ ಮಹಾರಾಜಾಧಿರಾಜ ಎನ್ನುವ ಬಿರುದುಗಳನ್ನು ಧರಿಸಿದು ದೊಂದು ವಿಪರ್ಯಾಸ. ಹೊರಗಿನಿಂದ ಬಂದು ರಾಜರುಗಳಾದ ಯವನರು, ಶಕರ ಬಗೆಗೆ ಮನು ಸಹ ಸ್ಪಷ್ಟ ನಿಲುವು ತೆಗೆದುಕೊಳ್ಳುವುದಿಲ್ಲ. ಒಂದೆಡೆ ಅವರನ್ನು ವ್ರಾತ್ಯ ಕ್ಷತ್ರಿಯರೆಂದು ಅವರಿಗೆ ಶೂದ್ರ ಸ್ಥಾನಮಾನ ಕೊಡಬೇಕೆನ್ನುತ್ತಾನೆ. ಇನ್ನೊಂದೆಡೆ ಪುರುಷಸೂಕ್ತದಲ್ಲಿ ಹುಟ್ಟು ವಿವರಿಸಲ್ಪಡದ ವರ್ಣಗಳೆಲ್ಲವನ್ನೂ, ಅವರು ಆರ್ಯ ಭಾಷೆ ಮಾತನಾಡಲಿ ಅಥವಾ ಮ್ಲೇಚ್ಛ ಭಾಷೆ ಮಾತನಾಡಲಿ, ದಸ್ಯುಗಳೆಂದು ಕರೆಯಬೇಕೆನ್ನುತ್ತಾನೆ.

ಬ್ರಾಹ್ಮಣರ ವಿಷಯದಲ್ಲಿಯೂ ಇಂತಹ ಹಿಂಗಿಸಿಕೊಳ್ಳುವಿಕೆ ನಡೆದಿರಬೇಕು. ಇಲ್ಲದಿದ್ದಲ್ಲಿ ಭಾರತ ಉಪಖಂಡದಾದ್ಯಂತ ಪಸರಿಸಿದ 'ಆರ್ಯೀಕರಣ' ಪ್ರಕ್ರಿಯೆಯನ್ನು ವಿವರಿಸಲು ಸಾಧ್ಯವಾಗುವುದಿಲ್ಲ ಎನ್ನುತ್ತಾರೆ ಥಾಪರ್. ಬಹುಶಃ ಇದು ಅನುಲೋಮ ವೈವಾಹಿಕ ಸಂಬಂಧ ಅಥವಾ ಸ್ಥಳೀಯ ಪಂಥಗಳ ಪುರೋಹಿತರನ್ನು ಹಿಂಗಿಸಿಕೊಳ್ಳುವ ಪ್ರಕ್ರಿಯೆಯ ಮೂಲಕ ನಡೆದಿರಬೇಕು ಎನ್ನುತ್ತಾರೆ ಅವರು. ಮಗಧ ಬ್ರಾಹ್ಮಣರನ್ನು ಹೇಗೆ ಕೀಳಾಗಿ ನೋಡಲಾಗುತ್ತಿತ್ತು ಹಾಗೂ ನಂತರದಲ್ಲಿ ಅವರ ಪರಿಸ್ಥಿತಿ ಹೇಗೆ ಸುಧಾರಿಸಿತು ಎಂದು ವಿವರಿಸುತ್ತಾರೆ ಥಾಪರ್. ಮಗಧ ಬ್ರಾಹ್ಮಣರ ಮೇಲಿದ್ದ ಆರೋಪಗಳಲ್ಲೊಂದು ಅವರು ಸ್ಥಳೀಯ ಆಚರಣೆಗಳನ್ನು, ಮಂತ್ರತಂತ್ರಗಳನ್ನು ಮಾನ್ಯ ಮಾಡುತ್ತಾರೆ ಎನ್ನುವುದು. ವಾಸ್ತವದಲ್ಲಿ ಯಾವುದನ್ನು ನಾವು ಇಂದು ವೈಷ್ಣವ, ಶೈವ ಧರ್ಮಗಳೆನ್ನುತ್ತೇವೆಯೋ ಅವು ಈ ಹಿಂಗಿಸಿಕೊಳ್ಳುವ ಪ್ರಕ್ರಿಯೆ ಭಾಗವಾಗಿದ್ದಿರಬೇಕು ಎಂದು ಧಾರ್ಮಿಕ ಇತಿಹಾಸ ಸೂಚಿಸುತ್ತದೆ. ಹುಟ್ಟಿನ ಶುದ್ಧತೆಯನ್ನು ಪ್ರತಿಪಾದಿಸುವ ವ್ಯವಸ್ಥೆಯೊಂದರಲ್ಲಿ ಈ ಹಿಂಗಿಸಿಕೊಳ್ಳುವ ಪ್ರಕ್ರಿಯೆಯ ಬಗೆಗೆ ಹೆಚ್ಚು ಜಾಗೃತ ಮನೋಭಾವ ಕಂಡುಬಂದುದು ಆಶ್ಚರ್ಯವೇನಲ್ಲ.

ಭಾರತೀಯ ಧರ್ಮಗಳು ಹಲವು ಬದಲಾವಣೆಗಳನ್ನು ಕಾಣುತ್ತವೆ. ವೇದ ಧರ್ಮಕ್ಕೆ ಪರ್ಯಾಯವಾಗಿ ನಾಲ್ಕು ಅವೈದಿಕ ಧರ್ಮಗಳು ತಲೆ ಎತ್ತಿದವು ; ಅವುಗಳೇ ಬೌದ್ಧ, ಜೈನ, ವೈಷ್ಣವ, ಶೈವ 'ಎನ್ನುತ್ತಾರೆ ಇತಿಹಾಸಕಾರರು. ಕಾಲಾಂತರದಲ್ಲಿ ವೈಷ್ಣವ, ಶೈವ ಧರ್ಮಗಳು ತಮ್ಮನ್ನು ತಾವು ವೈದಿಕ ಎಂದು ತೋರಿಸಿಕೊಳ್ಳಲು ಹೆಣಗಿದವು. ವೈಷ್ಣವ ಧರ್ಮದ ಉಗಮದ ಬಗೆಗೆ ಹೇಳುತ್ತಾ ವೇದಗಳಲ್ಲಿ ಉಲ್ಲೇಖವಾದ ಅಮುಖ್ಯ ದೇವತೆಯಾದ ವಿಷ್ಣುವನ್ನು ಮೊದಲು ನಾರಾಯಣನೊಂದಿಗೂ ನಂತರ, ವಸುದೇವ ಕೃಷ್ಣನೊಂದಿಗೂ ಸಮೀಕರಣ ಸಾಧಿಸಲಾಯಿತು. ಮೂಲತಃ ನಾರಾಯಣನೆಂಬ ಸಂತನು ಪಂಚರಾತ್ರ ಸತ್ರ ನೆರವೇರಿಸಿ ಶ್ರೇಷ್ಠತೆಯನ್ನು ಪಡೆದನೆಂಬ ಉಲ್ಲೇಖ ಲಭ್ಯವಾಗುತ್ತದೆ. ಜಯಸ್ವಾಲ್‌ರು ಈ ಪಂಚರಾತ್ರ ಸತ್ರವನ್ನು ಮಾನವ ಬಲಿಗೆ ಜೋಡಿಸುತ್ತಾರೆ ಮತ್ತು ಕಾಲಾಂತರದಲ್ಲಿ ಇದನ್ನು ಸಾಂಕೇತಿಕವಾಗಿ ಉಳಿಸಿ ಕೊಳ್ಳಲಾಯಿತು ಎನ್ನುತ್ತಾರೆ. ಚತುರ್ವ್ಯೂಹದಲ್ಲಿ ವಸುದೇವ, ಬಲದೇವ ಮುಂತಾದ ವೀರರ ಆರಾಧನೆಯೇ ಭಾಗವತ ಧರ್ಮವೆಂದು ಕರೆಯಲ್ಪಟ್ಟಿತ್ತು. ಪಂಚರಾತ್ರ ಹಾಗೂ ಭಾಗವತ ಒಂದಾಗಿ ವೈಷ್ಣವ ಧರ್ಮದ ಬೆಳವಣಿಗೆಗೆ ಕಾರಣವಾದವು ಎನ್ನುತ್ತಾರೆ ಇತಿಹಾಸಕಾರರು. ಬೆಸನಗರನದ ಕ್ರಿ.ಪೂ. ೧ನೇ ಶತಮಾನದ ಶಾಸನದಲ್ಲಿ ಗ್ರೀಕ್ ಭಕ್ತನೊಬ್ಬ ಗರುಡ ಸ್ತಂಭ ಸ್ಥಾಪಿಸಿದ ಉಲ್ಲೇಖ ಸೂಚಿಸುವಂತೆ ಮ್ಲೇಚ್ಛರಿಗೂ, ಶೂದ್ರರಿಗೂ ಈ ಧರ್ಮ ತೆರೆದುಕೊಂಡಿತ್ತು. ವೃಷ್ಣಿಕುಲಕ್ಕೆ ಸೇರಿದ ಸಾತ್ವತರು, ಯಾದವರು ಹೀಗೆ ವಾಸುದೇವ ಪಂಥ ಹುಟ್ಟುಹಾಕಿದ ಜನರ ಬಗೆಗೆ ಹೇಳಲಾಗಿದೆ. ಪುರಾಣಗಳನ್ನು ನಂತರದಲ್ಲಿ ಮರುರಚಿಸಿಕೊಂಡು ಬಂದಾಗ್ಯೂ ಈ ನವ ಪಂಥಗಳ (ಪಂಚರಾತ್ರ, ಭಾಗವತ, ಶೈವ ಹಾಗೂ ಮುಂದೆ ಶಾಕ್ತ) ಬಗೆಗಿನ ವಿರೋಧದ ಧ್ವನಿಗಳು ಪುರಾಣಗಳಲ್ಲಿ ಉಳಿದುಕೊಂಡು ಬಂದಿವೆ. ಇಂತಹವುಗಳಿಂದ ಉಲ್ಲೇಖಿಸುವ ದಾಸ್‌ಗುಪ್ತಾರು ಪಂಚರಾತ್ರರು ಹೆಂಗಸರನ್ನೂ ಹಾಗೂ ಶೂದ್ರರನ್ನೂ ಸಹ ತಮ್ಮ ಪಂಥಗಳಲ್ಲಿ ಸೇರಿಸಿಕೊಳ್ಳುತ್ತಿದ್ದರು ಎಂಬ ಆರೋಪವನ್ನು ಉಲ್ಲೇಖಿಸುತ್ತಾರೆ. ಇನ್ನು ಶೈವ ಹಾಗೂ ಶಾಕ್ತ ಪಂಥಗಳ ಇತಿಹಾಸ ಇಂತಹುದೇ ಹಿಂಗಿಸಿಕೊಳ್ಳುವ ಪ್ರಕ್ರಿಯೆಯನ್ನು ಸೂಚಿಸುತ್ತದೆ. ಹೀಗೆ ಹಲವು ಪಂಥಗಳು ಕೀಳೆಂದು ಭಾವಿಸಿದ ಹಲವು ಜನಸಮುದಾಯಗಳಿಗೆ ಧಾರ್ಮಿಕವಾಗಿ ಸಮುಚಿತ (ಅಥವಾ ಅವುಗಳ ನಿಜ ಸಾಮಾಜಿಕ ಸ್ಥಾನಮಾನಕ್ಕೆ ಹೊಂದಿಕೊಂಡ) ಸ್ಥಾನಮಾನ ನೀಡಿದವು ಹಾಗೂ ಈ ಮೂಲಕ ಅವು ಬೃಹತ್ ಹಿಂದೂ ಧರ್ಮದ ಭಾಗವಾದವು ಎಂದು ಥಾಪರ್ ಭಾವಿಸುತ್ತಾರೆ. ಇಂತಹ ಪ್ರಕ್ರಿಯೆಗಳಲ್ಲೊಂದು ಕಾಲಾಂತರದಲ್ಲಿ ಸ್ಥಾನಮಾನ ಪಡೆದ ದೇವನಿಗೂ, ದೇವತೆಗೂ ಸ್ಥಳೀಯ ದೇವತೆಯನ್ನು ಸಮೀಕರಿಸುವುದು ಅಥವಾ ಮದುವೆ ಮಾಡುವುದು. ಆದರೆ, ಯಾಮುನಾಚಾರ್ಯರ (೧೧ನೆಯ ಶತಮಾನ) ಆಗಮಪ್ರಾಮಾಣ್ಯದಲ್ಲಿ ತಮ್ಮ ಪಂಥವನ್ನು ವೇದ ಮೂಲದ್ದು ಎಂದು ತೋರಿಸಿಕೊಳ್ಳುವ ಪ್ರಯತ್ನ, ಪಂಚರಾತ್ರ ಬ್ರಾಹ್ಮಣರನ್ನು ಸಮಾಜ, ಸಂಪ್ರದಾಯಸ್ಥರು ಇನ್ನೂ ಕೀಳೆಂದು ಭಾವಿಸುತ್ತಿದ್ದರೆನ್ನುವುದು ಇಂತಹ ಹಿಂಗಿಸಿ ಕೊಳ್ಳುವ ಪ್ರಕ್ರಿಯೆ ಸುಸೂತ್ರದ್ದಾಗಿರಲಿಕ್ಕಿಲ್ಲ ಎಂಬ ಅನುಮಾನಕ್ಕೆ ಎಡೆಮಾಡಿಕೊಡುತ್ತದೆ.

ಮೂಲ ಆಕಾರಗಳು ಹೆಚ್ಚಾಗಿ ಮೇಲ್ವರ್ಗಗಳ ಬಗೆಗೆ ಉಲ್ಲೇಖಿಸುತ್ತವೆ, ಕೆಳವರ್ಗದ ಬಗೆಗಿನ ಮಾಹಿತಿ ವಿರಳ ಎನ್ನುತ್ತಾರೆ ಥಾಪರ್. ವೈಶ್ಯ ವರ್ಗವೆಂದು ಗುರುತಿಸಬಹುದಾದ ಹಲವು ಜಾತಿಗಳ ಸ್ಥಾನಮಾನ ಉನ್ನತವಾಗಿ ಏನೂ ಇರಲಿಲ್ಲ. ಅಲ್‌ಬಿರೂನಿಯ ವೈಶ್ಯ ಹಾಗೂ ಶೂದ್ರ ವರ್ಣಗಳ ಮಧ್ಯೆ ವ್ಯತ್ಯಾಸ ಗುರುತಿಸುವುದು ಕಷ್ಟವಾಗುತ್ತಿತ್ತು ಎಂಬ ಹೇಳಿಕೆ ಯನ್ನವರು ಉಲ್ಲೇಖಿಸುತ್ತಾರೆ. ವೈಶ್ಯ ಎಂದು ಕರೆಯಲ್ಪಡುವ ವಿಶಾಲ ಜನತೆಯ ಭಾಗವಾದ ಜಾತಿಗಳು ಕಾಲಾಂತರದಲ್ಲಿ ಹೆಚ್ಚಿನ ಆರ್ಥಿಕ ಸ್ಥಾನಮಾನ ಪಡೆದ ಸಂದರ್ಭಗಳು ಇತಿಹಾಸದಲ್ಲಿ ಉಲ್ಲೇಖಗೊಂಡಿವೆ. ಕುಶಲಕರ್ಮಿಗಳ ಗಿಲ್ಡ್‌ಗಳು (ಶ್ರೇಣಿಗಳು) ದಾನ ಮಾಡಿದ ಹಾಗೂ ಅವುಗಳು ರಾಜ ಆಸ್ಥಾನದೊಂದಿಗೆ ಒಪ್ಪಂದ ಮಾಡಿಕೊಂಡದ್ದನ್ನು ಕೋಸಾಂಬಿ ಉದಾಹರಿಸಿದರೆ ಥಾಪರ್ ರೇಷ್ಮೆ ನೇಕಾರರ ಗಿಲ್ಡ್ ಸೂರ್ಯ ದೇವಸ್ಥಾನಕ್ಕೆ ದಾನ ನೀಡಿದ್ದನ್ನು ಉಲ್ಲೇಖಿಸುತ್ತಾರೆ. ಆದರೆ ರಾಜಕೀಯ, ಧಾರ್ಮಿಕ ಶಕ್ತಿಯ ಗೈರು ಹಾಜರಿಯಲ್ಲಿ ಅವರು ಹೆಚ್ಚಿನ ಧಾರ್ಮಿಕ ಸ್ಥಾನಮಾನ ಪಡೆಯಲು ಸಾಧ್ಯವಾಗುವುದಿಲ್ಲ. ಭಕ್ತಿ ಚಳುವಳಿಗಳಲ್ಲಿ ಕುಶಲಕರ್ಮಿಗಳು ಹೆಚ್ಚಾಗಿ ಆಕರ್ಷಿತವಾದದ್ದು ಈ ಕಾರಣಕ್ಕೆ ಎನ್ನುತ್ತಾರೆ ಥಾಪರ್. ಈ ಪಂಥದ ಬಹಳಷ್ಟು ಧಾರ್ಮಿಕ ನಾಯಕರು ಈ ವರ್ಗಗಳಿಂದಲೇ ಬಂದಿದ್ದು ಈ ಕಾರಣಕ್ಕೆ ಆಶ್ಚರ್ಯವಲ್ಲ (ಉದಾಹರಣೆಗೆ ನಾಯನಾರ್, ಆಳ್ವಾರ್ ಭಕ್ತಿ ಚಳುವಳಿಗಳು) ಇತ್ತೀಚೆಗೆ ಬಸವಣ್ಣ ವಿಶ್ವಬ್ರಾಹ್ಮಣ ಕುಲದವನಿರಬಹುದೆಂದು ವಾದ ಮತ್ತು 'ಇಡೀ ವಚನ ಚಳುವಳಿಯೆ ಕುಶಲಕರ್ಮಿಗಳ ಚಳುವಳಿಯಾಗಿತ್ತೆನ್ನುವ' ವಾದಗಳನ್ನು ಪರೀಕ್ಷಿಸಬೇಕಾದುದು ಈ ಹಿನ್ನೆಲೆಯಲ್ಲಿ. ಇಲ್ಲಿ ಇನ್ನೊಂದು ಸಾಧ್ಯತೆಯನ್ನೂ ಗುರುತಿಸ ಬಹುದು. ಎಲ್ಲಿ ಸ್ಥಾಪಿತ ಧರ್ಮ ವಿಶಾಲ ಜನಸಮುದಾಯಕ್ಕೆ ಅದರ ಸಾಮಾಜಿಕ ಸ್ಥಾನಮಾನಕ್ಕೆ ಅನುಗುಣವಾಗಿ ಧಾರ್ಮಿಕ ಸ್ಥಾನಮಾನ ನಿರಾಕರಿಸಲೆಳೆಸುತ್ತದೆಯೋ, ಅಲ್ಲಿ ಬಿಕ್ಕಟ್ಟೊಂದು ಸೃಷ್ಟಿಯಾಗುತ್ತದೆ. ಇದು ಧಾರ್ಮಿಕ ಚಳುವಳಿಗೆ ಸಿದ್ಧ ಸ್ಥಿತಿ ಎಂದು ಭಾವಿಸ ಬಹುದು. ಮುಂದೆ ಅಂದಿನ ಸ್ವೀಕೃತ ಧಾರ್ಮಿಕ ಪರಿಕಲ್ಪನೆಗಳು ಪ್ರಶ್ನಿಸಲ್ಪಡುತ್ತವೆ. ಇಂತಹ ಮೂಲ ಧರ್ಮದ ಪುನರ್ ವ್ಯಾಖ್ಯಾನದ ಪ್ರಯತ್ನವೇ ಧಾರ್ಮಿಕ ಚಳುವಳಿಗಳು. ಈ ಚಳುವಳಿಗಳ ಶ್ರೇಣೀಕೃತ ಸಮಾಜದ ಬಗೆಗೆ ಅಸಹನೆ, ತಿರಸ್ಕರಣೆಯನ್ನು ಹಲವರು ದಾಖಲಿಸಿದ್ದಾರೆ. ಶರಣ ಚಳುವಳಿ, ದಾಸ ಚಳುವಳಿಗಳು ಇಂತಹ ಧಾರ್ಮಿಕ ಚಳುವಳಿಗಳು.

ಥಾಪರ್ ಅವರ ಈ ಪ್ರಮೇಯ ಇತಿಹಾಸದ ದೃಷ್ಟಿಕೋನಕ್ಕೆ ಹಲವು ಹೊಸ ಹೊಳಹು ಗಳನ್ನು ನೀಡಬಹುದೆಂದು ಭಾವಿಸಿದ್ದೇನೆ. ಥಾಪರ್ ಅವರ ಪ್ರಮೇಯದ ಇತಿಹಾಸದ ಚಿಂತನೆಗಳ ಮೇಲೆ ಕನಿಷ್ಠ ಒಂದು ಪರಿಣಾಮದ ಬಗೆಗೆ ಗಮನ ಸೆಳೆಯಬಹುದು. ಕದಂಬ, ಚಾಲುಕ್ಯ ಮುಂತಾದ ವಂಶಗಳ ಮೂಲವನ್ನು ಹುಡುಕುವಲ್ಲಿ ಅವುಗಳು ಸ್ಥಳೀಯ ಮೂಲದ ಬಗೆಗಿನ ನಿಲುವುಗಳನ್ನು ಈ ಪರಿಕಲ್ಪನೆಯೊಳಗೆ ಹೆಚ್ಚು ಸಂಗತವಾಗಿ ವಿವರಿಸಬಹುದು. ಜಾತಿಪದ್ಧತಿಯು ಭಾಗಶಃ ವೈವಾಹಿಕ ಸಂಬಂಧಗಳ ಮೇಲಿನ ನಿರ್ಬಂಧ ಹಾಗೂ ಭಾಗಶಃ ಆರ್ಥಿಕ ಸಂಬಂಧದೊಂದಿಗೆ ಬೆಸೆದುಕೊಂಡಿದ್ದರಿಂದಲೇ ಮುಂದು ವರಿಯಿತು ಎಂದು ಭಾವಿಸುವ ಥಾಪರ್, ಜಾತಿಯ ವ್ಯವಸ್ಥೆಯ ಧಾರ್ಮಿಕ ಸ್ಥಾನಮಾನ ವನ್ನು ತಿರಸ್ಕರಣೆಯೇ ಅದರ ವಿರುದ್ಧ ಹೋರಾಟದ ಮೂಲ ಸೆಲೆ ಎಂದವರು ಭಾವಿಸುತ್ತಾರೆ. ಅಲ್ಲದೆ ಥಾಪರ್ ಅವರ ಈ ನಿಲುವುಗಳು ಧರ್ಮವನ್ನು, ವರ್ಣವ್ಯವಸ್ಥೆ ಯನ್ನು ಸಮಾಜದ ಭಾಗವಾಗಿ ಗ್ರಹಿಸುವ ನಿಟ್ಟಿನಲ್ಲಿ ಸಹಾಯಕವಾಗಿವೆ. ಧಾರ್ಮಿಕ ಚಳುವಳಿಗಳು ಕಾಲಾಂತರದಲ್ಲಿ ಶಕ್ತಿಗುಂದಿದುದನ್ನು ಕೇವಲ ಧಾರ್ಮಿಕ ಪ್ರಕ್ರಿಯೆಯಾಗಿ ನೋಡದೆ ಸಾಮಾಜಿಕ ಪ್ರಕ್ರಿಯೆಯಾಗಿ ನೋಡುವ ಅಗತ್ಯಕ್ಕೆ ಒತ್ತುಕೊಡುವುದು ಈ ಪ್ರಮೇಯದ ಪರಿಣಾಮಗಳಲ್ಲೊಂದು ಎಂದು ನನ್ನ ಅನಿಸಿಕೆ. ಕನಕದಾಸರು 'ಕುಲದ ನೆಲೆಯ ನೇನಾದರೂ ಬಲ್ಲಿರಾ' ಎಂಬ ಪ್ರಶ್ನೆಯನ್ನು ಇಂತಹ ಅರಿವಿನಿಂದ ಕೇಳಿದರೆ ಎಂಬುದು ನಮಗೆ ತಿಳಿಯದಾದರೂ, ಈ ಪ್ರಶ್ನೆ ಇಂದೂ ಪ್ರಸ್ತುತವಾಗಿರುವಂತೆ ಭಾಸವಾಗುತ್ತದೆ.

ಬಿ. ಎಂ. ಪ್ರದೀಪ್
ಕೇರಾಫ್ : ವಿ. ಕನ್ನನ್, ಪ್ಲಾಟ್ ನಂ. ೫೨, ಸತ್ಯನಾರಾಯಣಪೇಟೆ, ಗಂಗಾವತಿ, ಕೊಪ್ಪಳ ಜಿಲ್ಲೆ

೨೩ ಮಾರ್ಚ್ ೧೯೩೧ – ಭಾರತದ ಪಾಲಿಗೆ ಕರಾಳ ದಿನ. ಕ್ರಾಂತಿಕಾರಿಯೊಬ್ಬ ತನ್ನ ಹೋರಾಟ ಹಾಗೂ ದೇಶಕ್ಕಾಗಿ ಹುತಾತ್ಮಗೊಂಡ ದಿನ. ಭಗತ್ ಸಿಂಗ್ ತನ್ನ ಸಂಗಾತಿಗಳೊಂದಿಗೆ ಗಲ್ಲಿಗೇರಿದಾಗ ತಮ್ಮ ಮರಣದಿಂದ ಭಾರತೀಯರು ರೊಚ್ಚಿಗೇಳುತ್ತಾರೆ, ಯುವಕರು ಹೋರಾಟಕ್ಕಿಳಿಯುತ್ತಾರೆ, ಅವರಲ್ಲಿ ನೂರಾರು ಭಗತ್ ಸಿಂಗ್‌ರು ಹುಟ್ಟಿಕೊಳ್ಳುತ್ತಾರೆಂದು ಕನಸು ಕಂಡಿದ್ದರು. ಆದರೆ ಅವರ ಕನಸು ನನಸಾಯಿತೆ ? ಯುವಕರು ಹೋರಾಟಕ್ಕಿಳಿದರೆ ?... ಈ ಸಂದರ್ಭದಲ್ಲಿ ಭಗತ್ ಸಿಂಗ್‌ನನ್ನು ನೆನೆಯುವುದು ಅತ್ಯವಶ್ಯಕ. ಎಲ್ಲರೂ ತಮ್ಮ ತಮ್ಮ ರೀತಿಯಲ್ಲೇ, ಆತನನ್ನು ಬಳಸಿಕೊಳ್ಳುತ್ತಿರುವ ಸಂದರ್ಭದಲ್ಲಿ, ನಿಜವಾದ ಭಗತ್ ಸಿಂಗ್ ಎಂಥವನಿದ್ದ, ಅವನ ಹೋರಾಟ ಮತ್ತು ಸಿದ್ಧಾಂತ ಏನಾಗಿದ್ದವು ಎಂಬುದು ಬಹಳ ಪ್ರಸ್ತುತ.

**ರಾಹುಲ ಬೆಳಗಲಿ**

"**ಕಿ**ವುಡನೊಬ್ಬನಿಗೆ ಕೇಳಿಸುವಂತೆ ಹೇಳಬೇಕಾದರೆ, ಗಟ್ಟಿಯಾಗಿ ಕೂಗಿ ಹೇಳಬೇಕಾಗುತ್ತೆ. ಈಗ ನಾನು ಮಾಡಿದ್ದು ಅದನ್ನೇ. ಸರ್ಕಾರ ಮನಬಂದಂತೆ ಮಾಡಲು, ಈ ದೇಶ ಅವರದ್ದಲ್ಲ, ಈ ದೇಶ ನಮ್ಮದು. ಜನರ ಮೇಲೆ ದಬ್ಬಾಳಿಕೆ ನಡೆಸಿ, ರಕ್ತ ಹೀರುವವರ ವಿರುದ್ಧ ಕ್ರಮ ಕೈಗೊಳ್ಳಬೇಕಾಯಿತು. ನನಗ್ಯಾರ ಭಯವೂ ಇಲ್ಲ. ಗಲ್ಲು ಶಿಕ್ಷೆಗೂ ಅಂಜುವುದಿಲ್ಲ." ಹೀಗೆ ಗುಡುಗಿದ್ದು, ಬಾಂಬ್ ಸ್ಫೋಟಿಸಿ ಬ್ರಿಟಿಷ್ ಅಧಿಕಾರಿಗಳ ಎದೆಗಳನ್ನು ಝಲ್ಲೆನ್ನಿಸಿದ್ದು ಬೇರ‍್ಯಾರು ಅಲ್ಲ ಹೋರಾಟಗಾರ ಭಗತ್ ಸಿಂಗ್.

# ಭಗತ್ ಸಿಂಗ್ ನೆನೆಯುತ್ತ...

೧೯೨೯ ಏಪ್ರಿಲ್ ೮. ಸೆಂಟ್ರಲ್ ಅಸೆಂಬ್ಲಿಯಲ್ಲಿ ಸಾರ್ವಜನಿಕ ರಕ್ಷಣಾ ಕಾಯಿದೆ ಹಾಗೂ ಕಾರ್ಮಿಕ ವಿವಾದಗಳ ಕಾಯಿದೆಗಳು ಮಂಡನೆಯಾಗುವ ದಿನ. ಕಾಯಿದೆಗಳ ಕುರಿತು ಮಂಡನೆ ಹಾಗೂ ಚರ್ಚೆ ಶುರುವಾಯಿತು. ಮರುಕ್ಷಣವೇ ಭಾರಿ ಗದ್ದಲ ಉಂಟಾಯಿತು. ಅಬ್ಬರದ ಶಬ್ದವು ಕೇಳಿಸಿತು. ಅಲ್ಲಿ ಬಾಂಬ್ ಸ್ಫೋಟಗೊಂಡಿತ್ತು. ಇಡೀ ಪ್ರಾಂಗಣ ದಟ್ಟವಾದ ಕಪ್ಪು ಹೊಗೆಯಿಂದ ತುಂಬಿಕೊಂಡಿತು.

ಭಗತ್ ಸಿಂಗ್ ಹಾಗೂ ಬಿ. ಕೆ. ದತ್ ತೀವ್ರವಾದ ಸ್ವಾತಂತ್ರ್ಯ ಚಳುವಳಿಗೆ ಮುನ್ನುಡಿ ಬರೆದಿದ್ದರು. ಇವರಿಬ್ಬರು ಸಭೆಯಲ್ಲಿ ಬಾಂಬ್ ಎಸೆದು ಎಲ್ಲರನ್ನೂ ಗೊಂದಲಕ್ಕೀಡುಮಾಡಿದರು. 'ಇಂಕ್ವಿಲಾಬ್ ಜಿಂದಾಬಾದ್' ಘೋಷಣೆಗಳನ್ನು ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧ ಕೂಗುತ್ತ ತಮ್ಮಲ್ಲಿದ್ದ ಕರಪತ್ರಗಳನ್ನು ಹಂಚಿದರು. ತಪ್ಪಿಸಿಕೊಂಡು ಪಾರಾಗಲು ವಿಪುಲ ಅವಕಾಶ ಇದ್ದರೂ, ಅವರಿಬ್ಬರೂ ಇಚ್ಛಿಸಲಿಲ್ಲ. ತಾವು ನಿಂತಲ್ಲಿಯೇ ಬ್ರಿಟಿಷ್ ಅಧಿಕಾರಿಗಳಿಗೆ ಸಮರ್ಪಿಸಿಕೊಂಡರು.

ಭಗತ್ ಸಿಂಗ್ ಒಬ್ಬಂಟಿಯಾಗಿರಲಿಲ್ಲ. ಕ್ರಾಂತಿಕಾರರ ಪಡೆಯೇ ಅವನ ಜತೆಯಿತ್ತು. ರಾಜಗುರು, ಸುಖದೇವ, ಆಜಾದ್, ರಾಮಪ್ರಸಾದ ಬಿಸ್ಮಿಲ್, ಅಜಯ್ ಘೋಷ್, ಸೋಹನ್ ಸಿಂಗ್, ಬಿಜೋಯ್ ಕುಮಾರ ಸಿನ್ಹ ಮೊದಲಾದವರು ಅವನ ಜೊತೆಗಿದ್ದರು. ಒಬ್ಬರಿಗಿಂತ ಒಬ್ಬರು, ಒಂದಿಲ್ಲೊಂದು ರೀತಿಯಲ್ಲಿ ಚಾಣಾಕ್ಷ ಹಾಗೂ ನಿಪುಣರಾಗಿದ್ದರು.

ಅಹಿಂಸಾ ಚಳುವಳಿಯಿಂದ ಭಾರತ ಸ್ವಾತಂತ್ರ್ಯಗೊಂಡಿರಬಹುದು. ಆದರೆ ಭಾರತ ಸ್ವಾತಂತ್ರ್ಯಗೊಳಿಸುವಲ್ಲಿ ಕ್ರಾಂತಿಕಾರಿಗಳ ಪಾತ್ರ ಹಾಗೂ ಕೊಡುಗೆ ಅಲ್ಲಗಳೆಯುವಂತಿಲ್ಲ. ಅವರು ಸದಾ ಹೋರಾಟ, ಸಾಹಸ ಹಾಗೂ ತ್ಯಾಗಕ್ಕೆ ಸಿದ್ಧರಾಗಿದ್ದರು. ಎಂಥದ್ದೇ ಪರಿಸ್ಥಿತಿ ಬಂದರೂ, ಧೈರ್ಯವಾಗಿ ಎದುರಿಸುತ್ತಿದ್ದರು.

ಕೆಲ ಜನ ತಿಳಿದಂತೆ ಭಗತ್ ಸಿಂಗ್ ಭಯೋತ್ಪಾದಕನಾಗಿರಲಿಲ್ಲ. ಅವನೊಬ್ಬ ಕ್ರಾಂತಿಕಾರಿಯಾಗಿದ್ದನು. ತಾನು ನಂಬಿದ್ದ ಹೋರಾಟದ – ಸಿದ್ಧಾಂತದ ಮೂಲಕ ಅನ್ಯಾಯದ ವಿರುದ್ಧ ಸಿಡಿದೇಳುವ ಇಚ್ಛೆ ಹೊಂದಿದ್ದನು. ಇದಕ್ಕಿಂತ ಮಿಗಿಲಾಗಿ, ಕ್ರಾಂತಿಯೆಂದರೆ ಬ್ರಿಟಿಷರಿಂದ ಕರಿದೊರೆಗಳಿಗೆ ಅಧಿಕಾರದ ಹಸ್ತಾಂತರವಲ್ಲ, ಕ್ರಾಂತಿಯೆಂದರೆ ಎಲ್ಲ ಅಸಮಾನತೆಗಳ ನಿರ್ಮೂಲನೆಯೆಂದು ನಂಬಿದ್ದನು.

ಆತ ಸೇಡುಗಾರನಾಗಿದ್ದ. ತನ್ನ ಗುರು ಲಾಲಾ ಲಜಪತ್ ರಾಯ್ ಪ್ರತಿಭಟನೆಯಲ್ಲಿರುವಾಗ ಬ್ರಿಟಿಷರು ನಡೆಸಿದ ಲಾಠಿ ಚಾರ್ಜಿನಿಂದ ಜೀವ ತೆತ್ತಾಗ, ತನ್ನ ರೋಷ ತಡೆದಿಟ್ಟುಕೊಳ್ಳಲಾಗದೇ, ಸ್ಯಾಂಡರ್ಸ್ ಎಂಬ ಬ್ರಿಟಿಷ್ ಅಧಿಕಾರಿಯ ಬಲಿ ತೆಗೆದುಕೊಂಡಿದ್ದ. ಜನರಲ್ ಸ್ಕಾಟ್‌ಗೆ ಆಗಬೇಕಿದ್ದ ಶಿಕ್ಷೆಗೆ ಸ್ಯಾಂಡರ್ಸ್ ಬಲಿಪಶುವಾದ.

ಭಗತ್ ಸಿಂಗ್ ಹುಟ್ಟಿದ್ದು ೨೭ನೇ ಸೆಪ್ಟೆಂಬರ್ ೧೯೦೭ರಂದು. ಈಗ ಪಾಕಿಸ್ತಾನದಲ್ಲಿರುವ ಲಾಯಿಲ್‌ಪುರ್ ಜಿಲ್ಲೆಯ ಭಂಗಾ ಎಂಬ ಹಳ್ಳಿಯ ದಂಪತಿಗಳಾದ ಕಿಶನ್ ಸಿಂಗ್ ಹಾಗೂ ವಿದ್ಯಾವತಿಯ ಮಗನಾಗಿ ಜನನ. ಅವನ ಪೂರ್ವಜರು ಪಂಜಾಬ್ ರಾಜ್ಯದ ಜಾಲಂಧರ್ ಜಿಲ್ಲೆಯ ಖಾತ್ಕರ ಕಲ್ಲಾನ್ ಎಂಬ ಗ್ರಾಮದ ಮೂಲದವರು. ಕುಟುಂಬದವರೆಲ್ಲರೂ ದೇಶಭಕ್ತರಾಗಿದ್ದು, ದೇಶಕ್ಕಾಗಿ ತಮ್ಮ ಜೀವಗಳನ್ನೇ ಮುಡಿಪಾಗಿಟ್ಟಿದ್ದರು.

ಭಗತ್ ಸಿಂಗ್‌ನ ಚಿಕ್ಕಪ್ಪ ಅಜಿತ್ ಸಿಂಗ್ ಉಪಾಧ್ಯಾಯ ವೃತ್ತಿಯಲ್ಲಿದ್ದುಕೊಂಡೇ 'ಪೇಶ್ವಾ' ಎಂಬ ಪತ್ರಿಕೆ ಹೊರತರುತ್ತಿದ್ದ. ಜನರನ್ನು ಬಂಡೇಳಿಸುವಂತಹ ಭಾಷಣಕಾರನೆಂದು ಹೆಸರು

ಗಳಿಸಿದ್ದ. ಹೀಗಾಗಿ ಭಗತ್‌ನ ಮೇಲೆ ಚಿಕ್ಕಪ್ಪನ ಪ್ರಭಾವ ಬಹಳ ಬೀರಿತ್ತು.

ಚಿಕ್ಕವನಿರುವಾಗ, ಭಗತ್ ಸಿಂಗ್ ಮಣ್ಣಿನಲ್ಲಿ ಕಡ್ಡಿಗಳನ್ನು ನೆಡುವ ಆಟವನ್ನಾಡುತ್ತಿದ್ದ. ''ಹೀಗೇಕೆ ?'' ಎಂದು ಕೇಳಿದರೆ ''ನಾನು ಬಂದೂಕುಗಳನ್ನು ನೆಡುತ್ತಿದ್ದೇನೆ'' ಎಂದು ಉತ್ತರಿಸುತ್ತಿದ್ದ.

ಬ್ರಿಟಿಷರಿಂದ ತಪ್ಪಿಸಿಕೊಂಡು ದೇಶಾಂತರ ಹೋಗಿದ್ದ ಅಜಿತ್ ಸಿಂಗನ ನೆನಪಿನಲ್ಲಿ ಆತನ ಹೆಂಡತಿ ಅಳುವಾಗಲೆಲ್ಲ ''ನಾನು ದೊಡ್ಡವನಾದ ಮೇಲೆ ಬ್ರಿಟಿಷರ ವಿರುದ್ಧ ಹೋರಾಡಿ ಚಿಕ್ಕಪ್ಪನನ್ನು ಕರೆದುಕೊಂಡು ಬರುತ್ತೇನೆ'' ಎನ್ನುತ್ತಿದ್ದ.

ದೇಶಭಕ್ತಿ ಪಂಥದವನೆಂದು ಕರೆಯಿಸಿಕೊಳ್ಳಲು ಇಚ್ಛಿಸುತ್ತಿದ್ದ ಈತ, ಪ್ರಾಥಮಿಕ ಶಿಕ್ಷಣ ಹಳ್ಳಿಯಲ್ಲೇ ಪಡೆದು, ಪ್ರೌಢ ಶಿಕ್ಷಣ ೧೯೧೬-೧೭ರಲ್ಲಿ ಲಾಹೋರಿನ ಡಿ.ಎ.ವಿ. ಶಾಲೆಯಲ್ಲಿ ವಿದ್ಯಾಭ್ಯಾಸ ಮುಂದುವರಿಸಿದನು. ಸತತ ಅಭ್ಯಾಸ ಹಾಗೂ ಏಕಾಗ್ರತೆಯಿಂದ ಆಂಗ್ಲ, ಉರ್ದು ಹಾಗೂ ಸಂಸ್ಕೃತ ಭಾಷೆಗಳ ಮೇಲೆ ಹಿಡಿತದ ಜೊತೆಗೆ ಭಾಷಾ ಪಾರಂಗತನಾದನು.




ಇಲ್ಲಿ ಓದುತ್ತಿರುವಾಗಲೇ, ೧೯೧೯ ಏಪ್ರಿಲ್ ೧೩ರಂದು ಜಲಿಯನ್‌ವಾಲಾಬಾಗ್ ಜನಸಂಹಾರ ನಡೆಯಿತು. ಆ ಪ್ರದೇಶಕ್ಕೆ ಭಗತ್ ಭೇಟಿಯಿತ್ತನು. ಅಲ್ಲಿ ನಡೆದಿದ್ದ ರಕ್ತದೋಕುಳಿ, ಅಸಹಾಯಕ ಹೆಂಗಸರ ಹಾಗೂ ಮಕ್ಕಳ ರೋದನೆಗಳಿಗೆ ಸಾಕ್ಷಿಯಾದನು. ಆ ಪ್ರದೇಶ ಭಯಾನಕವಾಗಿ ಮಾರ್ಪಟ್ಟಿತ್ತು. ತಾಸುಗಟ್ಟಲೇ ಒಂದೆಡೆ ನಿಶ್ಶಬ್ದವಾಗಿ ಕೂತನು. ನಂತರ, ಕೈವಸ್ತ್ರದಲ್ಲಿ ರಕ್ತಮಯವಾಗಿದ್ದ ಮಣ್ಣು ತುಂಬಿಕೊಂಡು, ಬ್ರಿಟಿಷರಿಗೆ ಸರಿಯಾದ ಉತ್ತರ ನೀಡುವುದಾಗಿ ನಿಶ್ಚಯಿಸಿದನು.

ಮಹಾತ್ಮಾ ಗಾಂಧೀಜಿ ಅಸಹಕಾರ ಚಳುವಳಿ ಹಾಗೂ ಶಾಲಾಕಾಲೇಜುಗಳಿಗೆ ಬಹಿಷ್ಕಾರ ಕರೆ ನೀಡಿದಾಗ, ಲಾಹೋರಿನಲ್ಲಿ ಕಲಿಯುತ್ತಿದ್ದ ಭಗತ್ ಸಿಂಗ್ ಸಹ ಕಾಲೇಜಿಗೆ ಬಹಿಷ್ಕರಿಸಿ ಚಳುವಳಿಗೆ ದುಮ್ಮಿಕ್ಕಿದನು.

ಕುಟುಂಬದವರು ಎಷ್ಟೇ ಒತ್ತಾಯಿಸಿದರೂ, ಮದುವೆಯಾಗಲೂ ನಿರಾಕರಿಸಿದನು. ''ಇದು ಮದುವೆಗೆ ಕಾಲವಲ್ಲ, ದೇಶವು ನನಗೆ ಕರೆಯುತ್ತಿದೆ. ನನ್ನ ತನುಮನಧನವೆಲ್ಲ ದೇಶಕ್ಕೆ ಅರ್ಪಿಸಿಬೇಕೆಂಬ ತೀರ್ಮಾನಕ್ಕೆ ನಾನು ಬಂದಿದ್ದೇನೆ. ಇದು ನಮ್ಮ ಕುಟುಂಬಕ್ಕೆ ಹೊಸದೇನೂ ಅಲ್ಲ, ನಮ್ಮ ಇಡೀ ಕುಟುಂಬ ದೇಶಪ್ರೇಮದಿಂದ ತುಂಬಿದೆ. ನಾನು ಹುಟ್ಟಿದ ಎರಡು-ಮೂರು ವರ್ಷಗಳಲ್ಲಿ ಚಿಕ್ಕಪ್ಪ ಸ್ವರಣ್ ಸಿಂಗ್ ಜೈಲಿನಲ್ಲಿ ಸಾವನ್ನಪ್ಪಿದ. ಅಜಿತ್ ಸಿಂಗ್ ಚಿಕ್ಕಪ್ಪ ಈಗಲೂ ವಿದೇಶದಲ್ಲಿಯೇ ಉಳಿಯಬೇಕಾಗಿಬಂದಿದೆ. ನೀನು ಸಹ ಹಲವು ಬಾರಿ ಕಾರಾಗೃಹ ವಾಸ ಅನುಭವಿಸಿದ್ದೀಯ. ನಿಮ್ಮೆಲ್ಲರ ಹಾದಿಯನ್ನೇ ನಾನು ಅನುಸರಿಸುತ್ತಿದ್ದೇನೆ. ಆದ್ದರಿಂದ ನನ್ನನ್ನು ಕುಟುಂಬಕ್ಕೆ ಗಂಟು ಹಾಕಬೇಡಿ. ಬದಲು ನನ್ನ ಉದ್ದೇಶ ಸಾಧನೆಗೆ ನಿಮ್ಮ ಹರಕೆ ನೀಡಿ'' ಎಂದು ತನ್ನ ಅಪ್ಪನಿಗೆ ಮದುವೆ ಏಕೆ ಬೇಡವೆಂದು ಪತ್ರದ ಮೂಲಕ ಉತ್ತರಿಸಿದನು.

ಯಾವುದಾದರೂ ತಂತ್ರವೊಂದನ್ನು ಉಪಯೋಗಿಸಿ, ಭಾರತದಿಂದ ಬ್ರಿಟಿಷರನ್ನು ಹೊರಗಟ್ಟಬೇಕೆಂದು ಭಗತ್ ಸಿಂಗ್‌ನ ಮನಸ್ಸಿನಲ್ಲಿ ಆಳವಾಗಿ ಬೇರುಬಿಟ್ಟಿತ್ತು. ೧೯೨೬ರಲ್ಲಿ 'ಭಾರತ ನೌಜವಾನ ಸಭಾ' ಎಂಬ ಯುವ ಸಂಘಟನೆಯನ್ನು ಕಟ್ಟಿಕೊಂಡು, ತನ್ನ ಹೋರಾಟ ಮುಂದುವರಿಸಿದನು. ಹೊಸ ಹೊಸ ಯುವಕರನ್ನು ಭೇಟಿಯಾಗಿ, ಸಂಘಟನೆಯ ಬಗ್ಗೆ ತಿಳಿಸುವುದರ ಜೊತೆಗೆ, ಅವರನ್ನು ಕಾರ್ಯಕ್ರಮಗಳಲ್ಲಿ ಭಾಗಿಗಳಾಗುವಂತೆ ಹುರಿದುಂಬಿಸುವುದು, ರಾಜಕೀಯ ವಿಷಯಗಳನ್ನು ಚರ್ಚಿಸುವುದು, ಗುಪ್ತಸಭೆಗಳ ಮೂಲಕ ಮುಂದಿನ ಯೋಜನೆಗಳನ್ನು ರೂಪಿಸುವುದು, ಕರಪತ್ರಗಳನ್ನು ತಯಾರಿಸಿ ಎಲ್ಲೆಡೆ ಹಂಚುವುದು – ಹೀಗೆ ಹಲವಾರು ಚಟುವಟಿಕೆಗಳಲ್ಲಿ ಭಗತ್ ಸಿಂಗ್ ಪ್ರಮುಖ ಪಾತ್ರ ವಹಿಸಿದನು.

ಅಕ್ಟೋಬರ್ ೧೯೨೬ರ ಸಮಯ. ಲಾಹೋರಿನಲ್ಲಿ ವಿಜೃಂಭಣೆಯಿಂದ ಆಚರಿಸಲಾಗುತ್ತಿದ್ದ ದಸರಾ ಹಬ್ಬದ ಮೆರವಣಿಗೆಯೊಂದರ ಮೇಲೆ ಯಾರೋ ದುಷ್ಕರ್ಮಿಗಳು ಬಾಂಬೊಂದನ್ನೆಸೆದು ಗಲಭೆ ಎಬ್ಬಿಸಿದರು. ಇದರ ಪರಿಣಾಮವಾಗಿ ಹನ್ನೆರಡು ಜನ ಸಾವಿಗೀಡಾದರೆ, ಹಲವರು ಗಾಯಗೊಂಡರು. ಬಾಂಬ್ ಎಸೆದವರು ಎಲ್ಲಿಯೋ ಪರಾರಿಯಾಗಿ ಬಿಟ್ಟಿದ್ದರು. ಇದು ಕ್ರಾಂತಿಕಾರರ ಗುಂಪಿನ ದುಷ್ಕೃತ್ಯವೆಂದು ಪೊಲೀಸರು ದಾಖಲಿಸಿಕೊಂಡರು. ನೈಜವಾದ ಕ್ರಾಂತಿಕಾರಿಗಳು ಎಂದಿಗೂ ಮತೀಯ ಗಲಭೆಗೆ ಕಾರಣವಾಗುವುದಿಲ್ಲ, ಆದರೆ ಗಲಭೆ ಸೃಷ್ಟಿಸುವವರ ಹುಟ್ಟಡಗಿಸುತ್ತಾರೆಂದು ಪೊಲೀಸರಿಗೆ ಸ್ವಲ್ಪವೂ ಸಹ ತಿಳಿಯಲಿಲ್ಲ. ಇದೇ ಸಂದರ್ಭವನ್ನು ಉಪಯೋಗಿಸಿ, ಪೊಲೀಸರು ಭಗತ್ ಸಿಂಗ್‌ನನ್ನು ದಸ್ತಗಿರಿ ಮಾಡಿ ಒಂದು ತಿಂಗಳ ಕಾಲ ಜೈಲಿನಲ್ಲಿರಿಸಿ ನಂತರ ಬೋರ್ಸ್ಟಾಲ್ ಜೈಲಿಗೆ ವರ್ಗಾಯಿಸಿದರು. ಆತನ ವಿರುದ್ಧ ಕಟ್ಟುಕತೆಗಳ ಆಪಾದನೆ ಹೊರೆಸಿ, ಸುಳ್ಳು ಸಾಕ್ಷಿಗಳನ್ನು ಸೃಷ್ಟಿಸಲು ಪೊಲೀಸರು ಸರ್ವಪ್ರಯತ್ನ ಮಾಡಿದರು. ಜನರ ಒತ್ತಾಯ ತೀವ್ರವಾಗಿದ್ದರಿಂದ ಅರವತ್ತು ಸಾವಿರ ರೂಪಾಯಿಗಳ ಜಾಮೀನಿನ ಮೇಲೆ ಬಿಡಬೇಕಾಯಿತು. ಇಷ್ಟೆಲ್ಲವಾದರೂ ಆತನ ವಿರುದ್ಧ ಇದ್ದ ಆರೋಪ ಖಟ್ಲೆಗಳನ್ನು ಹಿಂದೆಗೆದುಕೊಳ್ಳಲು ಸರ್ಕಾರ ಸಿದ್ಧವಿರಲಿಲ್ಲ. ಸರ್ಕಾರದ ಮೇಲೆ ಇನ್ನಷ್ಟು ಒತ್ತಡ ಹೇರಲು ಜನರನ್ನು ಭಗತ್ ಸಿಂಗ್ ಹುರಿದುಂಬಿಸಿದ. ಕೊನೆಗೂ ಒಂದು ವರ್ಷದ ನಂತರ ಸರ್ಕಾರವು ತನ್ನ ಜಾಮೀನನ್ನು ಅಂತ್ಯಗೊಳಿಸಿತು.

ಜುಲೈ ೧೯೨೮ರ ವರ್ಷ ಭಗತ್ ಸಿಂಗ್‌ನ ಜೀವನದಲ್ಲಿ ಮೈಲುಗಲ್ಲಾಗಿ ಮೂಡಿಬಂದಿತು. ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಯಾವ ರೀತಿಯ ಭವಿಷ್ಯದ ಸಮಾಜವನ್ನು ರೂಪಿಸಬೇಕೆಂಬುದರ ಕಲ್ಪನೆ, ಭಗತ್ ಸಿಂಗ್‌ನ ಮನಸ್ಸಿನಲ್ಲಿ ಮೂಡಿದ್ದು, ಈ ದಿನಗಳಲ್ಲಿಯೇ. ಮೌಲಿಕ ಹೋರಾಟಕ್ಕೆ ಅಂತಿಮ ಧ್ಯೇಯ ಸಮಾಜವಾದಿ ವ್ಯವಸ್ಥೆಯ ಸಮಾಜದ ರಚನೆಯಾಗಬೇಕೆಂದು ತನ್ನ ದೃಷ್ಟಿಯಲ್ಲಿರಿಸಿಕೊಂಡು ಕಾರ್ಯಪ್ರವೃತ್ತಗೊಂಡನು.

ತನ್ನ ವಿನೂತನ ಕಲ್ಪನೆ ನನಸಾಗಿಸಲು, ಆಪ್ತ ಕ್ರಾಂತಿಕಾರಿ ಮಿತ್ರರ ಸಭೆಯೊಂದನ್ನು ಕರೆದನು. ಹೊಸ ರೀತಿಯ ಸಮಾಜ ಕಟ್ಟುವುದರ ಬಗ್ಗೆ ಚರ್ಚಿಸಿದನು. ರಾಮಪ್ರಸಾದ ಬಿಸ್ಮಿಲ್, ಅಜಯ್ ಘೋಷ್, ಸೋಹನ್ ಸಿಂಗ್, ಆಜಾದ್, ರಾಜಗುರು, ಸುಖದೇವ್ ಮುಂತಾದವರು ಜೊತೆಗೂಡಿದರು.

''ಇಂದಿನ ರಾಜಕೀಯ ಪರಿಸ್ಥಿತಿಯಲ್ಲಿ ಬದಲಾವಣೆಯುಂಟಾಗಿದೆ. ಇಡೀ ರಾಷ್ಟ್ರದಲ್ಲಿ ಬಿಗಡಾಯಿಸಿದ ವಾತಾವರಣವಿದೆ. ಏನಾದರೊಂದು ಕೃತ್ಯದಲ್ಲಿ ತೊಡಗಲು ಸಮಯ ಪಕ್ವವಾಗಿದೆ. ಕಾಂಗ್ರೆಸ್ ಪಕ್ಷದ ನೀತಿಯಿಂದ ರಾಷ್ಟ್ರವು ಸ್ವತಂತ್ರವಾಗಲಾರದು. ದಿನ ಬೆಳಗಾದರೆ ಒಂದಿಲ್ಲೊಂದು ಒಪ್ಪಂದ ಮಾಡಿಕೊಳ್ಳುವುದೇ ಅವರ ಪರಿಪಾಠವಾಗಿದೆ. ತೋಳು ಮಡಿಸಿ ಸಮರಕ್ಕಿಳಿಯಲು ಯುವಕರೆಲ್ಲರೂ ಸನ್ನದ್ಧರಾಗಬೇಕು. ಅದಕ್ಕಾಗಿ ನಮ್ಮ ಸಂಘಟನೆಯನ್ನು ಇವೆಲ್ಲ ದೃಷ್ಟಿಗಳಿಂದ ಮಿಲಿಟರಿ ಪದ್ಧತಿಯಲ್ಲಿ ಬೆಳೆಯಿಸಬೇಕಾಗುತ್ತೆ'' ಎಂದು ಎಲ್ಲರ ಮುಂದೆ ತನ್ನ ವಿಚಾರ ಮಂಡಿಸಿದನು. ವಿಚಾರಕ್ಕೆ ಎಲ್ಲರಿಂದ ಬೆಂಬಲವೂ ದೊರೆಯಿತು.

ತಾವು ಕಟ್ಟಲಿರುವ ಸಂಘಟನೆ ಸಮಾಜವಾದಿ ತತ್ವದ ಮೇಲೆ ಆಧಾರವಾಗಿರಬೇಕೆಂದು ನಿರ್ಧರಿಸಿದರು. ಅದರಂತೆಯೇ 'ಹಿಂದೂಸ್ತಾನ್ ಸಮಾಜವಾದಿ ಗಣತಂತ್ರ ಸಂಘಟನೆ'ಯನ್ನು ಹುಟ್ಟುಹಾಕಿದರು. ಅವರ ಸಂಘಟನೆಯ ಏಕಮೇವ ಉದ್ದೇಶ, ಅವರು ಈ ರೀತಿ ವಿವರಿಸಿದರು – 'ಸಂಘಟಿತವಾದ ಸಶಸ್ತ್ರ ಕ್ರಾಂತಿಯ ಮೂಲಕ ಭಾರತದ ಸಂಯುಕ್ತ ರಾಜ್ಯಗಳ ಗಣರಾಜ್ಯವನ್ನು ಸೃಷ್ಟಿಸುವುದು.'

೧೯೨೯ ಏಪ್ರಿಲ್ ೮ರಂದು ಸೆಂಟ್ರಲ್ ಅಸೆಂಬ್ಲಿಯಲ್ಲಿ ಬಾಂಬ್ ಎಸೆದ ಕಾರಣಕ್ಕೆ ಭಗತ್ ಸಿಂಗ್ ಹಾಗೂ ಬಿ. ಕೆ. ದತ್ ಪೊಲೀಸರಿಗೆ ಸಮರ್ಪಿಸಿಕೊಂಡಾಗ, ಅವರಿಬ್ಬರನ್ನು ಜೈಲಿಗೆ ಹಾಕಲಾಯಿತು. ಭಗತ್ ಸಿಂಗ್ ಜೈಲಿನಲ್ಲಿರುವುದು ಅವನ ಕುಟುಂಬದವರಿಗೆ ನೋಡಲಾಗಲಿಲ್ಲ. ಜಾಮೀನಿನ ಮೂಲಕ ಬಿಡಿಸಿಕೊಳ್ಳಲು ಪ್ರಯತ್ನಿಸಿದಾಗೆಲ್ಲ, ಆತ ನಿರಾಕರಿಸುತ್ತಿದ್ದ. ವಕೀಲರನ್ನು ನೇಮಿಸಲು ಕಿಶನ್ ಸಿಂಗ್ ತವಕಿಸಿದಾಗಲೂ, ಸೈದ್ಧಾಂತಿಕ ನಿಲುವಿಗೆ ಮತ್ತು ಜೀವನದ ಗುರಿಗೆ ವಕೀಲಿ ವೃತ್ತಿ ವಿರೋಧವಾಗಿದೆಯೆಂದು ಭಗತ್ ವಾದಿಸಿದ್ದ.

ಜೈಲಿನಲ್ಲಿ ದ್ವೇಷ, ಅಸಹನೆಯಿಂದಲೋ ಪೊಲೀಸರು ಭಗತ್ ಸಿಂಗ್ ಹಾಗೂ ಇತರ ಕ್ರಾಂತಿಕಾರಿಗಳಿಗೆ ಕಿರುಕುಳ, ಚಿತ್ರಹಿಂಸೆ ನೀಡಲು ಪ್ರಾರಂಭಿಸಿದರು. ಯಾವುದೇ ರೀತಿಯ ಸೌಕರ್ಯವಿಲ್ಲದೆ ಕೊಠಡಿಗಳಲ್ಲಿ ಅವರನ್ನು ಕೂಡಿ ಹಾಕಿದರು. ತಾಜಾ ಗಾಳಿಯು ಕಷ್ಟವಾಗಿ ಆಸ್ವಾದಿಸುವ ವಾತಾವರಣ ನಿರ್ಮಿಸಿದರು. ಇದಲ್ಲದೇ ಉತ್ತಮ ರೀತಿಯ ಆಹಾರವನ್ನು ನೀಡಲು ನಿರಾಕರಿಸಿದರು. ಕಳಪೆ ದರ್ಜೆಯ ಅಡುಗೆ, ಪ್ರಾಣಿಗಳು ಸಹ ಮೂಸಲು ಅಸಹ್ಯಪಡುವಂತಹ ಆಹಾರ ನೀಡುತ್ತಿದ್ದರು.

ಪೊಲೀಸರ ವಿಕೃತ ರೀತಿಯ ಚಿತ್ರಹಿಂಸೆಯನ್ನು ತಾಳಲಾರದೇ, ಅವರ ವಿರುದ್ಧ ಪ್ರತಿಭಟನೆ ಮೂಲಕ ಬಂಡೆದ್ದನು. ''ನಾವು ಹೊರಗಿದ್ದಿದ್ದರೆ ಸ್ವಾತಂತ್ರ್ಯಕ್ಕಾಗಿ ಹೋರಾಟವನ್ನು ಮುಂದುವರಿಸುತ್ತಿದ್ದೆವು. ನಾವೀಗ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಅಂಗವಾದ ಜೈಲಿನಲ್ಲಿದ್ದೇವೆ. ದೇಶಕ್ಕಾಗಿ ಹೋರಾಡುವವರ ಸ್ಥೈರ್ಯ ಹಾಗೂ ಶಕ್ತಿಗಳನ್ನು ಕುಗ್ಗಿಸುವುದು ಈ ಜೈಲುಗಳ ಉದ್ದೇಶ. ಮಾನವನಿಗೆ ತಕ್ಕುದಾದ ನಡತೆ ಬ್ರಿಟಿಷ್ ಅಧಿಕಾರಿಗಳಿಗಿಲ್ಲ, ಆದ್ದರಿಂದ ಹೋರಾಟದ ಹಾದಿ ಹಿಡಿಯೋಣಾ ಬನ್ನಿ'' ಎಂದು ಎಲ್ಲರನ್ನು ಹೋರಾಟಕ್ಕೆ ಅಣಿಯಾಗಿಸಲು ಕಾರಣನಾದನು.

ಸೂಕ್ತ ರೀತಿಯ ಸೌಕರ್ಯ, ಉತ್ತಮ ಆಹಾರ ಮತ್ತು ಓದುವ ಸೌಲಭ್ಯ ಮುಂತಾದ ಬೇಡಿಕೆಗಳನ್ನು ಎದುರಿಟ್ಟುಕೊಂಡು, ಭಗತ್ ಸಿಂಗ್ ತನ್ನ ಎಲ್ಲ ಕ್ರಾಂತಿಕಾರಿ ಸಂಗಾತಿಗಳ ಜೊತೆಗೆ ಉಪವಾಸ ಸತ್ಯಾಗ್ರಹಕ್ಕೆ ಕೂತನು. ಅವತ್ತಿನ ದಿನಾಂಕ ೧೫ ಜೂನ್ ೧೯೨೯ ಆಗಿತ್ತು. ೮೧ ದಿನಗಳವರೆಗೂ ಉಪವಾಸ ಸತ್ಯಾಗ್ರಹ ಮುಂದುವರಿಸಿದರು. ಕೇವಲ ಒಂದು ವಾರಕ್ಕೆ ಭಗತ್ ಸಿಂಗ್‌ನ ತೂಕ ೧೩೩ ಪೌಂಡ್‌ನಿಂದ ೧೧೯ ಪೌಂಡ್‌ಗೆ ಇಳಿದುಹೋಗಿತ್ತು.

ಪೊಲೀಸರು ಎಷ್ಟೇ ಪ್ರಯತ್ನಿಸಿದರೂ, ಸತ್ಯಾಗ್ರಹ ಮುರಿಯಲಾಗಲಿಲ್ಲ. ಕ್ರಾಂತಿಕಾರಿಗಳ ದೃಢವಾದ ಮನಸ್ಸು ಹಾಗೂ ಹೋರಾಟದ ಕಿಚ್ಚು, ಸತ್ಯಾಗ್ರಹ ಎಷ್ಟೇ ದಿವಸಗಳಾದರೂ ಮಾಡಲು ಶಕ್ತಿದಾಯಕವಾದವು. ಹಲವು ರೀತಿಯ ತಿಂಡಿ ತಿನಿಸುಗಳನ್ನಿಟ್ಟರೂ, ಯಾರೂ ಪ್ರತಿಕ್ರಿಯಿಸಲಿಲ್ಲ. ಪೊಲೀಸರು ತಿಂಡಿ ಹಾಗೂ ಊಟ ಬದಿಗಿಟ್ಟು, ಹಾಲನ್ನು ಮುಂದೆ ಮಾಡಿ ಸತ್ಯಾಗ್ರಹ ಮುರಿಯಲು ಪ್ರಯತ್ನಪಟ್ಟಾಗಲೂ, ಅವರು ಹಾಲನ್ನು ಮುಟ್ಟಲಿಲ್ಲ.

ಕ್ರಾಂತಿಕಾರಿಗಳ ಆರೋಗ್ಯ ಹದಗೆಡುತ್ತ ಇದ್ದರೂ ಪೊಲೀಸರು ಪ್ರತಿಕ್ರಿಯಿಸಲೇ ಇಲ್ಲ. ಬೇಡಿಕೆಗಳನ್ನು ಪೂರೈಸಲಿಲ್ಲ. ಸತ್ಯಾಗ್ರಹ ಮುಂಧುವರಿದಂತೆ ಹೋರಾಟಗಾರ ಜತೀನ್ ದಾಸ್‌ನ ಆರೋಗ್ಯ ಕ್ಷೀಣಿಸುತ್ತ ಹೋಯಿತು. ಆತನ ಆರೋಗ್ಯ ಸಂಪೂರ್ಣವಾಗಿ ಹದಗೆಟ್ಟಿತು. ೧೯೨೯ರ ಸೆಪ್ಟೆಂಬರ್ ೪ರಿಂದ ನಾಡಿಬಡಿತ ಕ್ಷೀಣಿಸುವುದರ ಜೊತೆಗೆ ಉಸಿರಾಟದ ಕ್ರಮಬದ್ಧತೆಯು ತಪ್ಪಿತು. ಸೆಪ್ಟೆಂಬರ್ ೧೨ನೇ ದಿನಾಂಕಕ್ಕೆ ವಾಂತಿ, ಕೆಮ್ಮು. ಕ್ರಮರಹಿತ ನಾಡಿಬಡಿತದ ಪರಿಸ್ಥಿತಿಯಲ್ಲೂ, ವೈದ್ಯರು ಆತನ ಆರೋಗ್ಯವನ್ನು ಪರೀಕ್ಷಿಸಿ ಔಷಧಿ ನೀಡಿದರೂ, ಅದನ್ನು ಸೇವಿಸಲು ನಿರಾಕರಿಸಿದನು. ಸೆಪ್ಟೆಂಬರ್ ೩೦ರಂದು ಮಧ್ಯಾಹ್ನ೧.೧೦ಕ್ಕೆ ತನ್ನ ಕೊನೆಯುಸಿರೆಳೆದನು.

ಸಾಯುವ ಮುನ್ನ ''ಕಾಳಿಬಾರಿಯಲ್ಲಿ ಬಂಗಾಳದ ಸಂಪ್ರದಾಯದಂತೆ ಶವಸಂಸ್ಕಾರ ನನಗೆ ಬೇಡ. ನಾನು ಬಂಗಾಳಿಯಲ್ಲ, ಭಾರತೀಯ'' ಎಂದು ಹೇಳಿದ್ದನು.

ಸತ್ಯಾಗ್ರಹ ಮುಂದುವರಿದಂತೆ, ಸಾರ್ವಜನಿಕರಲ್ಲಿ ತಳಮಳ ಉಂಟಾಯಿತು. ಸಿಕ್ಕಸಿಕ್ಕಲ್ಲಿ ಬಹಿರಂಗ ಸಭೆಗಳು ನಡೆದವು, ಮೆರವಣಿಗೆಗಳಲ್ಲಿ ಜನರು ಸೇರತೊಡಗಿದರು. ಸರ್ಕಾರ ಖಂಡನೆಗೆ ಗುರಿಯಾಯಿತು. ಕೊನೆಗೂ ಬ್ರಿಟಿಷರು ಮಣಿಯಲೇಬೇಕಾಯಿತು. ಸೋಲೊಪ್ಪಿ ಕೊಳ್ಳಲೇಬೇಕಾಯಿತು. ವಿಚಾರಣಾ ಸಮಿತಿ ನೇಮಕ ಮಾಡುವುದರ ಮೂಲಕ ಕೈದಿಗಳಿಗೆ ಮಂಚ, ಮೇಜು, ಕುರ್ಚಿ, ವರ್ತಮಾನ ಪತ್ರಿಕೆಗಳು, ದೀಪ, ಉತ್ತಮ ಆಹಾರ ಒದಗಿಸಲಾಯಿತು. ಉಪವಾಸ ಸತ್ಯಾಗ್ರಹ ಎಂಬತ್ತೊಂದು ದಿನಗಳ ನಂತರ ಕೊನೆಗೊಂಡಿತು.

ಭಗತ್ ಸಿಂಗ್‌ಗೆ ಓದಿನ ಬಗ್ಗೆ ತೀವ್ರವಾದ ಆಸಕ್ತಿ ಇತ್ತು. ಪಂಜಾಬ್ ಜೈಲರ್‌ಗೆ ಇತಿಹಾಸ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಕಾವ್ಯ, ನಾಟಕ, ಕಾದಂಬರಿ ಮುಂತಾದ ಪ್ರಕಾರಗಳ ಸಾಹಿತ್ಯವನ್ನು ಒದಗಿಸಬೇಕೆಂದು ಆಗ್ರಹಪಡಿಸಿದ್ದ. ಭಗತ್ ಸಿಂಗ್ ಜೈಲಿನಲ್ಲಿರುವಾಗ ಹಲವು ರೀತಿಯ ಪುಸ್ತಕಗಳನ್ನು ಓದಿದನು. ಅವುಗಳಲ್ಲಿ ಪ್ರಮುಖವಾಗಿ 'ಜನತೆ ಏಕೆ ಹೋರಾಡುತ್ತದೆ ?' 'ಎರಡನೇ ಅಂತರ-ರಾಷ್ಟ್ರೀಯದ ಪತನ', 'ಎಡಪಂಥೀಯ ಸಮತಾವಾದ', 'ಫ್ರಾನ್ಸಿನಲ್ಲಿ ಅಂತರ್ಯುದ್ಧ', 'ಚಾರಿತ್ರಿಕ ಭೌತಿಕವಾದ ಸಿದ್ಧಾಂತ'.

ನ್ಯಾಯಾಲಯವು ಭಗತ್ ಸಿಂಗ್, ರಾಜಗುರು ಹಾಗೂ ಸುಖದೇವ್‌ಗೆ ಹಲವಾರು ಪ್ರಕರಣಗಳಲ್ಲಿ ದುಷ್ಕೃತ್ಯ ಮಾಡಿದ್ದಾರೆಂದು ಗಲ್ಲು ಶಿಕ್ಷೆಗೆ ಗುರಿಪಡಿಸಿತು. ಅದೇ ಸಮಯದಲ್ಲಿ ದೇಶಾದ್ಯಂತ ಗಾಂಧಿ-ಇರ್ವಿನ್ ಕುರಿತು, ಅವರ ಒಪ್ಪಂದದ ಬಗ್ಗೆ ಚರ್ಚೆ ನಡೆದವು. ಆಗ ಭಗತ್ ಸಿಂಗ್, ಈ ಒಪ್ಪಂದದ ಬಗ್ಗೆ ಪ್ರತಿಕ್ರಿಯಿಸುತ್ತ ''ಆ ಒಪ್ಪಂದ ಸೋಲಿನ ಸೂಚನೆಯಾಗಿದೆಯೆಂದು ನಿರಾಕರಿಸುತ್ತಿಲ್ಲ. ಹೋರಾಟದ ಮುಂದಿನ ಹಂತದಲ್ಲಿ, ಈ ಒಪ್ಪಂದ ನಿರರ್ಥಕ ಹಾಗೂ ಹಿಂಜರಿತವಾಗುವುದು'' ಎಂದು ತನ್ನ ಅಭಿಪ್ರಾಯ ಸೂಚಿಸಿದ್ದ.

ಒಂದು ಹಂತದಲ್ಲಿ, ಗಾಂಧಿ-ಇರ್ವಿನ್ ಒಪ್ಪಂದ ನಡೆಯುವಾಗ ಗಾಂಧೀಜಿ ತನ್ನ ಹಲವಾರು ಬೇಡಿಕೆಗಳ ಜೊತೆಗೆ ಭಗತ್ ಸಿಂಗ್‌ನ ಶಿಕ್ಷೆ ತಪ್ಪಿಸಬಹುದು ಎಂದು ಜನರು ನಂಬತೊಡಗಿದರು. ಈ ಒಪ್ಪಂದದಿಂದಾಗ ಭಗತ್ ಸಿಂಗ್‌ನ ಜೀವ ಉಳಿಯುವುದೆಂದು ಕಾತುರರಾಗಿದ್ದರು. ಮುಂದಿನ ಹೋರಾಟದ ಬಗ್ಗೆ ಕನಸು ಸಹ ಕಂಡಿದ್ದರು. ಆದರೆ ಅದು ನನಸಾಗಲಿಲ್ಲ.

ಭಗತ್ ಸಿಂಗ್ ಗಲ್ಲಿಗೇರಿ ವೀರಮರಣವನ್ನಪ್ಪಿದಾಗ, ಗಾಂಧೀಜಿ ಆತನನ್ನು ಏಕೆ ಉಳಿಸಿಕೊಳ್ಳಲಾಗಲಿಲ್ಲವೆಂದು, ತಮ್ಮದೇ ರೀತಿಯಲ್ಲಿ ಸ್ಪಷ್ಟನೆ ನೀಡಿದರು. ''ನನ್ನ ಸೇವೆ ನಿಮಗೆ ಬೇಕಾದಲ್ಲಿ, ನನ್ನನು ಪರಕೀಯನೆಂದು ಭಾವಿಸಬೇಡಿ. ನನ್ನಲ್ಲಿಗೆ ಬಂದು ಎಲ್ಲವನ್ನು ಚರ್ಚಿಸಿ ಅರ್ಥಮಾಡಿಕೊಳ್ಳಿ. ನನ್ನ ತತ್ವದ ಪ್ರಕಾರ ಒಬ್ಬ ಕೊಲೆಗಾರ, ಕಳ್ಳ ಅಥವಾ ಡಕಾಯಿತರನ್ನು ಸಹ ಶಿಕ್ಷಿಸುವುದು ನನಗೆ ಹಿಡಿಸದು. ಆದ್ದರಿಂದ ಭಗತ್ ಸಿಂಗನನ್ನು ರಕ್ಷಿಸಲು ನನಗೆ ಬೇಕಿರಲಿಲ್ಲವೆಂಬುವುದು ನಿರಾಧಾರವಾದದ್ದು. ಭಗತ್ ಸಿಂಗ್‌ನ ತಪ್ಪು ಅರ್ಥಮಾಡಿಕೊಳ್ಳಿ.''

''ನಾನು ಪ್ರತಿವಾದಿಯ ಸ್ಥಾನದಲ್ಲಿ ನಿಂತು ವಿವರಣೆ ನೋಡಲು ಅಪೇಕ್ಷಿಸಲಿಲ್ಲವಾದ್ದರಿಂದ, ಅದರ ವಿವರಗಳನ್ನು ಪ್ರಸ್ತಾಪಿಸಲಿಲ್ಲ ಅಷ್ಟೇ. ವೈಸರಾಯ್‌ರ ಮನವೊಲಿಸಲು ನಾನು ಸರ್ವಥಾ ಯತ್ನಿಸಿದೆ. ನನ್ನೆಲ್ಲ ಶಕ್ತಿಯನ್ನು ಪ್ರಯೋಗಿಸಿ ಅವರ ಪರಿಸ್ಥಿತಿಯ ಬಗ್ಗೆ ವಿವರಿಸಿದೆ. ಭಗತ್ ಸಿಂಗ್‌ನ ಸಂಬಂಧಿಗಳು ಕಡೆಯ ಬಾರಿಗೆ ಅವನನ್ನು ಕಾಣುವ ದಿನಕ್ಕೆ ಸರಿಯಾಗಿ ಅಂದರೆ ಮಾರ್ಚ್ ೨೩ರ ಬೆಳಿಗ್ಗೆ ವೈಸ್‌ರಾಯ್‌ರಿಗೆ ನಾನೊಂದು ಪತ್ರ ಬರೆದೆ. ನನ್ನ ಎಲ್ಲ ಭಾವನೆಗಳನ್ನು ಆ ಪತ್ರದ ಒಕ್ಕಣೆಯಲ್ಲಿ ಮನಸಾರೆ ಸೇರಿಸಿದೆ. ಆದರೆ ಅದರಿಂದ ಪ್ರಯೋಜನವಾಗಲಿಲ್ಲ. ನಾನಿನ್ನೊಂದು ಕೆಲಸ ಮಾಡಬಹುದಿತ್ತಲ್ಲವೇ ? ಆತನ ಮರಣದಂಡನೆಯನ್ನು ಜೀವಾವಧಿ ಶಿಕ್ಷೆಯಾಗಿ ಪರಿವರ್ತಿಸಬೇಕೆಂಬುದನ್ನು ಒಪ್ಪಂದದ ಒಂದು ಅಂಶವನ್ನಾಗಿ ನಮೂದಿಸಬಹುದಾಗಿತ್ತು ಎಂದೆನ್ನಬಹುದು. ಆದರೆ ಹಾಗೆ ಮಾಡಲಾಗುತ್ತಿಲ್ಲ. ಒಪ್ಪಂದದಿಂದ ಹಿಂದೆ ಸರಿಯುವುದು ಬೆದರಿಕೆ ಯುಕ್ತವಾಗುತ್ತಿರಲಿಲ್ಲ. ಈ ಪರಿವರ್ತನೆಯ ಒಪ್ಪಂದಕ್ಕೆ ಪೂರ್ವಭಾವಿ ಶರತ್ತುಗಳ ಬಗ್ಗೆ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ಒಪ್ಪಿತ್ತು. ಒಪ್ಪಂದದ ಹೊರಗೆ ಚರ್ಚೆ ಕಷ್ಟವಾಗಿತ್ತು. ಹೌದು, ವೈಸ್‌ರಾಯ್ ಉದಾರತನದಿಂದ ವರ್ತಿಸಬಹುದೆಂದು ನನ್ನ ನಿರೀಕ್ಷೆಯಾಗಿತ್ತು. ಆದರೆ ಆಗಲಿಲ್ಲ. ಅಂತೆಯೇ ಒಪ್ಪಂದ ಮುರಿಯಲು ಕಾರಣನಾದವನು ನಾನೊಬ್ಬನೇ ಏಕೆ ? ಇತರರೂ ಸಹ ಮನುಷ್ಯರು, ಪ್ರಯತ್ನ ಮಾಡಲು ಎಷ್ಟು ಶಕ್ಯವಿತ್ತೋ ಅಷ್ಟನ್ನು ಮಾಡಿದರು. ಪಂಡಿತ್ ಮಾಳವೀಯ, ಡಾ॥ ಸಪ್ರು ಸಹ ತಮ್ಮ ಶಕ್ತಿಮೀರಿ ಪ್ರಯತ್ನಿಸಿದರು. ಈ ವಿಫಲ ನಮ್ಮನ್ನೇಕೆ ಬಾಧಿಸಬೇಕು. ಸಫಲತೆ ಪರಮಾತ್ಮನ ಕೈಯಲ್ಲಿದೆ'' ಎಂದರು ಗಾಂಧೀಜಿ (ಭಗತ್ ಸಿಂಗ್ ಕೃತಿ – ಪುಟ ೧೫೬, ೧೫೭, ೧೫೮ ಲೇಖಕ : ಜಿ. ರಾಮಕೃಷ್ಣ).

ಭಗತ್ ಸಿಂಗ್ ಬದುಕಿದ್ದು ಕೇವಲ ೨೪ ವರ್ಷ. ಆದರೆ ಅವನ ಬುದ್ಧಿಶಕ್ತಿ ಹಾಗೂ ವಾಕ್‌ಚಾತುರ್ಯ ಅದ್ಭುತವಾಗಿದ್ದವು. ತನ್ನ ಕೊನೆಯ ದಿನಗಳನ್ನು, ಜೈಲಿನಲ್ಲಿ ಪುಸ್ತಕಗಳನ್ನು ಓದುತ್ತ ಕಾಲ ಕಳೆದನು. ತನ್ನನ್ನು ಗಲ್ಲಿಗೇರಿಸುವ ಹಿಂದಿನ ರಾತ್ರಿ 'ಲೆನಿನ್' ಪುಸ್ತಕ ಓದುತ್ತಿದ್ದನು. ''ಗಲ್ಲಿಗೆ ಸಮಯವಾಯಿತು'' ಎಂದು ಪೇದೆ ಕರೆಯಲು ಬಂದಾಗ, ''ಇಲ್ಲೊಬ್ಬ ಕ್ರಾಂತಿಕಾರಿ, ಇನ್ನೊಬ್ಬ ಕ್ರಾಂತಿಕಾರಿಯನ್ನು ಭೇಟಿಯಾಗುತ್ತಿದ್ದಾನೆಂದು'' ಉತ್ತರಿಸಿದ್ದನು.

೨೩ ಮಾರ್ಚ್ ೧೯೩೧ – ಭಾರತಕ್ಕೆ ಒಂದು ಕರಾಳ ದಿನ. ಅಂದು ಭಗತ್ ಸಿಂಗ್, ರಾಜಗುರು, ಸುಖದೇವ್ ಗಲ್ಲಿಗೇರಿದರು. ಮೂವರು ಇಪ್ಪತ್ತರ ಇಳಿವಯಸ್ಸಿನಲ್ಲಿ ಇದ್ದರು. ಕೊನೆಯ ನಿಮಿಷದವರೆಗೂ 'ಇಂಕ್ವಿಲಾಬ್ ಜಿಂದಾಬಾದ್' ಘೋಷಣೆಗಳನ್ನು ಕೂಗಿದರು.

ತುಟಿಯ ಮೇಲೆ ಸಿಹಿನಗುವಿನೊಂದಿಗೆ ಅಮರರಾದರು.

ರಾಹುಲ ಬೆಳಗಲಿ
ಪತ್ರಿಕೋದ್ಯಮ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ - ೫೮೦ ೦೦೩




# ಜನಪದರ ಜೀವನ್ಮುಖತೆ



ಜನಪದ ವಾಙ್ಮಯ ಜನರಿಂದಲೇ ಜನರಿಗಾಗಿ ಆದ ಸೃಷ್ಟಿ. ಅದೊಂದು ಸಾಮೂಹಿಕ ಕ್ರಿಯೆ. ಸಮಾಜದ ನೈಜ ಅಭಿವ್ಯಕ್ತಿಯಾದ್ದರಿಂದ ಅದು ಸರಳತೆ, ಪಾರದರ್ಶಕತೆ ಹಾಗೂ ಸಾರಯುಕ್ತತೆಯಿಂದ ಮೆರೆಯುತ್ತದೆ. ಸಹಜವಾಗಿಯೆ ಜನಪದ ಸಾಹಿತ್ಯದಲ್ಲಿ ಜೀವನ್ಮುಖತೆ ಹಾಸುಹೊಕ್ಕಾಗಿ ಅನಾವರಣಗೊಳ್ಳುತ್ತದೆ. ಬದುಕಿನ ಎಲ್ಲ ಸ್ತರಗಳೂ ಅಲ್ಲಿ ಮನೋಜ್ಞವಾಗಿ ಚಿತ್ರಿತವಾಗುವ ಪರಿ ಅವಲೋಕಿಸಿದಷ್ಟೂ ಸ್ವಾರಸ್ಯಕರ. ಅಕ್ಷರಜ್ಞಾನವಿಲ್ಲದ ಮಂದಿ ಅಕ್ಷರರು ನಿಬ್ಬೆರಗಾಗುವಷ್ಟು ಮಟ್ಟಿಗೆ ವಾಙ್ಮಯ ರಚಿಸಬಲ್ಲರೆನ್ನಲಿಕ್ಕೆ ಹಾಡು, ಗಾದೆ, ಒಗಟು, ಲಾವಣಿ, ಪದ, ಗೀತೆ, ಒಡಪು ಇತ್ಯಾದಿಗಿಂತ ನಿದರ್ಶನಗಳು ಬೇಕೆ ? ಪ್ರತಿದಿನ ಮುಂಜಾವಿನಲ್ಲಿ ಕೋಳಿ ಕೂಗುವ ಮುನ್ನವೆ ಎದ್ದು ಜನಪದರು ನೆನೆಯುವುದು ಎಳ್ಳು, ಜೀರಿಗೆ, ಬೆಲ್ಲ, ಬೆಳೆಯುವ ಭೂಮಿತಾಯಿಯನ್ನು ಎಂದ ಮೇಲೆ ಅವರ ಜೀವನಾಸಕ್ತಿ ಎಂತಹದ್ದೆಂದು ವ್ಯಾಖ್ಯಾನಿಸುವ ಅಗತ್ಯವಿಲ್ಲ. ಸತ್ಯ ನ್ಯಾಯನಿಷ್ಠೆ ಯಿಂದ ಬಾಳಿದವರ ಬಗ್ಗೆ ಎಲ್ಲಿಲ್ಲದ ಗೌರವ ಅವರಿಗೆ.

*ಸತ್ಯವುಳ್ಳ ಧರ್ಮರು ಸತ್ತರು ಎನದೀರಿ*
*ಸತ್ತರೆ ಲೋಕ ಉಳಿಯದು ! ಧರ್ಮರು*
*ಬಿತ್ತಿ ಹೋಗ್ಯವರೆ ಅವರೇಯ ॥*

ಎಂಬ ತ್ರಿಪದಿಯಲ್ಲಿ ಅರ್ಥಪೂರ್ಣವಾಗಿ ಬಾಳಿದವರಿಗೆ ಗೌರವಾದರ ಸಲ್ಲಿಸುವುದರ ಜೊತೆಗೆ ಅವರನ್ನು ಆದರ್ಶವನ್ನಾಗಿ ನಿರೂಪಿಸಲಾಗಿದೆ. ದೇಶಕ್ಕೆ ಸ್ವಾತಂತ್ರ್ಯ ಬಂದಿರುವುದೇನೋ ಸರಿ. ಆದರೆ ಹೆಣ್ಣು ತನಗೆಲ್ಲಿಯ ಸ್ವಾತಂತ್ರ್ಯದ ಹರ್ಷ ಎಂದು ಪ್ರಶ್ನಿಸುತ್ತಾಳೆ. ಈ ಅಳಲು ಹೀಗೆ ಬಿಂಬಿತವಾಗಿದೆ.



*ದೇಶಕ್ಕೆ ಸ್ವಾತಂತ್ರ್ಯ ಬಂದರೂ*
*ನನಗೆ ಮಾತ್ರ*
*ಬಳೆಯಿನ್ನೂ ಕೋಳವಾಗೇ ಇದೆ*
*ತಾಳಿ ಉರುಳಾಗಿ ಬಿಗಿಯುತಿದೆ*

ಇಲ್ಲಿ ಪರಂಪರೆಯನ್ನು ಹೆಣ್ಣು ಮುಖಾಮುಖಿಯಾಗಿಸಿಕೊಳ್ಳುತ್ತಿದ್ದಾಳೆಂದು ಮೇಲ್ನೋಟಕ್ಕೆ ಅನ್ನಿಸಿದರೂ ಆಕೆ ಎಂತಹ ಬಿಡುಗಡೆ ಬಯಸುತ್ತಾಳೆಂಬ ಧ್ವನಿ ವ್ಯಕ್ತಗೊಂಡಿದೆ.

ಅತ್ತೆಯ ಮನೆಯಲ್ಲಿ ಹೆಣ್ಣು ಅನುಭವಿಸುವ ಬವಣೆ ನೂರು ಬಗೆ. ತನ್ನ ಹಡೆದವ್ವನಿಗಲ್ಲದೆ ಬೇರೆ ಯಾರ ಮುಂದೆ ತಾನೆ ಆಕೆ ಆ ನೋವು ಒಪ್ಪಿಸಿಯಾಳು. ಒಂದು ಚಿತ್ರಣ ಗಮನಿಸಿ :

*ಹುಚ್ಚನಂತಹ ಗಂಡ ಹುಲಿಯಂತಹ ಮೈದುನ*
*ದತ್ತೋರೆವ್ವ ನನ್ನ ನೆಗಿಯಾಣಿ ಕೈಯಾಗ*
*ಹ್ಯಾಂಗೀಸಿ ಬರಲೆ ಹಡೆದವ್ವ*

ಒಮ್ಮೆ ಅತಿ ಚೆಲುವೆಯಾದವಳಿಗೆ ತಕ್ಕವನಲ್ಲದ ಗಂಡನ್ನು ಕೊಟ್ಟು ಮದುವೆ ಮಾಡಿದರಂತೆ. ಹಳ್ಳಿಯ ಹಿರಿಯಜ್ಜಿ ಅಯ್ಯೊ ಹೀಗೂ ಉಂಟೆ ಜೋಡಿ ಎಂದು ಮನಸ್ಸಿನಲ್ಲಿಯೆ ಕೊರಗುತ್ತಾಳೆ. ಅಜ್ಜಿ ಕೊರಗಿನ ಅಭಿವ್ಯಕ್ತಿ ಏನು ಗೊತ್ತೆ ?

*ಒಳ್ಳೆಯ ಅಡಕೇಗೆ ಎಲ್ಲಿತ್ತೋ ತರಗೆಲೆ*
*ನೆಲ್ಲಿಕಾಯ್ನಂತ ಬಟುವಾನ ಹೆಣ್ಣಿಗೆ*
*ಎಲ್ಲಿದ್ನೋ ಜೋಗಿ ಪರದೇಸಿ*

ಗಮನೀಯವೆಂದರೆ ಗ್ರಾಮೀಣ ಪರಿಸರದಲ್ಲಿ ಹೇರಳವಾಗಿ ಬಳಸಲ್ಪಡುವ ಎಲೆ, ಅಡಕೆಗಳನ್ನೇ ಇಲ್ಲಿ ರೂಪಕಗಳನ್ನಾಗಿ ಅಭಿವ್ಯಕ್ತಿಗೆ ನಿಯೋಜಿಸಿರುವುದು. ಲಗ್ನವಾದ ಹುಡುಗ ತನ್ನ ತಾಯಿ, ತಂದೆ, ಒಡಹುಟ್ಟಿದವರನ್ನು ಮರೆತಾಗ ಅವನ ಕಿರಿಯ ಸಹೋದರಿ ಅವನಿಗೆ ಬುದ್ಧಿ ಹೇಳುತ್ತಾಳಂತೆ.



*ಕೆಂಡಸಂಪಿಗೆ ಹುಡುಗ ಕಂಡಲ್ಲಿ ಮುಡಿಬ್ಯಾಡ*
*ಹೆಂಡ್ತೀಗೆ ಸಲ್ಗೀ ಕೊಡಬ್ಯಾಡ ತಮ್ಮಯ್ಯ*
*ನಾಳೆ ನಿನ್ಮಾತು ನೆಡಿಯಾವೋ*

ಇದರ ಜೊತೆಗೆ ಒಂದು ಸ್ಪಷ್ಟ ನಿಲುವೂ ಆ ಸಹೋದರಿಗಿದೆ.

*ಚಿಕ್ಕ ಹೆಂಡತಿ ಕೂಡ ಚಕ್ಕಂದವಾಡುವ*
*ಬೆಕ್ಕಿಗಿಲಿಯಂತೆ ನಡಗೂವ ಘಾರಾಯ*
*ಹೆತ್ತವರ ಗುರುತು ಮರೆತಾನು*

ಯಾವ ಸ್ತ್ರೀ ತಾನೆ ತನ್ನ ಗಂಡನ ಪರಸ್ತ್ರೀ ವ್ಯಾಮೋಹವನ್ನು ಸಹಿಸಿಯಾಳು ! ವೇಶ್ಯೆಯ ಸಹವಾಸ ಮಾಡಿದರಂತು ತನ್ನ ಪತಿಗೊದಗುವ ಪಾಡು ಎಷ್ಟು ಘನಘೋರವೆನ್ನುವುದು ಆಕೆಯ ಬಾಯಿಂದಲೆ ಕೇಳಬೇಕು.



*ಸೂಳೆಗೆ ಹೋದವನು ಏನಾದ ಎಂತಾದ*
*ಕಾಡು ನಾಯಾದ ಕಪಿಯಾದ ಆ ಮುರುವ*
*ಸೂಳೆ ಕಾಲಿಗೆ ಕೆರವಾದ*

ಸವತಿಯನ್ನು ಕೆಲ ಸಂದರ್ಭಗಳಲ್ಲಿ ಒಪ್ಪಿಕೊಂಡೇ ಬದುಕನ್ನು ನೀಗಬೇಕಾಗುತ್ತದೆ. ಆಗಲೂ ಆಕೆಯ ಅಭಿವ್ಯಕ್ತಿಯಲ್ಲಿ ವಿನೋದ ಮೆರೆಯುವುದು ನಿಜಕ್ಕೂ ಅತಿಶಯವೆ.

*ಸಾವಿರ ಕೊಟ್ಟರೂ ಸವತಿಯ ಮನಿಬ್ಯಾಡ*
*ಸಾವಿರದ ಮೇಲ್ಐನೂರು ಕೊಟ್ಟರೂ*
*ಮಲಮಕ್ಕಳಿರುವ ಮನಿ ಬ್ಯಾಡ*

ಇನ್ನು ಗಾದೆಗಳಂತು ಜನಪದ ಸಾಹಿತ್ಯದ ಅವಿಭಾಜ್ಯ ಅಂಗ. ತಮ್ಮ ಮೊನಚು, ಮಾರ್ಗದರ್ಶಿತ್ವ, ಸಂಕ್ಷಿಪ್ತತೆ, ಈ ಗುಣಗಳಿಂದ ಅವು ಜನ ಮಾನಸದಲ್ಲಿ ನಿರಂತರ ಚಲಾವಣೆಯಲ್ಲಿರುವ ಅಮೂಲ್ಯ ಮಾತಿನ ಗುಳಿಗೆಗಳೆ ಅಲ್ಲವೆ ? ಅದಕ್ಕಾಗಿಯೆ ವೇದ ಸುಳ್ಳಾದರೂ ಗಾದೆ ಸುಳ್ಳಾಗದೆಂಬ ಆಡುನುಡಿಯೇ ಹುಟ್ಟಿಕೊಂಡಿರುವುದು ! ಹೆಂಡತಿಗೆ ಹೆದರುವ ಗಂಡನನ್ನು ಗಾದೆಯೊಂದು ಹೀಗೆ ಲೇವಡಿ ಮಾಡುತ್ತದೆ. ''*ಸಾವಿರ ಕುದುರೆಯ ಸರದಾರ ಮನೆಯ ಹೆಂಡತಿಗೆ ಪಿಂಜಾರ*'', ಅಂತೆಯೇ '*ಕಡ್ಡಿ ಇದ್ದುದನ್ನು ಗುಡ್ಡ ಮಾಡಿದರು*' ಎಂಬ ಗಾದೆ ಅತಿರಂಜಕತೆಯನ್ನು '*ಕೂಳಿಗೆ ಕೇಡು ಭೂಮಿಗೆ ಭಾರ*' ಎಂಬ ಗಾದೆ ಅಪ್ರಯೋಜಕ ಮಂದಿಯನ್ನು ಕುರಿತದ್ದು. ದಾನಿಗಳಾದವರಿಗೆ ಯಾವಾಗಲೂ ಕಾಟ ಹೆಚ್ಚಂತೆ. ಅದಕ್ಕಾಗಿಯೆ '*ಕಾಯಿ ಇರೊ ಮರಕ್ಕೇ ಕಲ್ಲು*' ಎಂಬ ಗಾದೆ. ಗಾದೆಗಳಲ್ಲಡಗಿರುವ ವ್ಯಾವಹಾರಿಕ ಪ್ರಜ್ಞೆ, ಅನುಭವ, ಅರ್ಥಗೌರವ ಅಸಾಮಾನ್ಯ. '*ಊರಿನ ಬಡತನ ಅಗಸನಿಗೆ ಗೊತ್ತು, ಊರಿನ ಸಿರಿತನ ಅಕ್ಕಸಾಲಿಗನಿಗೆ ಗೊತ್ತು*' ಎಂಬ ಗಾದೆ ಇಡೀ ಒಂದು ಪ್ರಾಂತ್ಯದ ಅರ್ಥ ವ್ಯವಸ್ಥೆಗೆ ಹಿಡಿದ ಕನ್ನಡಿ. ಜನಪದ ವಾಙ್ಮಯದಲ್ಲಿನ ಉಪಮೆಗಳೂ ಹಾಗೆಯೆ, ಅತ್ಯಂತ ಮಾರ್ಮಿಕ, ಪ್ರಭಾವಶಾಲಿ. ಎಷ್ಟು ತಿಂದರೂ ತೃಪ್ತಿಕಾಣದ ಉದರವನ್ನು '*ಬಕಾಸುರನ ಹೊಟ್ಟೆ*' ಎಂದೂ ಭಯಪಡುವುದನ್ನು 'ಬಾಲ ಮುದುರಿಕೊಳ್ಳುವುದು' ಎಂದೂ ಹೋಲಿಸುವುದು ಇದಕ್ಕೆ ನಿದರ್ಶನಗಳು. ಕಟ್ಟು ಕಥೆಯನ್ನು ಆಂಗ್ಲಭಾಷೆಯಲ್ಲಿನ ಗಾದೆಯೊಂದಕ್ಕೆ ಸಂವಾದಿಯಾಗಿ '*ಕಾಗಕ್ಕ ಗುಬ್ಬಕ್ಕನ ಕಥೆ*' ಎನ್ನಲಾಗುತ್ತದೆ.

ಒಗಟುಗಳು ವಸ್ತು ವಿಶೇಷವನ್ನು ಅರಿಯಲು ಮಿದುಳನ್ನು ಚುರುಕಾಗಿಸಿಕೊಳ್ಳಲು ಪೂರಕ. ''ಮನೆಗೆ ಬಂದವರೆಲ್ಲ ಅಜ್ಜಿ ಬಜ್ಜಿ' (ರುಬ್ಬುಕಲ್ಲು), 'ಬತ್ತಕ್ಕೆ ಮೂರು ಮುತ್ತು' (ಇಬ್ಬನಿ), 'ತಂಗ್ತಿ ಗಿಡದಲ್ಲಿ ಲಿಂಗಣ್ಣ ಕುಂತವ್ನೆ' (ಮೊಲ) ಮುಂತಾದವು ಉದಾಹರಣೆಗಳು. ಹೀಗೆ ಜನಪದ ವಾಙ್ಮಯ ಜೀವನ ಸತ್ಯವನ್ನು ಸದಾ ಬಿಂಬಿಸುತ್ತಾ ನಮ್ಮನ್ನು ಲವಲವಿಕೆಯಿಂದ ಪ್ರಾಮಾಣಿಕವಾದ ಮೌಲ್ಯಬದ್ಧ ಬದುಕು ಸಾಗಿಸಲು ಪ್ರೇರೇಪಿಸುತ್ತದೆ.

**ಬಂಡಿಗನವಿಲೆ ಭಗವಾನ್**
ಕೇರಾಫ್ : ಬಿ. ಎಸ್. ಭಗವಾನ್, ಉಪನ್ಯಾಸಕರು,
ಕೊಂಗಾಡಿಯಪ್ಪ ಪಿ.ಯು.ಕಾಲೇಜ್, ದೊಡ್ಡಬಳ್ಳಾಪುರ - ೫೬೧ ೨೦೩



**HOSATHU** Kannada Monthly / March 2004 Rs. 10

RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna